# ಚಿತ್ತಾಪುರ ತಾಲೂಕಿನ ಶಾಸನಗಳು - ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್. ಪದವಿಗಾಗಿ ಸಾದರ ಪಡಿಸಿದ ಸಂಪ್ರಬಂಧ)

ಸಂಶೋಧಕಿ

ನಿವೇದಿತಾ ಎಸ್. ಸ್ವಾಮಿ

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರವಾಚಕರು, ಶಾಸನಶಾಸ್ತ್ರ ವಿಭಾಗ



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ

ವಿದ್ಯಾರಣ್ಯ - ೫೮೩ ೨೭೬

೨೦೦೭

# ಚಿತ್ತಾಪುರ ತಾಲೂಕಿನ ಶಾಸನಗಳು–ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್. ಪದವಿಗಾಗಿ ಸಾದರ ಪಡಿಸಿದ ಸಂಪ್ರಬಂಧ)



ಸಂಶೋಧಕರು
ನಿವೇದಿತಾ ಎಸ್. ಸ್ವಾಮಿ

ಮಾರ್ಗದರ್ಶಕರು
ಡಾ. ಕಲವೀರ ಮನ್ವಾಚಾರ
ಪ್ರವಾಚಕರು, ಶಾಸನಶಾಸ್ತ್ರ ವಿಭಾಗ




ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೦೬–೦೭

# ಪ್ರಮಾಣ ಪತ್ರ

'ಚಿತ್ತಾಪುರ ತಾಲೂಕಿನ ಶಾಸನಗಳು-ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಕಲವೀರ ಮನ್ವಚಾರ ಪ್ರವಾಚಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ, ಸಮಾಜ ವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: 30/7/07

ನಿವೇದಿತಾ ಎಸ್.ಸ್ವಾಮಿ
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ

# ಧೃಢೀಕರಣ ಪತ್ರ

ನಿವೇದಿತಾ ಎಸ್. ಸ್ವಾಮಿ ಇವರು 'ಚಿತ್ತಾಪುರ ತಾಲೂಕಿನ ಶಾಸನಗಳು-ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧದ ವಿಷಯವನ್ನು ಇದುವರೆಗೆ ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

ಡಾ. ಕಲವೀರ ಮನ್ವಾಚಾರ
ಮಾರ್ಗದರ್ಶಕರು
ಪ್ರವಾಚಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ: 03.08.07

## ಪರಿವಿಡಿ

## ಸಂಕೇತಾಕ್ಷರಗಳು

1. APGAS - Andhra Pradesh Government Archaeological Series.
2. BKI - Bombay Karnataka Inscriptions.
3. EC - Epigraphia Carnatica.
4. EI - Epigraphia Indica.
5. HC - Hyderabad Carnatica.
6. IA - Indian Antiquary
7. JISI - Jainism in South India and Some Jaina Epigraphas
8. KI - Karnataka Inscriptions.
9. SII - South Indian Inscriptions.

**ಸ್ವರೂಪ:**

ನಮ್ಮ ಸಂಸ್ಕೃತಿಯ ಮೂಲ ಬೇರುಗಳು ಇಂದಿಗೂ ಉಳಿದು ಬಂದಿರುವುದು ಹಳ್ಳಿಗಳಲ್ಲಿ ಎಂದರೆ ತಪ್ಪಾಗಲಾರದು. ಜನಪದ ಸಾಹಿತ್ಯ, ಐತಿಹ್ಯಗಳು, ಶಾಸನಗಳು, ದೇವಾಲಯಗಳು, ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳು ಇದಕ್ಕೆ ಸಾಕ್ಷಿಯಾಗಿವೆ. ಆದರೆ ಇವು ಇಂದು ಕಾಲನ ದವಡೆಗೆ ಸಿಕ್ಕು ಮರೆಯಾಗುತ್ತಲಿವೆ. ಇತಿಹಾಸದ ಜೊತೆಗೆ ಅನೇಕ ದಂತ ಕತೆಗಳು ಬೆರೆತುಕೊಂಡು ನಿಜ ಇತಿಹಾಸ ಮರೆಯಾಗುತ್ತಲಿದೆ. ಇಂತಹ ಒಂದು ತಾಲೂಕು ಕಲಬುರ್ಗಿ ಜಿಲ್ಲೆಯ ಚಿತ್ತಾಪುರ. ಇಲ್ಲಿ ಇಂದಿಗೂ ಪ್ರಾಚೀನ ಸಂಸ್ಕೃತಿಯ ಕುರುಹುಗಳಾದ ಶಾಸನಗಳು, ದೇವಾಲಯಗಳು ಮತ್ತು ಆಚರಣೆಗಳು, ವಿಧಿ-ವಿಧಾನಗಳು ಕಂಡು ಬರುತ್ತವೆ. ಇಲ್ಲಿ ನೂರಕ್ಕೂ ಹೆಚ್ಚು ಶಾಸನಗಳು, ದೇವಾಲಯಗಳು ದೊರಕಿವೆ. ದೊರೆತ ಶಾಸನಗಳ ಅಧ್ಯಯನ ಕುರಿತು ಪ್ರಸ್ತುತ ಪ್ರಬಂಧದಲ್ಲಿ ಕೈಗೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ:**

ಇತಿಹಾಸದ ಅಧ್ಯಯನವು ಇಂದು ರಾಜ ಮಹಾರಾಜರ ಅಧ್ಯಯನವಾಗದೆ, ಜನಸಮಾನ್ಯರ ಬದುಕಿನ ಅಧ್ಯಯನವಾಗಿ ವಿಸ್ತೃತಗೊಳ್ಳತೊಡಗಿದೆ. ಇದರಿಂದಾಗಿ ಅರಸರ ಇತಿಹಾಸವು ಗೌಣವಾಗಿ, ಶ್ರೀಸಾಮಾನ್ಯರ ಬದುಕಿಗೆ ಅವರ ಇತಿಹಾಸಕ್ಕೆ ಮಹತ್ವ ದೊರಕಿದೆ. ಕರ್ನಾಟಕದಲ್ಲಿ ಇಂತಹ ಅಧ್ಯಯನಗಳು ಹೆಚ್ಚಾಗಿ ಕಂಡು ಬರುತ್ತಿದ್ದು, ಅವುಗಳ ಪ್ರೇರಣೆ ಈ ಅಧ್ಯಯನದ ಹಿಂದಿದೆಯೆಂದರೆ ತಪ್ಪಾಗದು. ಪ್ರಸ್ತುತ ಅಧ್ಯಯನವು, ಶಾಸನಗಳ ಹಿನ್ನೆಲೆಯಲ್ಲಿ ಚಿತ್ತಾಪುರ ತಾಲೂಕಿನ ಶಾಸನಗಳು ಸಾಂಸ್ಕೃತಿಕ ಅಧ್ಯಯನ ಮಾಡುವ ಪ್ರಯತ್ನವಾಗಿದೆ.

ಕರ್ನಾಟಕದಲ್ಲಿ ಶಾಸನಗಳ ಒಂದು ಸುವ್ಯವಸ್ಥಿವಾದ ಅಧ್ಯಯನ ಆರಂಭವಾದದ್ದು ಸರ್.ವಾಲ್ಟೆರ್ ಇಲಿಯಟ್‌ರಿಂದ ಎನ್ನಬಹುದು. ಇವರ ಕಾಲದಿಂದ ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸಗಳ ಅಧ್ಯಯನದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು. ಕರ್ನಲ್ ಮೆಕೆಂಝಿಯ ಸಂಗ್ರಹದಲ್ಲಿ ಕಲಬುರ್ಗಿ ಜಿಲ್ಲೆಯ ಮೂವತ್ತಾರು ಶಾಸನಗಳು ಒಳಗೊಂಡಿವೆ. ಹೀಗೆ ಜೆ.ಎಫ್.ಫ್ಲೀಟ್, ಎಲ್.ಡಿ.ಬಾರ್ನೆಟ್ ರಂತಹ ವಿದೇಶಿ ವಿದ್ವಾಂಸರಿಂದಲೇ ಈ ಜಿಲ್ಲೆಯ ಶಾಸನಾಧ್ಯಯನ ಪ್ರಾರಂಭಗೊಂಡಿತು.

ಈ ಭಾಗದ ದೇಶೀಯ ವಿದ್ವಾಂಸರಲ್ಲಿ ಪಿ.ಬಿ.ದೇಸಾಯಿಯವರು "Jainism in South India and some Jaina Epigraphs"ನಲ್ಲಿ ಕಲಬುರ್ಗಿ ಜಿಲ್ಲೆಯ ಹದಿನೆಳು ಶಾಸನಗಳನ್ನು ಪ್ರಕಟಿಸಿದ್ದಾರೆ. ಪ್ಹಿ.ಶಿವಾನಂದರವರು "ಹೈದ್ರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು" ಎಂಬ ಪುಸ್ತಕದಲ್ಲಿ ಎಂಬತ್ತೊಂಬತ್ತು ಶಾಸನಗಳನ್ನು ಪ್ರಕಟಿಸಿದ್ದಾರೆ. ಇತ್ತೀಚೆಗೆ ಡಿ.ಕೆ.ಶರ್ಮಾ ಮತ್ತು ಜೆ.ವರಪ್ರಸಾದ ರಾವ್ ಅವರು "Early Brahmi inscription from Sannati" ಎಂಬ ಪುಸ್ತಕದಲ್ಲಿ ಎಪ್ಪತ್ತೊಂಬತ್ತು ಶಾಸನಗಳನ್ನು ಹೊರತಂದಿದ್ದಾರೆ. "ಕಲಬುರ್ಗಿ ಜಿಲ್ಲೆಯ ಶಾಸನಗಳು". ಎಂಬ ಪುಸ್ತಕದಲ್ಲಿ ಹನುಮಾಕ್ಷಿ ಗೋಗಿಯವರು ಚಿತ್ತಾಪುರ ತಾಲೂಕಿನ ನಲವತ್ತೊಂದು ಶಾಸನಗಳನ್ನು ಪ್ರಕಟಿಸಿದ್ದಾರೆ.

ಹೀಗೆ ಮೇಲೆ ತಿಳಿಸಿದ ಕೃತಿಗಳಾಗಲಿ, ಇಲ್ಲಿಯ ಶಾಸನಗಳು, ದೇವಾಲಯಗಳ ಬಗ್ಗೆ ವ್ಯಾಪಕವಾದ ಅಧ್ಯಯನ ನಡೆದಿಲ್ಲ ಇಲ್ಲಿ ದೊರಕಿರುವ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ, ಪೂರಕವಾಗಿ ಬಳಸಿಕೊಂಡು, ಅವುಗಳನ್ನು ಒಟ್ಟುಗೂಡಿಸಿಕೊಂಡು ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ಈ ತಾಲೂಕಿನಲ್ಲಿ ನೂರಕ್ಕೂ ಹೆಚ್ಚು ಶಾಸನಗಳು ಕಂಡು ಬರುತ್ತವೆ. ದಾನ ಶಾಸನಗಳ ಜೊತೆಗೆ ಕೆಲವೊಂದು ದೇವಾಲಯಗಳ ಉಲ್ಲೇಖ ಕಂಡು ಬರುತ್ತವೆ. ಆದರೆ ಚಿತ್ತಾಪುರ ತಾಲೂಕಿನ ಶಾಸನಗಳಲ್ಲಿ ಬಹುಪಾಲು ಶಾಸನಗಳು ದಾನದ ವಿಷಯವನ್ನೇ ಉಲ್ಲೇಖಿಸುತ್ತವೆ. ಈ ದಾನ ಶಾಸನಗಳ ಜೊತೆಗೆ ಅಲ್ಲಿಯ ದೇವಾಲಯಗಳು, ಸ್ಮಾರಕಗಳು, ಶಾಸನಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಕಲ್ಯಾಣ ಚಾಳುಕ್ಯ ಮತ್ತು ಕಲಚೂರಿಗಳ ಕಾಲದಲ್ಲಿ ರಚನೆಗೊಂಡ ಅನೇಕ ಶಾಸನಗಳು ಇಂದು ಊರ ಜನರ ನಿರ್ಲಕ್ಷ್ಯ ಹಾಗೂ ಅಸಡ್ಡೆಯಿಂದಾಗಿ ಮನೆಯ ತಳಪಾಯದ ಕಲ್ಲುಗಳಾಗಿ, ಗೋಡೆಯ ಕಲ್ಲುಗಳಾಗಿ ಹಾಗೂ ಅಥವಾ ಬೀದಿಗೆ ಹಾಸುವ ಕಲ್ಲುಗಳಾಗಿವೆ. ಇನ್ನು ಬಹಳಷ್ಟು ದೇವಾಲಯಗಳು ಹಾಳಾಗಿ ಇಂದು ಕಾಣದಂತಾಗಿವೆ. ಮಿಕ್ಕವು ಪ್ರಕೃತಿಯ ವಿಕೋಪಕ್ಕೆ ಸಿಕ್ಕು ಕಾಲಗರ್ಭದಲ್ಲಿ ಅವಿತುಕೊಂಡು ಹೋಗಿವೆ. ಹೀಗಿದ್ದೂ ಕೂಡ ಗ್ರಾಮದಲ್ಲಿ ಕೆಲವು ದೇವಾಲಯಗಳು, ಶಾಸನಗಳು, ಮಠಗಳು, ಮಸೀದಿಗಳು, ಕೋಟೆ, ಬಾವಿ, ಊರ ಅಗಸಿಗಳು ಮುಂತಾದವುಗಳು ಇಂದಿಗೂ ತಮ್ಮ ಅಸ್ಥಿತ್ವವನ್ನು ಉಳಿಸಿಕೊಂಡು ನೋಡುಗರ ಮನ ಗೆದ್ದಿವೆ.

ಈ ಭಾಗದಲ್ಲಿನ ಅಧ್ಯಯನ ಕಾರ್ಯ ಇನ್ನು ಹೆಚ್ಚಿನ ಪ್ರಮಾಣದಲ್ಲಿ ಆಗಬೇಕಾಗಿದೆ. ಲೇಖನ ಮತ್ತು ಗ್ರಂಥಗಳು ವಿಫುಲವಾಗಿ ಬರಬೇಕಾಗಿದೆ. ಇಲ್ಲಿನ ಸ್ಮಾರಕಗಳ ರಕ್ಷಣೆ ನಡೆಯಬೇಕಾಗಿದೆ. ಒಟ್ಟಾರೆಯಾಗಿ ಚಿತ್ತಾಪುರಿನ ಬಗ್ಗೆ ಏನೇ ಅಧ್ಯಯನ ನಡೆದಿದ್ದರೂ ಅವುಗಳಲ್ಲಿನ ಕೆಲವೇ ಅಂಶಗಳು ಮಾತ್ರ ಉಲ್ಲೇಖಿಗೊಂಡಿವೆ. ಈ ಪ್ರಬಂಧದ ವಿಸ್ತಾರವಾದ ಅಧ್ಯಯನಕ್ಕೆ ಆಕರ ಗ್ರಂಥಗಳ ಕೊರತೆ ಉಂಟಾಗಿದೆ. ಶಾಸನಗಳಲ್ಲಿಯ ವಿಷಯವನ್ನು ಮೊದಲು ವಿವರವಾದ ಅಧ್ಯಯನ ಮಾಡಲಾಗಿದೆ. ತಾಲೂಕಿನಲ್ಲಿ ದೊರೆತಿರುವ ಒಟ್ಟು ನಲವತ್ತೊಂದು ಶಾಸನಗಳಲ್ಲಿ ಕೇವಲ ಏಳು ಗ್ರಾಮಗಳಾದ ಸನ್ನತಿ, ದಿಗ್ಗಾಂವಿ, ನಾಗಾಯಿ, ಇಂಗಳಗಿ, ಕಾಳಗಿ, ತೆಂಗಳಿ ಮತ್ತು ಮರತೂರಗಳನ್ನು ಮಾತ್ರ ಪ್ರಬಂಧದಲ್ಲಿ ಅಳವಡಿಸಿಕೊಳ್ಳಲಾಗಿದೆ. ಶಾಸನಗಳ ವಿಷಯ ಅವುಗಳಲ್ಲಿ ಕಂಡು ಬರುವ ಸಾಂಸ್ಕೃತಿಕ ವೈವಿದ್ಯತೆ ಮೊದಲಾದ ಅಂಶಗಳನ್ನು ವಿವರವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕವಾಗಿ ಇಲ್ಲಿ ಚರ್ಚಿಸಲಾಗಿದೆ.

ಒಟ್ಟಿನಲ್ಲಿ ಒಂದು ಗ್ರಾಮದಲ್ಲಿ ದೊರೆಯುವ ಶಾಸನಗಳು, ದೇವಾಲಯಗಳು ಮತ್ತು ಸ್ಮಾರಕಗಳನ್ನು ಅಧ್ಯಯನ ಮಾಡುವುದರ ಮೂಲಕ ಚಿತ್ತಾಪುರಿನ ಪರಂಪರೆ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಿಸಲಾಗಿದೆ. ಐತಿಹಾಸಿಕ ಹಿನ್ನಲೆಯೊಂದಿಗೆ ನಡೆಸಲಾದ ಈ ಅಧ್ಯಯನದಲ್ಲಿ ಒಟ್ಟು ಆರು ಅಧ್ಯಯನಗಳು ಒಳಗೊಂಡಿವೆ. ದೊರಕುವ ಎಲ್ಲ ಆಕರಗಳನ್ನು ಸಮರ್ಥವಾಗಿ ಬಳಸಿಕೊಂಡು ಉತ್ತರ ಕರ್ನಾಟಕದ ಒಂದು ಸಾಂಸ್ಕೃತಿಕ ತಾಲೂಕಾದ ಚಿತ್ತಾಪುರ ವಿವಿಧ ಮಗ್ಗಲುಗಳಿಂದ ನೋಡಲು ಪ್ರಯತ್ನಿಸಿರುವ ಪ್ರಬಂಧ ಇದಾಗಿದೆ.

ವ್ಯಾಪ್ತಿ:

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಚಿತ್ತಾಪುರ ತಾಲೂಕಿಗೆ ಸೀಮಿತಗೊಳಿಸಲಾಗಿದೆ. ಇಲ್ಲಿ ನಡೆದ ಸಂಶೋಧನೆಗಳಿಂದ ಇತಿಹಾಸದ ಉಳಿದ ಮಗ್ಗಲುಗಳ ಬಗ್ಗೆ ಅಧ್ಯಯನಗಳು ಕಡಿಮೆಯಿರುವುದು ಗಮನಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಇತಿಹಾಸದ ವಿವಿಧ ಮಗ್ಗಲುಗಳನ್ನು ಅಧ್ಯಯನದ ವಿಮರ್ಶೆಗೆ ಒಳಪಡಿಸುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲು ಪ್ರಯತ್ನಿಸಲಾಗಿದೆ. ಆದ್ದರಿಂದ ಈ ತಾಲೂಕಿನ ಒಟ್ಟು ಶಾಸನಗಳಲ್ಲಿ ಕೆಲವೇ ಶಾಸನಗಳು ಸಾಂಸ್ಕೃತಿಕವಾಗಿ ಅಧ್ಯಯನಕ್ಕೆ ಅಳವಡಿಸಿಕೊಂಡು ವ್ಯಾಪ್ತಿಗೆ ತರಲಾಗಿದೆ. ಕ್ರಿಪೂ. ೨-೩ನೇ ಶತಮಾನದಿಂದ ಕ್ರಿ.ಶ.೧೧೨೭ರ (ಕ್ರಿ.ಶ.೧೯೮೮ ರವರೆಗೆ ಮತ್ತು ಕಲಚೂರಿಗಳು) ಕಾಲಾವಧಿಯಾದರು ತಾಲೂಕಿನ ಎಲ್ಲ ಶಾಸನಗಳು ನನ್ನ ಅಧ್ಯಯನದಲ್ಲಿ ಒಳಪಟ್ಟಿರುವುದಿಲ್ಲ. ಹಾಗಾಗಿ ಆಯ್ಕೆ ಮಾಡಿದ ಶಾಸನಗಳ ಸಾಂಸ್ಕೃತಿಕ ಅಂಶಗಳನ್ನು ಮಾತ್ರ ಸೀಮಿತಗೊಳಿಸಿಕೊಂಡು ಪ್ರಸ್ತುತ ಅಧ್ಯಯನ ಮಾಡಲಾಗಿದೆ. ಈ ಅವಧಿಯ ಶಾಸನಗಳಲ್ಲಿ ಕಂಡುಬಂದ ಸಾಂಸ್ಕೃತಿಕ ಸ್ವರೂಪವನ್ನು ಹಂತ ಹಂತವಾಗಿ ವಿವರಿಸಲಾಗಿದೆ. ಎಲ್ಲ ಅಂಶಗಳನ್ನು ಚಿತ್ತಾಪುರ ತಾಲೂಕಿನ ವ್ಯಾಪ್ತಿಯಲ್ಲಿ ಚರ್ಚಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನದಲ್ಲಿ ಒಳಗೊಂಡಿದೆ.

ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕರಗಳಾಗಿ ಶಾಸನಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಆರ್.ಎಸ್.ಪಂಚಮುಖಿ ಅವರ 'ಕರ್ನಾಟಕ ಇತಿಹಾಸ ಸಂ.೧' (೧೯೬೭) ಆರ್.ಎಸ್.ಶರ್ಮ ಅವರ 'ಪ್ರಾಚೀನ ಭಾರತ' (೧೯೯೭), ಪ್ರೊ.ಸಿ.ಆರ್.ಗೋವಿಂದರಾಜು ಅವರ 'ಇತಿಹಾಸ' (೨೦೦೪), ಪ್ರೊ.ಬಿ.ಷೇಕಅಲಿ ಅವರ 'ಕರ್ನಾಟಕ ಚರಿತ್ರೆ ಸಂ.೧' (೧೯೯೭), ಪ್ರೊ. ಲಕ್ಷ್ಮಣ ತೆಲಗಾವಿ ಅವರ 'ಮೌರ್ಯ ಮತ್ತು ಶಾತಮಾಹನ ಯುಗ' (೨೦೦೪) ಪ್ರೊ.ಜಿ.ಆರ್.ಸ್ವಾಮಯ್ಯ ಅವರ 'ಕರ್ನಾಟಕ ಸಂಕ್ಷಿಪ್ತ ಚರಿತ್ರೆ' (೨೦೦೧) ಪ್ರೊ. ಲಕ್ಷ್ಮಣ ತೆಲಗಾವಿ ಅವರ 'ಸಂಶೋಧನಾ' (೧೯೯೧) ಎಂ.ವಿ.ಕೃಷ್ಣರಾವ ಅವರ 'ಕರ್ನಾಟಕ ಇತಿಹಾಸ ದರ್ಶನ' (೧೯೭೦), ಎಂ.ಬಿ.ಪಾಟೀಲ ಅವರ 'ಗುಲ್ಬರ್ಗಾ ಜಿಲ್ಲಾ ಗ್ಯಾಸೆಟಿಯರ್' (೧೯೯೭), ಪ್ರೊ.ಎಸ್.ಬಿ.ಸಂಕನಗೌಡ ಅವರ 'ಕರ್ನಾಟಕದ ಇತಿಹಾಸ' (೧೯೮೧), ಆರ್.ಆರ್. ದಿವಾಕರ ಅವರ 'ಕರ್ನಾಟಕ ಪರಂಪರೆ I' (೧೯೭೦), ಹೆಚ್.ಎಂ.ಬಸವರಾಜು ಅವರ 'ದಕ್ಷಿಣ ಭಾರತದ ಇತಿಹಾಸ' (೨೦೦೫), ಹನುಮಾಕ್ಷಿ ಗೋಗಿ ಅವರ 'ಕಲಬುರ್ಗಿ ಜಿಲ್ಲೆಯ ಶಾಸನಗಳು' (೧೯೯೫), ಮುಂತಾದ ಗ್ರಂಥಗಳ ಅಧ್ಯಯನ ಮಾಡಲಾಗಿದೆ.

ಈ ಎಲ್ಲ ಕೃತಿಗಳ ಜೊತೆಗೆ ಎಂ.ಫಿಲ್ ಮತ್ತು ಪಿಹೆಚ್.ಡಿ. ಮಹಾ ಪ್ರಬಂಧಗಳಾದ ಡಾ. ಶ್ರೀಶೈಲ ಬಿರಾದಾರ ಅವರ Jainisam in Gulbarga district, ಭಾರತಿ ಅವರ 'ರಾಷ್ಟ್ರಕೂಟರ ಶಾಸನಗಳು ಸಾಂಸ್ಕೃತಿಕ ಅಧ್ಯಯನ,' ಶುಭಾ ಅವರ 'ಸುರಪುರ: ವಿಮೋಚನಾ ಹೋರಾಟ', ಮಹೇಶ ಅವರ 'ಗಬ್ಬೂರ ಶಾಸನಗಳು ಮತ್ತು ದೇವಾಲಯಗಳು', ಶಿವಲೀಲಾ ಅವರ 'ಹಂಪಿ ಶಾಸನಗಳು ಮತ್ತು ದೇವಾಲಯಗಳು' ಎಂಬ ಪ್ರಬಂಧಗಳ ಅವಲೋಕನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

## ಪ್ರಸ್ತಾವನೆ

ಇತಿಹಾಸ ಗತಕಾಲದ ಮಾನವ ಜನಾಂಗದ ಅಧ್ಯಯನಕ್ಕೆ ಮಾತ್ರವೇ ಸೀಮಿತವಾಗಿಲ್ಲ. ಅದು ಮಾನವನ ಕಾರ್ಯ ಚಟುವಟಿಕೆಗಳನ್ನು ಅಧ್ಯಯನ ಮಾಡುವುದಾಗಿದೆ. ಪ್ರಾಚೀನ ಕಾಲದ ಮಾನವನ ಅನುಭವಗಳನ್ನು ನಾವು ಅರಿಯುವುದು ಇತಿಹಾಸವೊಂದರಿಂದಲೇ. ಅಂದರೆ ನಮ್ಮ ಪೂರ್ವಿಕರ ಜಯಾಪಜಯಗಳನ್ನು ತಿಳಿಯಲು ಇರುವ ಮಾಧ್ಯಮವೆಂದರೆ ಇತಿಹಾಸವೊಂದೇ. ಭೂತಕಾಲದ ಈ ಜಯಾಪಜಯಗಳನ್ನು ಅನುಭವದ ಮೇಲೆ ಮಾನವ ತನ್ನ ಭವಿಷ್ಯವನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಇತಿಹಾಸ ನೆರವಾಗುವುದು. ಈ ದೃಷ್ಟಿಯಲ್ಲಿಯೇ ಇತಿಹಾಸವನ್ನು ಭೂತ ಮತ್ತು ವರ್ತಮಾನ ಕಾಲದ ಕೊಂಡಿಯಾಗಿದ್ದು ಮತ್ತು ಭವಿಷ್ಯತ್ತಿಗೆ ಪೂರಕವಾಗಿದೆ.

ಶತಮಾನಗಳ ಇತಿಹಾಸದಲ್ಲಿ ಚಿತ್ತಾಪುರ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟು ವಿಭಿನ್ನ ಸಂಸ್ಕೃತಿಯನ್ನು ಪರಿಚಯಿಸಿ ಕೊಟ್ಟಿದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಕರ್ನಾಟಕವು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಬಿಂದುವಾಗಿರುವಂತೆ ರಾಜಕೀಯ ಇತಿಹಾಸದಲ್ಲಿಯೂ ತನ್ನ ಹಿರಿಮೆಯನ್ನು ಮೆರೆದಿದೆ. ಕರ್ನಾಟಕವನ್ನಾಳಿದ ಅರಸರಾದ ಮೌರ್ಯರು, ಶಾತವಾಹನರು, ಪಲ್ಲವರು, ಬಾದಾಮಿ ಚಲುಕ್ಯರು, ರಾಷ್ಟ್ರಕೂಟರವರೆಗಿನ ಚಿತ್ತಾಪುರಿನ ಇತಿಹಾಸವು ಅಸ್ಪಷ್ಟವಾಗಿದೆ. ಇವರ ಕಾಲದ ಶಾಸನಗಳು ದೊರೆತಿಲ್ಲ. ಆದ್ದರಿಂದ ಈ ಕಾಲಘಟ್ಟಗಳಲ್ಲಿ ಈ ತಾಲೂಕಿನ ಇತಿಹಾಸ ಗೌಣವಾಗಿದ್ದು ಮುಂದೆ ಕಲ್ಯಾಣ ಚಾಳುಕ್ಯರ ಮತ್ತು ಕಲಚೂರಿಗಳ ಕಾಲದಲ್ಲಿ ಮತ್ತೆ ಇತಿಹಾಸಕ್ಕೆ ಹೆಚ್ಚಿನ ಚಾಲನೆ ದೊರೆಯುತ್ತದೆ.

ರಾಷ್ಟ್ರಕೂಟರನ್ನು ಸೋಲಿಸಿ ಉತ್ತರಾಧಿಕಾರಿಗಳಾಗಿ ಬಂದ ಕಲ್ಯಾಣ ಚಾಳುಕ್ಯರು ಕ್ರಿ.ಶ.೯೭೩ ರಿಂದ ಕ್ರಿ.ಶ.೧೧೮೯ರವರೆಗೆ ಆಳ್ವಿಕೆ ಮಾಡಿದ್ದರು. ಕಲ್ಯಾಣನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಈಗಿನ ಬೀದರ ಜಿಲ್ಲೆಯ ಬಸವಕಲ್ಯಾಣದಿಂದ ಆಳುತ್ತಿದ್ದರು. 'ವರಾಹ' ಇವರ ಲಾಂಛನವಾಗಿತ್ತು. ಈ ವಂಶದ ಮೊದಲ ಅರಸನಾಗಿ ಇಮ್ಮಡಿ ತೈಲಪ ಕ್ರಿ.ಶ.೯೭೩-೯೯೭ರವರೆಗೆ, ಈತನ ಮಗ ಸತ್ಯಾಶ್ರಯ ಕ್ರಿ.ಶ.೯೯೭-೧೦೦೮ರವರೆಗೆ ಐದನೆಯ ವಿಕ್ರಮಾದಿತ್ಯ ಕ್ರಿ.ಶ.೧೦೦೮-೧೦೧೫ರವರೆಗೆ, ಇವರ ನಂತರ ಇಮ್ಮಡಿ ಜಯಸಿಂಹನು ಕ್ರಿ.ಶ.೧೦೧೫-೧೦೪೪ರವರೆಗೆ ಆಳ್ವಿಕೆ ಮಾಡಿದ್ದು, ಈತನ ನಂತರ ಒಂದನೆಯ ಸೋಮೇಶ್ವರ ಕ್ರಿ.ಶ.೧೦೪೪-೧೦೬೮ರವರೆಗೆ, ಎರಡನೆಯ ಸೋಮೇಶ್ವರ ಕ್ರಿ.ಶ.೧೦೬೮-೧೦೭೬ರವರೆಗೆ ಆಳ್ವಿಕೆ ಮಾಡಿದ್ದು ಕಂಡು ಬರುತ್ತದೆ. ಇವರ ಕಾಲದ ಶಾಸನಗಳು ಈ ಭಾಗದಲ್ಲಿ ದೊರೆತಿಲ್ಲ. ಈತನ ನಂತರ ಬಂದ ಪ್ರಸಿದ್ಧ ಅರಸನಾದ ಆರನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೭೬-೧೧೨೭ರವರೆಗೆ ಆಳ್ವಿಕೆ ಮಾಡಿದನು. ಈತ ಕಲ್ಯಾಣ ಚಾಲುಕ್ಯ ವಂಶದ ಪ್ರಸಿದ್ಧ ದೊರೆಯಾಗಿದ್ದಾನೆ. ಮಹಾಪ್ರತಾಪಶಾಲಿಯೂ, ವ್ಯವಹಾರ ಚತುರನು, ಜ್ಞಾನವುಳ್ಳವನು ಆಗಿದ್ದನು. ಇವನು ಅಧಿಕಾರಕ್ಕೆ ಬಂದ ಕ್ರಿ.ಶ.೧೦೭೬ರಿಂದಲೆ ವಿಕ್ರಮಶಕೆಯನ್ನು ಪ್ರಾರಂಭಿಸಿದನು. (ಕರ್ನಾಟಕ ಚರಿತ್ರೆ ಸಂ.೨ ಪು.೫೬) ಪ್ರಾಚೀನ ಕಾಲದ ಇತಿಹಾಸದ ಕ್ಷೇತ್ರಕ್ಕೆ ತನ್ನದೇ ಆದ ವಿಶಿಷ್ಟವಾದ ಕೊಡುಗೆಯನ್ನು ನೀಡಿದ ಚಿತ್ತಾಪುರದ ಬಗ್ಗೆ ನಮಗೆ ಅನೇಕ ಶಾಸನಗಳ ದಾಖಲೆಗಳು ಸಿಗುತ್ತವೆ.

**ಭೌಗೋಳಿಕ ಹಿನ್ನಲೆ**

ಚಿತ್ತಾಪುರ ತಾಲೂಕಿನಲ್ಲಿ ೧೨೨ ಗ್ರಾಮಗಳಿವೆ. ಇವುಗಳ ಪೈಕಿ ಮೂರು ಗ್ರಾಮಗಳಲ್ಲಿ ದೀಪ ಹಚ್ಚುವವರೇ ಇಲ್ಲ. ಚಿತ್ತಾಪುರವು ವಿಸ್ತೀರ್ಣದ ದೃಷ್ಟಿಯಿಂದ ರಾಜ್ಯದಲ್ಲಿಯೇ ಎರಡನೇ ಸ್ಥಾನವನ್ನು ಹೊಂದಿದೆ. ಇದರ ವಿಸ್ತೀರ್ಣ ೧,೭೬,೪೪೭ ಹೆಕ್ಟೇರು ಅಂದರೆ ಸುಮಾರು ೧,೭೬೪.೩ ಚ.ಕಿ.ಮೀ. (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೨೦೦೦;ಪು೩೬) ಉತ್ತರಕ್ಕೆ ಚಿಂಚೋಳ, ದಕ್ಷಿಣಕ್ಕೆ ಶಹಾಪುರ, ಪಶ್ಚಿಮಕ್ಕೆ ಜೇವರ್ಗಿ, ಪೂರ್ವಕ್ಕೆ ಸೇಡಂ ತಾಲೂಕುಗಳನ್ನೊಳಗೊಂಡಿದ್ದು ಕಲಬುರ್ಗಿ ಜಿಲ್ಲೆಯಲ್ಲಿ ಆರು ತಾಲೂಕುಗಳ ಗಡಿರೇಖೆಗೆ ಅಂಟಿಕೊಂಡಿರುವ ಏಕೈಕ ತಾಲೂಕು ಇದಾಗಿದೆ.

ಭೀಮಾ, ಕಾಗಿಣಾ ಹಾಗೂ ಬೆಣ್ಣೆ ತೋರಾ ಮೂರು ನದಿಗಳ ಸಂಗಮ ಹೊಂದಿದ ತಾಲೂಕು ಚಿತ್ತಾಪುರ. ಆಂಧ್ರಪ್ರದೇಶದ ಕೋಹಿರ್ ಎಂಬಲ್ಲಿ ಹುಟ್ಟಿ ಸೇಡಂ ತಾಲೂಕಿನ ಮೂಲಕ ಹರಿದು ಬರುವ ಕಾಗಿಣಾ ಈ ತಾಲೂಕಿನ ಹೊನಗುಂಟಾ ಬಳಿ ಭೀಮಾ ನದಿಯನ್ನು ಕೂಡಿದೆ. ಕೃಷಿಯು ಪ್ರಧಾನವಾದ ಉದ್ಯೋಗವಾಗಿದೆ. ಇಲ್ಲಿ ಮುಂಗಾರು ಬೆಳೆ ಮತ್ತು ಹಿಂಗಾರು ಬೆಳೆ ಹೀಗೆ ಎರಡು ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಇದು ಹೆಚ್ಚು ಕಪ್ಪು ಮಣ್ಣಿನಿಂದ ಕೂಡಿದೆ. ಜೋಳ ಇವರ ಮುಖ್ಯ ಆಹಾರ. ತೊಗರಿ, ಸೂರ್ಯಕಾಂತಿ, ಕಡಲೆ, ಕುಸುಬಿ ಮುಖ್ಯವಾಗಿ ಬೆಳೆಯುತ್ತಾರೆ. ಈ ಭಾಗದಲ್ಲಿ ಮಳೆಯ ಅಭಾವದಿಂದ ಕೃತಕ ನೀರಾವರಿ ಪದ್ಧತಿ ಅನುಸರಿಸುತ್ತಿದ್ದಾರೆ. ಕುಂಬಾರವಾಡಿ ಕೆರೆ, ಆಲಹಳ್ಳಿ ಕೆರೆ, ಬ್ಯಾಂಪೂರ ಹಳ್ಳಿ ಕೆರೆ, ಮುಗಳನಾಗಾವಿ, ಬಸವೇಶ್ವರ ಕೆರೆಗಳಿಂದ, ಕಾಲುವೆ, ಹಳ್ಳಿಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಅರಣ್ಯ ಪ್ರದೇಶ ಬಹಳಷ್ಟು ಇರದೇ ಇದ್ದರೂ ನಿಸರ್ಗದತ್ತವಾಗಿ ಸೀತಾಫಲ ಬೆಳೆಯುತ್ತಾರೆ.

ಇತ್ತೀಚೆಗೆ ಆಧುನಿಕ ಕೃಷಿ ತಂತ್ರಜ್ಞಾನ ಅಳವಡಿಸಿಕೊಂಡಿದ್ದರಿಂದ ಮಾವು, ಲಿಂಬೆ, ಚಿಕ್ಕು, ಬಾಳೆಹಣ್ಣು, ಕಲ್ಲಂಗಡಿ, ಕರಬೂಜ ಹಣ್ಣುಗಳನ್ನು ಬೆಳೆಯುತ್ತಾರೆ. ಕಾಡು ಮರಗಳಾದ ಹುಣಸೆ, ಜಾಲಿ, ಬಾರೆ, ಬನ್ನಿ, ತೊಗಟೆ, ಬಿಲ್ವ ಮುಂತಾದ ಮರಗಳಿವೆ. ಕಂಬಾರಿಕೆ, ನೇಕಾರಿಕೆ, ಕಮ್ಮಾರಿಕೆ, ಬಿದಿರಿನಿಂದ ಬುಟ್ಟಿ ಹೆಣೆಯುವುದು, ನಾರಿನಿಂದ ಹಗ್ಗವನ್ನು ಹೊಸೆಯುವುದು, ಹೈನುಗಾರಿಕೆ ಮುಂತಾದ ಉಪಕಸುಬುಗಳಾಗಿವೆ. ಇಲ್ಲಿ ಬೇಸಿಗೆ, ಕಡುಬೇಸಿಗೆ ಎಂಬ ಎರಡೇ ಋತುಗಳು ಹೊಂದಿದ್ದು ಮಳೆಯ ಪ್ರಮಾಣ ಕಡಿಮೆಯಾಗಿದ್ದು ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೮೦೮.೪೬ ಮಿ.ಮಿ.ಗಳಾಗಿವೆ. ಎರಡು ಪಟ್ಟಣಗಳಿವೆ. ಒಂದು ಚಿತ್ತಾಪುರ, ಇನ್ನೊಂದು ಶಹಾಬಾದ. ಎರಡು ವಿಧಾನ ಸಭಾ ಕ್ಷೇತ್ರಗಳಿವೆ. ೩೫ ಗ್ರಾಮಪಂಚಾಯಿತಿಗಳಿವೆ. ಒಕ್ಕಲುತನ ಹುಟ್ಟುವಳಿ ಮಾರಾಟ ಕೇಂದ್ರ, ಪೋಲೀಸ್, ದೂರವಾಣಿ, ವಿದ್ಯುತ್ ಇಲಾಖೆ ಉಪವಿಭಾಗಗಳಿಂದ ಕೂಡಿದೆ. ಸರಕಾರಿ, ಅರೆಸರಕಾರಿ ವಿದ್ಯಾ ಸಂಸ್ಥೆಗಳು, ಹಣಕಾಸು ಸಂಸ್ಥೆಯ ಕಾರ್ಯನಿರ್ವಹಿಸುತ್ತಿವೆ.

ತಾಲೂಕಿನ ಒಟ್ಟು ಜನಸಂಖ್ಯೆ ೨೦೦೧ರ ಜನಗಣತಿ ಪ್ರಕಾರ ೨೬,೯೭೪ರಷ್ಟಿದೆ. ವಾರ್ಷಿಕ ಜನನ ಪ್ರಮಾಣ ೨.೦೬ರಷ್ಟಿದೆ. ಬ್ರಾಹ್ಮಣರು, ಕುರುಬರು, ಲಿಂಗಾಯತರು, ಉಪ್ಪಾರರು, ವೈಶ್ಯರು,

ಮರಾಠರು, ಅಕ್ಕಸಾಲಿಗರು, ಒಡ್ಡರು, ಕ್ರಿಶ್ಚಿಯನ್ನರು, ಮುಸ್ಲಿಂರು, ಕೆಳವರ್ಗದವರು, ದಲಿತರು, ಹೀಗೆ ವಿವಿಧ ವರ್ಗದ ಜನರು ಈ ಒಂದು ತಾಲೂಕಿನಲ್ಲಿ ಕಂಡು ಬರುತ್ತಾರೆ.

**ಖನಿಜ ಸಂಪತ್ತು**

ಚಿತ್ತಾಪುರ ವೈವಿಧ್ಯಮಯವಾದ ಖನಿಜ ನಿಕ್ಷೇಪಗಳಿಂದ ಕೂಡಿದ ಸ್ಥಳವಾಗಿದೆ. ಸುಣ್ಣದ ಕಲ್ಲಿನ ಖನಿಜ ಸಂಪತ್ತು ಸುಮಾರು ೧೧ಕೋಟಿ ಟನ್‌ನಷ್ಟು ಇದೆ ಎಂದು ಅಂದಾಜು ಮಾಡಲಾಗಿದೆ. ಮನೆ ಕಟ್ಟಲು, ನೆಲಹಾಸಲು ಈ ಕಲ್ಲನ್ನು ಬಳಸಲಾಗುತ್ತಿದ್ದು ಗಣಿ ಉದ್ಯಮಕ್ಕೆ ಮುಖ್ಯ ಆಧಾರವಾಗಿದೆ. ಇಲ್ಲಿ ೧೫೦೦ಕ್ಕೂ ಹೆಚ್ಚು ಗಣಿ ಉದ್ಯಮಗಳಿವೆ. ೨೫೦೦೦ಕ್ಕೂ ಹೆಚ್ಚು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ.

ಚಿತ್ತಾಪುರ ತೊಗರಿ ಖಣಜವೆಂದು ಪ್ರಸಿದ್ಧಿ ಪಡೆದಿದೆ. ಹತ್ತು ತೊಗರಿ ಬೇಳೆ ಸಂಗ್ರಹಣೆಯ ಕಾರ್ಖಾನೆಗಳಿವೆ. ಸುಮಾರು ೪೦,೦೦೦ ಹೆಕ್ಟೇರು ಪ್ರದೇಶದಲ್ಲಿ ಇದನ್ನು ಬೆಳೆಯುತ್ತಾರೆ. ಇದರಿಂದ ಜನ ಜೀವನಕ್ಕೆ ಬದುಕಿಗೊಂದು ನೆಲೆ ಸಿಕ್ಕಿದೆ.

**ಐತಿಹಾಸಿಕ ಹಿನ್ನಲೆ**

ಸಮಾಜಕ್ಕೆ ಪೂರಕವಾದ ಧಾರ್ಮಿಕ ಸಂಸ್ಥೆಗಳು, ಮಠಗಳು ಚಿತ್ತಾಪುರದಲ್ಲಿವೆ. ಈ ಧಾರ್ಮಿಕ ಸಂಸ್ಥೆಗಳು ಸಾಂಸ್ಕೃತಿಕ ಹಾಗೂ ಶೈಕ್ಷಣಿಕವಾಗಿ ಅನೇಕ ಮಹತ್ವದ ಕಾರ್ಯಗಳನ್ನು ನಿರ್ವಹಿಸುತ್ತಲಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಕಾಳಗಿ, ಚಿತ್ತಾಪುರ. ಇಲ್ಲಿ ಸಾಂಸ್ಕೃತಿಕ, ಸಂಪ್ರದಾಯ ಪರಂಪರೆಯಿಂದ ನಡೆದುಕೊಂಡು ಬಂದ ಜಾತ್ರೆಗಳು ಸಹ ನೆರವೇರುತ್ತವೆ. ಸಾಹಿತ್ಯ, ಸಂಗೀತ, ಚಿತ್ರಕಲೆ, ರಂಗಭೂಮಿ, ಹೀಗೆ ವಿವಿಧ ಸಾಂಸ್ಕೃತಿಕ ಕ್ಷೇತ್ರದಲ್ಲಿ ಕಲಬುರ್ಗಿ ಜಿಲ್ಲೆಗೆ ಚಿತ್ತಾಪುರ ತನ್ನದೇ ಆದ ಕೊಡುಗೆ ಸಲ್ಲಿಸಿದೆ.

ಕ್ರಿ. ಶ. ಹನ್ನೆರಡನೆಯ ಶತಮಾನದಿಂದ ಮೌರ್ಯ ಕಾಲದ ಬೌದ್ಧ ಸ್ತೂಪ ಶಿಲ್ಪ ಹಾಗೂ ಅಶೋಕನ ಬೃಹತ್ ಬಂಡೆ ಶಿಲಾಶಾಸನಗಳ ಪ್ರತಿಗಳು ಆಕಸ್ಮಿಕವಾಗಿ ಬೆಳಕಿಗೆ ಬಂದವು. ಅಶೋಕನ ಈ ಪ್ರಕಾರದ ಶಾಸನಗಳು ದಖ್ಖನ್ ಪ್ರಸ್ಥಭೂಮಿಯಲ್ಲಿ ಸಿಗುತ್ತಿರುವುದು ಇದೇ ಮೊದಲು. ಆದ್ದರಿಂದ ಆದಿ ಇತಿಹಾಸದ ಯುಗ ಇಲ್ಲಿಂದಲೇ ಪ್ರಾರಂಭಗೊಳ್ಳುತ್ತದೆ. (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್; ೧೯೯೭; ಪು.೪೦). ಭೀಮಾ ನದಿ ತೀರದ ಸನ್ನತಿಯಲ್ಲಿ ನಡೆದ ಉತ್ಖನನಗಳು ಬೌದ್ಧ ಸ್ತೂಪಗಳು ದೊರೆಯುವುದರೊಂದಿಗೆ ಅಶೋಕನ ಕಾಲದ ಶಿಲಾ ಶಾಸನಗಳು ದೊರೆತು ಈ ಭಾಗದ ಲಿಖಿತ ಇತಿಹಾಸವು ಕ್ರಿ. ಪೂ. ಮೂರನೆಯ ಶತಮಾನದಷ್ಟು ಹಿಂದೆ ಸರಿಯುತ್ತದೆ. ದೊರೆತ ಶಾಸನಗಳಲ್ಲಿ ಚಕ್ರವರ್ತಿ ಅಶೋಕನ ಕಾಲಕ್ಕೆ ಸಂಬಂಧಿಸಿದ್ದಾಗಿವೆ. ಶಾತವಾಹನರ ಕಾಲಕ್ಕೆ ಸೇರಿದ (ಕ್ರಿ.ಶ.೧-೨ನೆಯ ಶತಮಾನ) ಸು ೭೭ ಪ್ರಾಕೃತ ಭಾಷೆಯಲ್ಲಿರುವ ಬ್ರಾಹ್ಮಿ ಶಾಸನಗಳು ದೊರೆತಿವೆ. ಈ ತಾಲೂಕಿನ ಹೆಚ್ಚು ಶಾಸನಗಳು ಕಲ್ಯಾಣ ಚಾಳುಕ್ಯರ ಕಾಲಕ್ಕೆ ಸೇರಿದ್ದಾಗಿವೆ. ಕಲ್ಯಾಣ ಚಾಳುಕ್ಯರ ಕಾಲದ ೨೩ ಶಾಸನಗಳು, ಬಾಣ ವಂಶಕ್ಕೆ ಸೇರಿದ ಎರಡು ಶಾಸನಗಳು, ಕಳಚೂರಿ ವಂಶಕ್ಕೆ ಸೇರಿದೆ ಎರಡು ಹಾಗೂ ಯಾದವ ಕಾಲಕ್ಕೆ ಸೇರಿದ ಎರಡು ಶಾಸನಗಳು ದೊರೆತಿವೆ. ಈ ಶಾಸನಗಳು ಅಪೂರ್ವ ಮಾಹಿತಿ ನೀಡಿ

ಐತಿಹಾಸಿಕ ಪ್ರಾಮುಖ್ಯತೆ ಪಡೆದುಕೊಂಡಿವೆ. (ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨;ಪು.೨)

ಬಸವೋತ್ತರ ಸಮಕಾಲಿನ ಸು. ಏಳನೂರು ವರ್ಷಗಳಲ್ಲಿ ಐವತ್ತಕ್ಕೂ ಹೆಚ್ಚು ಶಿವಶರಣರು ಕಂಡು ಬರುತ್ತಾರೆ. ಅವರಲ್ಲಿ ಈ ತಾಲೂಕಿನ ದಿಗ್ಗಾಂವಿಯ ಸಂಗನ ಬಸವಣ್ಣ ಅವರೂ ಒಬ್ಬರಾಗಿದ್ದಾರೆ. ಬಸವಣ್ಣನ ಸಮಕಾಲಿನ ವಚನಕಾರರಾದ ಢಕ್ಕೆಯ ಮಾರಯ್ಯ (ಕಲ್ಲರಳಿ ಹೂವಾಗಿ;೨೦೦೦;ಪು.೪೨) ಚಿತ್ತಾಪುರಿನವನು. ಶಾಸನಗಳ ವಚನಕಾರರ ಕಾಲದಿಂದ ಹಿಡಿದು ಇದುವರೆಗೂ ಚಿತ್ತಾಪುರ ತಾಲೂಕಿನ ಕವಿಗಳು ಸಾಹಿತ್ಯ ಸೇವೆ ಮಾಡುತ್ತಲೇ ಬಂದಿದ್ದಾರೆ.

ಪ್ರಸ್ತುತ ಸನ್ನತಿಯಲ್ಲಿ ದೊರೆತಿರುವ ಹನ್ನೆರಡು ಹಾಗೂ ಹದಿನಾಲ್ಕನೆಯ ಮುಖ್ಯ ಶಿಲಾ ಶಾಸನಗಳ ಆಧಾರದ ಮೇಲೆ ಭೀಮಾನದಿಯ ದಡದಲ್ಲಿರುವ ಕಲಬುರ್ಗಿ ಜಿಲ್ಲೆಯ ಪ್ರದೇಶಗಳು ಅಶೋಕನ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಮತ್ತು ಶಾತವಾಹನರ ಕಾಲದ ಶಾಸನ ಸಹಿತ ಸ್ಮಾರಕ ಶಿಲೆಗಳು ಶೋಧವಾಗಿವೆ. ಸಾಮ್ರಾಜ್ಯವನ್ನು ಕಟ್ಟಿ ಅತ್ಯಂತ ವೈಭವದಿಂದ ಆಳಿದ ರಾಷ್ಟ್ರಕೂಟರ ಕಾಲದಲ್ಲಿಯಂತೂ ಚಿತ್ತಾಪುರ ಅತ್ಯಂತ ಮಹತ್ವಪೂರ್ಣ ಸ್ಥಾನದಲ್ಲಿತ್ತು. ರಾಷ್ಟ್ರಕೂಟ ಚಕ್ರಾಧಿಪತಿಗಳ ದಂಡಾಧಿಪತಿ ಇದ್ದಿದ್ದು ಚಿತ್ತಾಪುರ ತಾಲೂಕಿನ ದಂಡೋತಿಯಲ್ಲಿ. ರಾಷ್ಟ್ರಕೂಟರ ದಂಡಾಧಿಪತಿಗಳು ಇಲ್ಲಿ ಆಳ್ವಿಕೆ ಮಾಡಿದ್ದರಿಂದ ಇದಕ್ಕೆ ದಂಡೋತಿ ಎಂಬ ಗ್ರಾಮದ ಹೆಸರು ಬಂದಿರಬಹುದು. ಈ ಗ್ರಾಮದಲ್ಲಿಯೇ ರಾಷ್ಟ್ರಕೂಟರ ಕಾಲದಲ್ಲಿ ದಂಡಾಧಿಪತಿ ಇಲ್ಲಿಯೇ ಇರುತ್ತಿದ್ದನೆಂದು ಹೇಳಲಾಗಿದೆ. ಹನ್ನೆರಡನೆಯ ಶತಮಾನದ ಶಾಸನದಲ್ಲಿ ದಂಡಹತ್ತಿ (ಕಲ್ಲರಳಿ ಹೂವಾಗಿ;೨೦೦೦;ಪು.೪೫) ಎಂದು ಉಲ್ಲೇಖಗೊಂಡಿದೆ. ಪ್ರಾಚೀನ ಜೈನ ಬಸದಿಯಿಂದ ಇದು ಪ್ರಾಮುಖ್ಯತೆ ಪಡೆದುಕೊಂಡಿದೆ.

ಕಲಬುರ್ಗಿ ಜಿಲ್ಲೆ ಅಪರೋಕ್ಷವಾಗಿ ಬಾದಾಮಿ ಚಲುಕ್ಯರ ಆಡಳಿತಕ್ಕೆ ಒಳಪಟ್ಟಿದ್ದರೂ ಅವರ ಕಾಲದ ಶಾಸನಗಳಾಗಲಿ ಅಥವಾ ಯಾವುದೇ ಅವಶೇಷಗಳಾಗಲಿ ಲಭ್ಯವಾಗಿಲ್ಲ. ರಾಷ್ಟ್ರಕೂಟರ ನಂತರ ಕಲ್ಯಾಣ ಚಾಳುಕ್ಯರು ಆಳಿದ ಈ ನಾಡಿನಲ್ಲಿ ಹದಿಮೂರನೆಯ ಶತಮಾನದವರೆಗೆ ಕನ್ನಡದ ಅರಸರ ಪ್ರಭಾವಕ್ಕೊಳಪಟ್ಟಿತ್ತು. ಇವರ ನೂರಾರು ಶಾಸನಗಳು ಚಿತ್ತಾಪುರ ತಾಲೂಕಿಗಷ್ಟೆ ಅಲ್ಲದೆ ಕಲಬುರ್ಗಿ ಜಿಲ್ಲೆಯಾದ್ಯಂತ ಕಂಡುಬರುವವು. ಕಲ್ಯಾಣ ಚಾಳುಕ್ಯರೆಂದು ಕರೆದುಕೊಳ್ಳುವ ಈ ವಂಶದವರು ಬಾದಾಮಿ ಚಲುಕ್ಯರ ವಂಶಜರೆಂದು ಹೇಳಿಕೊಂಡಿದ್ದಾರೆ.

**ಸನ್ನತಿ**

ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನ ಒಂದು ಗ್ರಾಮ ಸನ್ನತಿ. ಶಾಸನಗಳಲ್ಲಿ ಸಣ್ಣಚ್ಚಿ ಎಂಬ ಉಲ್ಲೇಖವಿದೆ. ಸುವರ್ಣಗಿರಿ, ಸ್ವರ್ಣಗಿರಿ ಅಥವಾ ಸ್ವರ್ಣಾದ್ರಿ ಕಾಲ ಕ್ರಮೇಣ ಆಡು ನುಡಿಯಲ್ಲಿ ಸನ್ನತಿ ಎಂದು ಕರೆಯುತ್ತಾರೆ ಎನ್ನಲಾಗಿದೆ. ಪ್ರಾದೇಶಿಕವಾಗಿ ಸೊಂಥಿ ಎಂದು ಕರೆಯಲಾಗುತ್ತಿದೆ. ಇಲ್ಲಿನ ಇತಿಹಾಸ ಅರಿಯಬೇಕಾದರೆ ಈ ಭಾಗದಲ್ಲಿನ ಶಾಸನಗಳನ್ನೇ ಹೆಚ್ಚಾಗಿ ಅವಲಂಬಿಸಬೇಕಾಗಿದೆ. ನಾಡಿನ ಪ್ರಮುಖ ಬೌದ್ಧ ಕೇಂದ್ರಗಳಲ್ಲಿ ಒಂದಾದ ಸನ್ನತಿ ಕರ್ನಾಟಕದ ಅತ್ಯಂತ ಪ್ರಾಚೀನ ಬೌದ್ಧ ಕೇಂದ್ರವಾಗಿದೆ.

ಸನ್ನತಿ ಅಶೋಕನ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿನ ಒಂದು ಪ್ರಮುಖ ಪಟ್ಟಣವಾಗಿದ್ದಿತ್ತೆಂಬುದರಲ್ಲಿ. ಸಂಶಯವಿಲ್ಲ. ಈ ನೆಲೆಯಲ್ಲಿ ಹೆಚ್ಚು ಪ್ರಾಕೃತ ಭಾಷೆ ಮತ್ತು ಬ್ರಾಹ್ಮಿ ಲಿಪಿಯ ಶಾಸನಗಳು, ನೂರಾರು ಶಿಲ್ಪಾವಶೇಷಗಳು ದೊರೆತಿವೆ.

ಅಶೋಕನ ಕಾಲದ ಒಂದು ಸಚಿತ್ರ ಶಿಲಾ ಫಲಕ ಕಪ್ಪು ಲೇಪವುಳ್ಳ ಮೃತ ಪಾತ್ರೆಗಳ ಅವಶೇಷಗಳು (ಸಂಶೋಧನಾ;೧೯೯೧;ಪು.೭೪) ದೊರೆತಿವೆ. ಅಶೋಕನ ಕಳಿಂಗ ಯುದ್ಧದ ನಂತರ ಸನ್ನತಿಯು ಆಡಳಿತಕ್ಕೆ ಒಳಪಟ್ಟಿತು. ಇಲ್ಲಿರುವ ಶಿಲಾ ಶಾಸನಗಳು ದೌಲಿ ಮತ್ತು ಜಿಗಢ ಶಿಲಾ ಶಾಸನಕ್ಕೆ ಹೋಲಿಸಲಾಗಿದೆ. ಮೌರ್ಯರ ನಂತರ ಅವರ ಉತ್ತರಾಧಿಕಾರಿಗಳಾದ ಶಾತವಾಹನರು ಮೌರ್ಯರ ಆಡಳಿತ ನೀತಿಯನ್ನೇ ಮುಂದುವರೆಸಿದರು. ಶಾತವಾಹನರ ಅರಸರಾದ ಗೌತಮಿಪುತ್ರ ಶಾತಕರ್ಣಿ ಹಾಗೂ ವಶಿಷ್ಠಪುತ್ರ ಪುಳಮಾವಿ ಕಾಲದ ಶಾಸನಗಳು ಇಲ್ಲಿ ಲಭ್ಯವಾಗಿವೆ. ಇವರ ಕಾಲದಲ್ಲಿಯೂ ಸನ್ನತಿ ಪ್ರಸಿದ್ಧ ಆಡಳಿತ ಕೇಂದ್ರವೂ ಹೌದು. ಬೌದ್ಧ ಕೇಂದ್ರವೂ ಹೌದು. ಕಪ್ಪು ಮೃತ್ಪಾತ್ರೆ, ಸ್ಫಟಿಕ, ಕಾರ್ನಿಲಿಯನ್ ಮುಂತಾದ ಕುರುಹುಗಳು ಕಂಡುಬಂದಿವೆ.

ಸನ್ನತಿ ಪ್ರಸಿದ್ಧ ಚಂದ್ರಲಾಪರಮೇಶ್ವರಿ ದೇವಿಯ ದೇವಸ್ಥಾನದಿಂದ ಈ ಸ್ಥಳಕ್ಕೆ ಇನ್ನಷ್ಟು ಪ್ರಾಮುಖ್ಯತೆ ದೊರೆತಿದೆ. ಇದು ಐತಿಹಾಸಿಕ ಹಾಗೂ ಪೌರಾಣಿಕ ಸ್ಥಳ. ಇಲ್ಲಿಯ ಜನರು ಇಂದಿಗೂ ಈ ದೇವಿಯನ್ನು ಆರಾಧಿಸುತ್ತಾ ಬಂದಿದ್ದಾರೆ. ಆದ್ದರಿಂದ ಅನೇಕ ಭಕ್ತಾದಿಗಳನ್ನು ಕೈ ಬೀಸಿ ಕರೆಯುವ ಕ್ಷೇತ್ರವಾಗಿದೆ. ಚಂದ್ರಲಾ ಪರಮೇಶ್ವರಿಯ ದೇವಾಲಯವು ಬೌದ್ಧರ ಕಾಲದಲ್ಲಿ ಬೌದ್ಧರ ಸ್ಥಾನವಾಗಿಯೂ, ಶೈವ ಶಾಕ್ತರ ಕಾಲದಲ್ಲಿ ಪಾರ್ವತಿ ಮಹಾಕಾಳಿಯ ಸ್ಥಾನವಾಗಿಯೂ, ವೈಷ್ಣವರಿಗೆ ಶ್ರೀರಾಮ ಸ್ಥಾನವಾಗಿಯೂ, (ಗುಲಬರ್ಗಾ ಜಿಲ್ಲಾ ದರ್ಶನ;೨೦೦೫;ಪು.೫) ಮಾರ್ಪಾಡು ಹೊಂದುತ್ತಾ ಬಂದಿದೆ. ಸನ್ನತಿ ನಮ್ಮ ರಾಜ್ಯದ ಅನೇಕ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾಗಿದೆ. ಪ್ರಮುಖ ವಾಣಿಜ್ಯ ಕೇಂದ್ರವಾಗಿದೆ. ಅಂತೆಯೇ ಇದು ರೋಮನ್ ಸಾಮ್ರಾಜ್ಯದೊಂದಿಗೆ ವ್ಯಾಪಾರ ಸಂಪರ್ಕ ಹೊಂದಿತ್ತೆಂದು ತಿಳಿದು ಬರುತ್ತದೆ.

**ದಿಗ್ಗಾಂವ**

ಶಾಸನಗಳಲ್ಲಿ ದೀರ್ಘವಿಗೆ, ಅಗ್ರಹಾರ ದೀಗ್ಘವಿಗೆ, ದಿಗ್ಗಾಂವಿ ಎಂದು ಉಲ್ಲೇಖಗೊಂಡಿದೆ. ಇಲ್ಲಿ ಶಾಸನಗಳು ಪತ್ತೆಯಾಗಿದ್ದು, ಕಲ್ಯಾಣ ಚಾಳುಕ್ಯ ಆಹಮಲ್ಲ ಮತ್ತು ತ್ರೈಲೋಕ್ಯಮಲ್ಲ ಎಂಬ ಬಿರುದಾಂಕಿತ ಒಂದನೆಯ ಸೋಮೇಶ್ವರ ಹಾಗೂ ಆತನ ಮಹಾಮಂಡಳೇಶ್ವರರ ಕಾಲಕ್ಕೆ ಸೇರಿದ್ದಾಗಿವೆ. ಸಾಮಾನ್ಯವಾಗಿ ಶಾಸನಗಳು ಪ್ರಾರಂಭದಲ್ಲಿ ದೇವತಾ ಶ್ಲೋಕದೊಂದಿಗೆ ಪ್ರಾರಂಭವಾಗಿದ್ದು ಕೊನೆಗೆ ಶಾಪಾಶಯದೊಂದಿಗೆ ಮುಕ್ತಾಯಗೊಳ್ಳುತ್ತವೆ.

ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರ ಬಮ್ಮಯ್ಯರಸ ದಾನ ಕೊಟ್ಟ ವಿಷಯ ಕ್ರಿ.ಶ.೧೦೫೩ರ ಶಾಸನ ತಿಳಿಸಿದರೆ, ಇನ್ನೊಬ್ಬ ದಂಡನಾಯಕನಾದ ರನ್ನಪ್ಪಯ್ಯನು ಭೂಮಿಯನ್ನು ಪಡೆದು, ಅಗ್ರಹಾರದ ಮುನ್ನೂರು ಮಹಾಜನರಿಗೆ ಸರ್ವ್ವಸಮಕ್ಷವಾಗಿ ದಾನ ಕೊಟ್ಟ ವಿಷಯ

ಕ್ರಿ.ಶ.೧೦೫೪ರ ಶಾಸನದಿಂದ ತಿಳಿದು ಬರುತ್ತದೆ. 'ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪ, ತಪ, ಸಮಾಧಿ, ಶೀಲ ಸಂಪನ್ನ ಉಪಾಸಕರು, ಅಗ್ನಿ ಆರಾಧಕರು, ಸ್ನಾತಕರು, ಪೂಜಾ ನಿರತರು ಚತುರ್ವೇದ ವೇದಾಂಗ, ತತ್ವ, ತರ್ಕಗಳನ್ನು ಬಲ್ಲವರು, ಸೂರ್ಯನಂತೆ ಉಜ್ವಲ ಕೀರ್ತಿಯ ಹೊಂದಿದವರು, ಸಕಲ ಶಾಸ್ತ್ರ ಪಂಡಿತರಾದ ಸರ್ವ ನಮಸ್ಯದಗ್ರಹಾರದ ಈ ದೀರ್ಘವಿಗೆಯ ಮಹಾಜನರಿಗೂ ಶೇಷ ಮುನ್ನೂರು. ಮಹಾ ಜನಗಳು' ಶೈವ ಧರ್ಮವನ್ನು ಪಾಲಿಸುವರು ಆದ ದಾನ. ಕೊಟ್ಟ ವಿಷಯ ಇದೇ ಶಾಸನದಿಂದ ತಿಳಿದು ಬರುತ್ತದೆ.

ಶ್ರೀ ಮದ್ರಾಯಸರ್ವಜ್ಞನದ್ರ್ಧಾಂಗಿ ಶ್ರೀ ಮದಗ್ರಹಾರಂ ದಿಗ್ಘವಿಗೆಯ ಮೇಲಾಳಿಕೆಯನ್ನು ಶ್ರೀಮತ್ಪಿರಿಯರಸಿ ಪಟ್ಟ ಮಹಾದೇವಿ ಮಲೆಯಮತೀದೇವಿಯು ಅಗ್ರಹಾರ ದೀರ್ಘವಿಗೆಯ ಆಳ್ವಿಕೆ ಮಾಡುತ್ತಿದ್ದಳು. ಮಹಾಮಂಡಲೇಶ್ವರ ಲೋಕರಸನು ಸ್ವಯಂಭೂ ಸೋಮೇಶ್ವರ ದೇವಾಲಯಕ್ಕೆ ದಾವಣ ಭಟ್ಟ ನಿರ್ಮಿಸಿದ ಚಿಕ್ಕ ಸಂಜೆ ಮಠದ ಜನಾರ್ದ್ಧನ ದೇವರ ಜವಾಬ್ದಾರಿಯನ್ನು ನೋಡಿಕೊಳ್ಳಲು ಅಲ್ಲಿನ ಮಹಾಜನರಿಗೆ ಒಪ್ಪಿಸಿದ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್; ೧೯೬೭;ಪು.೭೨೮) ಉಲ್ಲೇಖವಿದೆ. ದಿಗ್ಗಾಂವಿ ಗ್ರಾಮದಲ್ಲಿ ಮುಖ್ಯವಾಗಿ ಶೈವ ಹಾಗೂ ವೈಷ್ಣವ ಸಂಪ್ರದಾಯದ ಒಟ್ಟು ಹದಿನಾರು ದೇವಾಲಯಗಳಿವೆ. ಸ್ಥಳೀಯ ಮಲ್ಲಿಕಾರ್ಜುನ ದೇವಾಲಯದ ಶಿವಲಿಂಗವು ಕ್ರಿಶ. ಹದಿಮೂರನೆಯ ಶತಮಾನದ್ದು.

**ನಾಗಾಯಿ**

ಶಾಸನಗಳಲ್ಲಿ ಪ್ರಾಚೀನ ಅಗ್ರಹಾರ ನಾಗಾಯಿ, ಮಹಾಗ್ರಹಾರ ನಾಗಾವಿ, ಸರ್ವ್ವನಮಸ್ಯದಗ್ರಹಾರ ನಾಗವಾವಿ ಎಂದೆಲ್ಲ ಉಲ್ಲೇಖಗೊಂಡಿದೆ. ಗ್ರಾಮದ ಮೂಲ ಹೆಸರು ನಾಗವಾವಿ. ನಾಗಾಯಿ ಶಾಸನಗಳು ಪ್ರಾಚೀನ ಕರ್ನಾಟಕ ಉನ್ನತ ಶಿಕ್ಷಣಕ್ಕೆ ಮೀಸಲಾದ ಘಟಿಕಾಲಯದ ಬಗೆಗಿನ ವಿವರಣೆ ತಿಳಿಯಲು ಸಂಪೂರ್ಣ ಮಾಹಿತಿ ಒದಗಿಸುತ್ತವೆ. ಪ್ರಾಚೀನ ಕರ್ನಾಟಕದಲ್ಲಿ ಈ ರೀತಿಯ ಮತ್ತೊಂದು ಘಟಿಕಾಲಯವನ್ನು ಬಳ್ಳಿಗಾವೆಯಲ್ಲಿ ನೋಡಬಹುದು.

ನಾಗಾಯಿಯು ಅಗ್ರಹಾರ, ಘಟಿಕಾಲಯವಾಗುವುದಕ್ಕಿಂತ ಮೊದಲು ಜೈನ ಕೇಂದ್ರವೂ ಆಗಿದ್ದಿತು ಎಂಬಲ್ಲಿ ಸಂದೇಹವೇ ಇಲ್ಲ. ಕ್ರಿ.ಶ.೮-೧೦ನೆಯ ಶತಮಾನದ ಅವಧಿಯಲ್ಲಿ ಮಾನ್ಯಖೇಟವನ್ನು. ರಾಜಧಾನಿಯನ್ನಾಗಿ ಮಾಡಿಕೊಂಡು ರಾಷ್ಟ್ರಕೂಟರು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಜೈನಧರ್ಮ ಪ್ರಮುಖ ಸ್ಥಾನಪಡೆದುಕೊಂಡಿದೆ. ಮುಂದೆ ಕಲ್ಯಾಣ ಚಾಳುಕ್ಯ ಕಾಲದಲ್ಲಿ ಅಗ್ರಹಾರವಾಗಿದ್ದು, ಒಂದನೆಯ ಸೋಮೇಶ್ವರನ ಕಾಲ (ಕ್ರಿ.ಶ.೧೦೪೩-೧೦೬೭)ಕ್ಕೆ ಘಟಿಕಾಲಯವಾಗಿ ಮಾರ್ಪಟ್ಟಿತು. ಈತನ ದಂಡನಾಯಕ ಮಧುವಪ್ಪರಸನು ಇದನ್ನು ನಿರ್ಮಿಸಿದನು ಎಂಬುದಾಗಿ (ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ;೧೯೯೯;ಪು.೮೧) (ಕ್ರಿ.ಶ.೧೦೫೮) ಶಾಸನಗಳಿಂದ ತಿಳಿದು ಬರುತ್ತದೆ. ಮಧುವಪ್ಪರಸನ ಮಗನಾದ ಕಾಳಿದಾಸಯ್ಯ ದಂಡನಾಯಕನು ತ್ರೈಪುರುಷ ದೇವರ ಶಾಲೆಯನ್ನು, ಮಧುಸೂದನ ದೇವಾಲಯವನ್ನು, ಘಟಿಕಾಸ್ಥಾನವನ್ನು ನಿರ್ಮಿಸಿದನು.

ನಾಗಾಯಿಯ ಅಗ್ರಹಾರದಲ್ಲಿ ವೇದ, ಶಾಸ್ತ್ರ, ಕಾವ್ಯ, ಪುರಾಣ, ನಾಟಕ, ಸಂಗೀತ ಮುಂತಾದ ವಿಷಯಗಳ ಬಗ್ಗೆ ತಿಳಿಸುತ್ತಿದ್ದರು. ಘಟಿಕಾಲಯದಲ್ಲಿ ವೇದಗಳಂತಹ ಧಾರ್ಮಿಕ ಸಾಹಿತ್ಯದ ಜೊತೆಗೆ ಶಾಸ್ತ್ರಗಳನ್ನು ಕಲಿಯುವ ಅವಕಾಶ ಇದ್ದುದರ ಬಗ್ಗೆ ನಾಗಾವಿ, ಬಳ್ಳಿಗಾವೆ, ಶಾಸನಗಳಲ್ಲಿ ಉಲ್ಲೇಖವಿದೆ. ನಾಗಾಯಿಯು ಕೇವಲ ಧಾರ್ಮಿಕ, ಸಾಹಿತ್ಯದ ಅಧ್ಯಯನಗಳಿಗಷ್ಟೇ ಮೀಸಲಾಗಿರದ ವಿಷಯ ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಇಲ್ಲಿ ಪ್ರಾಚೀನ ಭಾರತೀಯ ಪ್ರೌಢ ವಿದ್ಯೆಯ ಮಹತ್ವದ ಶಾಖೆಗಳೆಲ್ಲವೂ ಬೋಧಿಸಲ್ಪಡುತ್ತಿದ್ದವು. ಅಲ್ಲಿನ ವಿವಿಧ ವಾಙ್ಮಯ ಶಾಖೆ, ಅವುಗಳನ್ನು ಕಲಿಸುವ ಉಪಾಧ್ಯಾಯ ಮತ್ತು ಕಲಿಯುವ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿತ್ತು. ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಒಂದೆಡೆ ಕೂಡಿಯೇ ಇರುತ್ತಿದ್ದರು. ಪ್ರಾಚೀನ ಗುರುಕುಲದ ಸ್ಮರಣೆಗೆ ಒಂದು ಪ್ರತೀಕವಾಗಿದೆ ನಾಗಾಯಿ.

ಕ್ರಿ.ಶ.೧೦೬೮ರ ನಾಗಾಯಿಯ ಶಾಸನ ಮಧುಸೂದನ ದೇವಾಲಯದಲ್ಲಿ ನಡೆಯುತ್ತಿದ್ದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ವಿಸ್ತೃತವಾದ ಚಿತ್ರಣ ನೀಡಿದೆ. ಶಾಸನಗಳಲ್ಲಿ ಪ್ರಸಿದ್ಧ ದೇವಾಲಯಗಳ ಉಲ್ಲೇಖವಿದ್ದು, ಶಾಸನೋಕ್ತ ದೇವಾಲಯಗಳಲ್ಲಿ ಹೆಚ್ಚಾಗಿ ಶೈವ ದೇವಾಲಯಗಳೇ ಕಂಡು ಬರುತ್ತವೆ. ವಿರಳವಾಗಿ ವೈಷ್ಣವ, ಜೈನ ಬಸದಿಗಳು ಕಂಡು ಬರುತ್ತವೆ. ರಾಜರು, ಮಹಾಮಂಡಳೇಶ್ವರರು ಇಲ್ಲಿಯ ಮಧುಸೂಧನ ದೇವಾಲಯಕ್ಕೆ ಶಿಕ್ಷಣ ಹಾಗೂ ಲಲಿತ ಕಲೆಗಳಿಗೆ ಸಂಬಂಧಿಸಿದ ಕಾರ್ಯಗಳು ನಿರಂತರವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು. ಅಂತೆಯೇ ಜನ ಜೀವನದ ಕೇಂದ್ರ ಬಿಂದುವಾಗಿ, ಸಮಾಜದ ಮೇಲೆ ಪ್ರಭಾವ ಬೀರಿದ್ದವು ಎಂಬುದಕ್ಕೆ ಈ ದೇವಾಲಯವೇ ಸಾಕ್ಷಿಯಾಗಿದೆ. ಧನಿಕರ ಧನವು ವಿದ್ಯೆಯ ಕಡೆಗೆ, ಕಲೆಗಳ ಕಡೆಗೆ ಹರಿಸುವಲ್ಲಿ ದೇವಸ್ಥಾನಗಳ ಹಿರಿಮೆ ಅಗಾಧವಾದುದು ಎಂಬುದು ಈ ದೇವಾಲಯದಿಂದ ತಿಳಿದುಬರುತ್ತದೆ.

ಕಲ್ಯಾಣ ಚಾಳುಕ್ಯ ಮಹಾಮಂಡಳೇಶ್ವರ ಹೈಹಯ ವಂಶದ ಶಿರಸರಸನು ನಾಗಾಯಿಯಲ್ಲಿ ಜ್ಞಾನದಾನ ಅಖಂಡವಾಗಿ ಅವ್ಯಾಹತವಾಗಿ ನಡೆಯುತ್ತಿರಲೆಂದು ಸಾಕಷ್ಟು ಭೂಮಿ ಸೀಮೆಗಳನ್ನು ದತ್ತಿ ಕೊಟ್ಟ ವಿಷಯ (ಬಿಡುಗಡೆ;೨೦೦೨;ಪು.೧೪) ಕ್ರಿ.ಶ.೧೦೫೪ರ ಶಾಸನದಿಂದ ತಿಳಿದು ಬರುತ್ತದೆ.

ಘಟಿಕಾಲಯಗಳ ಬಗೆಗೆ ಅಧಿಕೃತ ವಿವರಣೆ ಸಾಧ್ಯವಾಗಿಲ್ಲವಾದರೂ, ಅದು ಉನ್ನತ ವಿದ್ಯಾ ಚಟುವಟಿಕೆಗಳ ಕೇಂದ್ರ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅಂತೆಯೇ ನಾಗಾಯಿ, ಕಂಚಿ, ಬಳ್ಳಿಗಾವೆ, ಪ್ರಾಚೀನ ಕೇಂದ್ರಗಳನ್ನು ನೆನಪಿಸುವಂತಹ ದಕ್ಷಿಣದ ಭಾರತದಲ್ಲಿ ಖ್ಯಾತಿ ಪಡೆದ ಘಟಿಕಾಲಯವಾಗಿರುವುದರ ಜೊತೆಗೆ ದಕ್ಷಿಣ ಕಾಶಿ ಎಂದು ಪ್ರಸಿದ್ಧಿ ಪಡೆದಿದೆ. ನಾಗಾಯಿ ಇಂದು ಅವಸಾನದ ಅಂಚಿನಲ್ಲಿದ್ದು ಗತಕಾಲದ ವೈಭವವನ್ನು ಸಾರುತ್ತ ನಿಂತಿದೆ. ಅಲ್ಲಿನ ಅವಶೇಷಗಳನ್ನು ಗಮನಿಸಿದರೆ ಕಾಲನ ದಾಳಿಗೆ ಸಿಲುಕಿ ನಾಶವಾಗಿದೆ ಎಂದು ಊಹಿಸಬಹುದು. ಶಾಸನಗಳು ಆಯಾ ಕಾಲದ ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳ ಸಮಗ್ರ ಚಿತ್ರಣವನ್ನು ಕೊಡುವಲ್ಲಿ ಅಧಿಕೃತ ಆಕರಗಳಾಗಿವೆ. ಅನೇಕ ವಿಷಯಗಳನ್ನು ರಚಿಸುವಷ್ಟು ತನ್ನ ಮೂಡಿಯಲ್ಲಿರಿಸಿಕೊಂಡಿದೆ. ನಾಗಾಯಿಯ ಎಲ್ಲಮ್ಮ ದೇವಿಯ ಗುಡಿ ಇಲ್ಲಿ ಪ್ರಸಿದ್ಧಿ ಪಡೆದಿದ್ದು ದೇವಿಯನ್ನು ಜನರು ಇಂದಿಗೂ ಶ್ರದ್ಧಾ ಭಕ್ತಿಯಿಂದ

ಆರಾಧಿಸುತ್ತಲೇ ಬಂದಿದ್ದಾರೆ. ಸೀಗಿ ಹುಣ್ಣಿಮೆಯಂದು ಇಲ್ಲಿ ಜಾತ್ರೆ ನಡೆಯುತ್ತದೆ. ದಸರಾ ಹಬ್ಬದ ವೇಳೆಗೆ ಒಂಬತ್ತು ದಿನವೂ ದೇವಿಯ ಹೆಸರಿನಲ್ಲಿ ವಿಶೇಷ ಪೂಜೆ, ಉತ್ಸವ ನಡೆಯುತ್ತದೆ.

ಇಂಗಳಗಿ

ಶಾಸನಗಳಲ್ಲಿ ಇಂಗಳಗಿ, ಯಿಂಗುಳಿಗೆ ಅಥವಾ ಯಿಂಗಿಣಿಗಿ ಎಂಬೆಲ್ಲ ಉಲ್ಲೇಖವಿದೆ. ಪ್ರಾಚೀನ ಕಾಲದಲ್ಲಿ ಇಂಗುಣಿಗೆ ಎಂದು ಕರೆಯಲಾಗುತ್ತಿತ್ತು. ಕಲ್ಯಾಣ ಚಾಳುಕ್ಯ ದೊರೆ ಆರನೆಯ ವಿಕ್ರಮಾದಿತ್ಯನು ತನ್ನ ರಾಣಿಯಾದ ಜಕ್ಕಲದೇವಿಗೆ ಕೊಡಿಸಿದ ಸುಂದರ ಜಿನ ವಿಗ್ರಹವನ್ನು ಇಂಗಳಿಗೆಯಲ್ಲಿ ಪ್ರತಿಷ್ಠಾಪಿಸಲಾಗಿದೆ. ಜಿನೇಂದ್ರ ಗ್ರಹ (ಬಸದಿ)ವನ್ನು ಕಟ್ಟಿಸಿದಳೆಂದು ಶಾಸನದಿಂದ ತಿಳಿದುಬರುತ್ತದೆ. ಈ ಪ್ರದೇಶವನ್ನು ಆಗ ರಾಣಿ ಆಳುತ್ತಿದ್ದಳು. ಇವಳ ಧರ್ಮ ಕಾರ್ಯಗಳೂ, ಗುಣವಿಶೇಷಗಳೂ, ಪ್ರಶಸ್ತಿಗಳು ಈ ಶಾಸನದಲ್ಲಿ ವರ್ಣಿತವಾಗಿವೆ. ಸೇನಗಣ ನಾಯಕರಿಗೆ, ಮಲ್ಲಿಸೇನ ಭಟ್ಟಾರಕರಿಗೆ, ಸೇನಾಭಟ್ಟಾರಕರಿಗೆ ಕಾಲಂ ಕರ್ಚ್ಚಿ ಧಾರಾಪೂರ್ವಕವಾಗಿ ಭೂಮಿ ದಾನವಾಗಿ ಕೊಟ್ಟಳು. ಚತುರ್ವಿಧ ದಾನ ಚಿಂತಾಮಣಿ, ನಿಂತಬಿನೀ, ಕದಂಬ ಚೂಡಾಮಣಿ, ರಂಭಾವಿಳಾಸೋಹಸಿತಲಸನ್ಮೂರ್ತಿ, ದಿಗ್ವಿಜಯ ವಿಳಸಿತೋಜ್ವಳ ಕೀರ್ತಿ, ಕಲಿಕಾಲ ಪಾರ್ವ್ವತಿ, ಅಭಿನವಸರಸ್ವತಿ ಎಂಬ ಪ್ರಶಸ್ತಿ ಹೊಂದಿದ್ದಳು. ಸೀತಾದ್ಯನೇಕ ಮಹಾಸತೀಜನ ಪತಿಬ್ರತಾಚಾರ ಶೀಳೋದಾರ ವರ್ಣ್ನನ ಕಥಾ ಪ್ರಸಂಗೆ, ಜಿನಗದೋದಕ ಪವಿತ್ರಿಕ್ರಿತೋತ್ತಮಾಂಗೆ, ಶ್ರೀ ಮದರ್ಹತ್ಪರಮೇಶ್ವರ ಚಾರುಚರಣಾರ್ಚ್ಚನವಿನೋದೆ, ಸಹಜಬೆಡಂಗಿ ಎಂದು ವರ್ಣಿಸಲಾಗಿದೆ. ಜೈನ ಧರ್ಮಿಯಳಾದ ಜಾಕಲದೇವಿಯ ಉಲ್ಲೇಖ ಇಂಗಳಗಿಯ ಶಾಸನದಲ್ಲಿದೆ.

ಮಹಾಮಂಡಳೇಶ್ವರ ಬಿಜ್ಜರಸ, ಇಂಗಳಿಗೆ ಪ್ರಭು ನಾಗರಸ, ಪೆರ್ಗ್ಗಡೆ ಬಸವಯ್ಯ ಹಾಗೂ ಅಲ್ಲಿನ ಪಂಚಮಠದವರು ಏಕಸ್ತರಾಗಿ ಗುಡ್ಡವ್ವೆಗಳ ಸಮ್ಮುಖದಲ್ಲಿ ಮೂಲಸ್ಥಾನ ದೇವರ ಪಾದಾರಾಧಕಿ 'ಮಹಾನುಭಾವೆ' ಯೆಂದು ಕೀರ್ತಿ ಸಂಪಾದಿಸಿದ ಕ್ಷೇತ್ರ ಸನ್ಯಾಸಿನಿ ಅಚಲವ್ವೆಗಳ ಪಾದ ತೊಳೆದು ಭೂಮಿ, ನಿವೇಶನ, ಗಾಣ ಹಾಗೂ ಮಾರಾಟದ ವಸ್ತುಗಳ ಮೇಲಿನ ಸುಂಕವನ್ನು ಮೂಲಸ್ಥಾನ ದೇವರಿಗೆ ಸಲ್ಲಿಸಿದರು ಎಂಬ ಉಲ್ಲೇಖ ಕ್ರಿ.ಶ.೧೨೦೯ರ ಶಾಸನದಿಂದ ತಿಳಿದುಬರುತ್ತದೆ. ಕಾಳಾಮುಖ ಧರ್ಮವು ಪರಿವರ್ತನೆಗೊಂಡಿದ್ದಿರಬಹುದಾದ ಸ್ಪಷ್ಟ ಚಿಹ್ನೆಗಳು ಈ ಶಾಸನದಲ್ಲಿ ಕಾಣಿಸುತ್ತಿರುವುದು ಗಮನಾರ್ಹ. ಸಿದ್ಧರಾಮ, ಬಸವ ಶಿವಶರಣಾದಿಗಳ ಪ್ರಭಾವ ಇಲ್ಲಿನ ಹೆಸರುಗಳಲ್ಲಿ ಕಾಣಿಸುವುದಲ್ಲದೆ ಬಸವ ಪೂರ್ವಯುಗದ ಶಿವಶರಣರ ಉಲ್ಲೇಖವನ್ನು ವೀರಗಣಂಗಳು 'ಗಣಮಠ ಅಸಂಖ್ಯಾತರು' ದಶಗಣ ಶಿಂಗಿದೇವ, ಸಕಳಲಿಂಗದೇವ, ಪದಗಳು ಸೂಚಿಸುತ್ತವೆ. ಪುರುಷರಂತೆ ಸ್ತ್ರೀಯರೂ ಸಹ ದೇವಸ್ಥಾನದ ಸ್ಥಾನಿಕರೆನ್ನಿಸಿಕೊಂಡಿರುವುದಕ್ಕೆ ಇಲ್ಲಿನ 'ಅಚಲವ್ವೆ' ನಿದರ್ಶನವಾಗಿದ್ದಾಳೆ.

ಹೈಹಯ ವಂಶದ ಆನೆಗದೇವನ ಮಗನಾದ ವೀರಬಿಜ್ಜರಸನು ಅರಳು-೩೦೦ರ ಬಳಿಯ ಬಾಡ ಇಂಗಳಗಿಯ ಪ್ರಭು ನಾಗರಸ, ಪೆರ್ಗ್ಗಡೆ ಬಸವಯ್ಯ ಅಲ್ಲಿನ ಪಂಚಮಠದಲ್ಲಿದ್ದು, ಇವರೆಲ್ಲರು ಸೇರಿ ಮೂಲಸ್ಥಾನ ಪಾದಾರಾಧನೆಯ ಕ್ಷೇತ್ರ ಸನ್ಯಾಸಿನಿ ಅಚಲವ್ವೆಯ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ಮಾಡಿ ಶ್ರೀ ಸಿದ್ಧರಾಮನಾಥ ದೇವರ, ದಶಗಣ ಶಿಂಗಿದೇವ, ಬಿಜ್ಜೇಶ್ವರದೇವರು, ರೇವಣೇಶ್ವರ,

ಕಂಪ್ಲೇಶ್ವರ, ಕೇದಾರದೇವರು, ನಾಗೇಶ್ವರ, ಸಕಲ ಲಿಂಗದೇವರಿಗೆ ಗುಡ್ಡವ್ವೆಗಳು ಮುಖ್ಯವಾಗಿ ಗಣಮಠಕ್ಕೆ ದಾನ ಕೊಟ್ಟ ಉಲ್ಲೇಖ ಇದೇ ಶಾಸನದಿಂದ ತಿಳಿದು ಬರುತ್ತದೆ.

ಕ್ರಿ.ಶ.೧೦೭೧ರ ಶಾಸನವು ಹೈಹಯ ವಂಶದ ಬಾಚರಸನ ಹೆಂಡತಿ ಕಾಳಬ್ಬರಸಿಯ ಪ್ರಶಸ್ತಿಗಳಾದ "ಮನೋವಲ್ಲಭೆಯ ಭೂಮಿದಾನ ಮಹೋನ್ನತಿಯನ್ತೆನೆ॥ ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸತಸಹಸ್ರ ಪರಮಗಂಭೀರ ಭೋಗಭಾಗಿನಿಯರುಂ ದ್ವಿತೀಯ ಲಕ್ಷ್ಮಿ ಸಮಾನೆಯರುಮಪ್ಪ ಬಾಚಮಹಾದಾಜನರ್ಧಾಂಗನೆ ಶ್ರೀ ಕಾಳಬ್ಬರಸಿ" ಎಂದು ಉಲ್ಲೇಖವಿದೆ. ಈಕೆ ಹಂದರ್ಕಿಯ ಲೋಕೇಶ್ವರ ದೇವರಿಗೆ ದಾನ ಕೊಟ್ಟ ವಿಷಯವು ತಿಳಿದು ಬರುತ್ತದೆ. ಹೈಹಯ ವಂಶದ ಬಿಜ್ಜರಸ ಈತನ ಪಟ್ಟ ಮಹಾದೇವಿ ಸಿರಿಯಾದೇವಿ ಹಾಗೂ ಇಂಗಳಗಿಯ ಪ್ರಮುಖರು ಸೇರಿ ಇಲ್ಲಿಯ ಲೋಕೇಶ್ವರ ದೇವಸ್ಥಾನಕ್ಕೆ ದಾನಕೊಟ್ಟ ವಿಷಯ ಇದೇ ಶಾಸನದಿಂದ ತಿಳಿದುಬರುತ್ತದೆ.

**ಕಾಳಗಿ**

ಶಾಸನಗಳಲ್ಲಿ ಕಾಳುಗೆ, ಕಾಳಿಗೆ, ಕಲ್ಲುಗೆ, ಕಾಳ್ಗಿ ಎಂದೇ ಉಲ್ಲೇಖಗೊಂಡಿದೆ. ಕ್ರಿ.ಶ.೧೧೦೩ರ ಶಾಸನವು ಪ್ರಾರಂಭದಲ್ಲಿ ಚಾಳುಕ್ಯ ವಂಶಾವಳಿ ಆರನೆಯ ವಿಕ್ರಮಾದಿತ್ಯನು ಕಾಳುಗೆಯ ಶ್ರೀ ಸ್ವಯಂಭೂ ಕಾಳೇಶ್ವರ ದೇವರಿಗೆ ದಾನ ಕೊಟ್ಟ ಉಲ್ಲೇಖ ತಿಳಿದು ಬರುತ್ತದೆ. ಕ್ರಿ.ಶ.೧೧೬೩ರ ಶಾಸನದಲ್ಲಿ ಖಾಂಡವ ಮಂಡಲ ಎಂದು ಪ್ರಸಿದ್ಧಿ ಪಡೆದಿದೆ. ಚಾಳುಕ್ಯ ಮೂರನೆಯ ತೈಲಪನ ಮಹಾಮಂಡಳೇಶ್ವರನಾದ ಬಾಣವಂಶದ ವೀರಗೊಂಕರಸನು ರಾಜಧಾನಿ ಕಾಳುಗೆಯಿಂದ ಆಳ್ವಿಕೆ ಮಾಡುತ್ತಿದ್ದನು. ಖಾಂಡವ ಮಂಡಲದ ಅಧಿಪತಿಯಾಗಿದ್ದು, ಮನ್ನೆದಡಿ ಸಾಸಿರನಾಡು ಆಳುತ್ತಿದ್ದನು. ಈತ ಮನ್ನೆದಡಿ ಸಾಸಿರದ ನೂರುಂ ಬಾಡದೊಳಗಣ ತೆಂಗಳಿ ಇಪ್ಪತ್ತರ ಬಳಿಯಬಾಡದ ಮಲ್ಲಗಾಣ ಗ್ರಾಮವನ್ನು ಉಂಬಳಿಯಾಗಿ ಕೊಟ್ಟ ಉಲ್ಲೇಖ ತಿಳಿದುಬರುತ್ತದೆ. ಮಹಾಮಂಡಳೇಶ್ವರ ವೀರಗೊಂಕರಸ, ಈತನ ಮೊಮ್ಮಗ ಗೊಂಕರಸರು ಸೇರಿ ಗೊಂಕೇಶ್ವರ ದೇವಾಲಯ ನಿರ್ಮಿಸಿ, ಇದೇ ದೇವಾಲಯದ ಗೊಂಕೇಶ್ವರ ದೇವರ ಸ್ಥಾನದಾಚಾರ್ಯರು ಶ್ರೀಮತ್ಕಲ್ಯಾಣ ಶಕ್ತಿ ಪಂಡಿತ ದೇವರಿಗೆ ವೀರಗೊಂಕರಸ, ಗೊಂಕರಸರು ದಾನ ಕೊಟ್ಟ ಉಲ್ಲೇಖವಿದೆ.

ಕ್ರಿ.ಶ.೧೧೭೩ರ ಶಾಸನವು ಕಳಚೂರಿ ವಂಶದ ರಾಯಮುರಾರಿ ಸೋಯಿದೇವನು ಮುದೆಗನೂರು ನೆಲೆವೀಡಿನಲ್ಲಿರುವಾಗ ದಂಡನಾಯಕ ಮಾಧವಯ್ಯ ಖಾಂಡವ ಮಂಡಳೇಶ್ವರ ಬಾಣವಂಶದ ವೀರಗೊಂಕರಸನ ಮಗ ಉದಯಾದಿತ್ಯ, ಕಾಳರಸನ ಮಗ ವೀರಗೊಂಕರಸರು ರಾಜಧಾನಿ ಕಾಳುಗೆಯ ಶ್ರೀ ಕಾಳೇಶ್ವರ ದೇವರಿಗೆ ತೆಂಗುಳಿಯ ಬಳಿಯ ಬಾಡಮಡಿಯ ಮಾರುಡಿಗೆಯನ್ನು ಸರ್ವನಮಶ್ಯವಾಗಿ ಬಿಟ್ಟರು. ಈ ದತ್ತಿಯನ್ನು ಸ್ಥಾನಪತಿ ರಾಮೇಶ್ವರ ಪಂಡಿತರಿಗೆ ಮಾನ್ಯ ಮಾಡಲಾಯಿತು ಎಂಬ ಉಲ್ಲೇಖವಿದೆ.

**ತೆಂಗಳಿ**

ತೆಂಗಳಿ ಗ್ರಾಮವು ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಖಾಂಡವ ಮಂಡಲ ಎಂದೇ ಈ ಪ್ರದೇಶಕ್ಕೆ ಕರೆದಿರುವುದು ಗಮನಾರ್ಹವಾಗಿದೆ. ತೆಂಗಳಿ-೭೦ ಎಂದು ಕರೆದಿದ್ದು ಎಪ್ಪತ್ತು ಗ್ರಾಮಗಳನ್ನು ಒಳಗೊಂಡ ಆಡಳಿತ ಕೇಂದ್ರವಾಗಿದೆ. ಸರ್ವ ನಮಸ್ಯೆದಗ್ರಹಾರ ತೆಂಗುಳಿ ಎಂದೇ ಉಲ್ಲೇಖಗೊಂಡಿದೆ. ಈ ಗ್ರಾಮದಲ್ಲಿನ ಕ್ರಿ.ಶ.೧೦೮೪ರ ಶಾಸನ ರಾಣಿ ಮೈಳಾಲದೇವಿಯು ಮನ್ನೆ ೩೦ರಲ್ಲಿದ್ದ ಸೊನ್ನಾಲ ಹಾಗೂ ಪಟ್ಟವಾಡೆ ನೆಲೆವೀಡಿನಿಂದ ಆಳುತ್ತಿದ್ದಳು. ಈಕೆಯದೇ ಇನ್ನೊಂದು ಶಾಸನ ಕ್ರಿ.ಶ.೧೦೮೭ರ ಶಾಸನವು ಐದು ಗ್ರಾಮಗಳನ್ನು ಬ್ರಾಹ್ಮಣರಿಗೆ ದತ್ತಿ ಕೊಟ್ಟ ವಿಷಯದ ಉಲ್ಲೇಖವಿದೆ. ಕ್ರಿ.ಶ.೧೧೦೭ರ ಶಾಸನವು ಆದಿತ್ಯ ಭಟ್ಟೋಪಾಧ್ಯಾಯ ಹಾಗೂ ಮಗಳಾದ ಶ್ರೀದೇವಿಯಕ್ಕ ನಮಸ್ಯದಗ್ರಹಾರ ತೆಂಗಳಿಯಲ್ಲಿ ಶ್ರೀಜಗನ್ನಾಥ ಕೇಶವ ದೇವರ ಪ್ರತಿ (ಮೂರ್ತಿ) ಮಾಡಿಸಿ, ದೇವಾಲಯ ಕಟ್ಟಿಸಿ, ಆ ದೇವಾಲಯಕ್ಕೆ ದಾನ ಕೊಟ್ಟಿದ್ದು. ಗೊಂಕರಸನ ದಂಡನಾಯಕನಾದ ತೆಂಗಳಿಯ ಮಹಾಜನಂಗಳು, ಪ್ರಭುಗಳು ಬಿಬ್ಬರಸನ ಅನುಮತಿಯಿಂದ ದಾನ ಕೊಟ್ಟ ವಿಷಯ ತಿಳಿದು ಬರುತ್ತದೆ.

ಕ್ರಿ.ಶ. ೧೧೬೨ರ ಶಾಸನವು ತೆಂಗಳಿ ಸುತ್ತಲಿನ ಪ್ರದೇಶಕ್ಕೆ ಖಾಂಡವ ಮಂಡಲವೆಂದು ಹೆಸರಿದ್ದು ಇದನ್ನು ಪುರಾಣ ಪ್ರಸಿದ್ಧ ಬಾಣರಸರು ಆಳಿದ ವಿಷಯ ಇಲ್ಲಿಂದ ತಿಳಿದು ಬರುತ್ತದೆ. ಮೂರನೆಯ ತೈಲಪನ ಮಹಾಮಂಡಳೇಶ್ವರ ವೀರಗೊಂಕನ ದಂಡನಾಯಕ ನಾಚರಸನು ತೆಂಗಳಿಯಲ್ಲಿ ನಾಚೇಶ್ವರ, ಭೋಗೇಶ್ವರ ಹಾಗೂ ಇತರ ಸ್ಥಳ ದೈವತರಿಗೆ ತೆಂಗಳಿ ಅಗ್ರಹಾರದ ಮಹಾಜನಂಗಳ ಸಮಕ್ಷಮದಲ್ಲಿ ದಾನ ಕೊಟ್ಟ ವಿಷಯ ತಿಳಿದು ಬರುತ್ತದೆ.

ಬಸವಪೂರ್ವ ಯುಗದ ಶಿವಶರಣರಲ್ಲಿ ಕೆಲವರನ್ನು ಶಾಸನಗಳು ಉಲ್ಲೇಖಿಸಿವೆ. ಶಿವಗಣಂಗಳಲ್ಲಿ ಪರಶಿವನಿಂದ ಬಾಗಿಲು ಕಾಯಿಸಿಕೊಂಡ ಓರ್ವ ಶಿವಭಕ್ತಾಗ್ರೇಸರ ಬಾಣ, ಬಾಣನ ವಂಶೋದ್ಭವರಾಗಿರುವ ಅಲಂದೆ ಸಾಸಿರದ ಪ್ರದೇಶದ ಸಾಮಂತಾಧಿಪತಿಗಳಾದ್ದರು ಎಂಬ ವಿವರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಇಲ್ಲಿಯ ಶಾಸನಗಳು ಬಾಣ ಅರಸರ ಆಳ್ವಿಕೆಯ ಬಗ್ಗೆ ಹೆಚ್ಚಿನ ಮಾಹಿತಿ ಒದಗಿಸಿಕೊಡುತ್ತವೆ. ಚಾಂದರಸ ಮತ್ತು ಬಾಣರಸ ಇಬ್ಬರು ಸಹೋದರರಿದ್ದು, ಪುರಾಣಗಳಲ್ಲಿ ಬರುವ ಬಲಿ ಚಕ್ರವರ್ತಿಯ ಮಗನು ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ ಇಬ್ಬರು ಸಹೋದರರು ನೂರು ಹಳ್ಳಿಗಳನ್ನು ಒಳಗೊಂಡ ಮನ್ನದಡಿ-೧೦೦೦ ಎಂಬ ಪ್ರದೇಶವನ್ನು ಕ್ರಿ.ಶ.೧೧೬೨ರಲ್ಲಿ ಆಳ್ವಿಕೆ ಮಾಡಿದ್ದು ತಿಳಿದುಬರುತ್ತದೆ. ಬಾಣರು ಶ್ರೇಷ್ಠ ಕುಟುಂಬದವರಾಗಿದ್ದು, ದಕ್ಷಿಣ ಭಾರತದ ರಾಜಕೀಯ ಇತಿಹಾಸದಲ್ಲಿ ಸಾಮಂತರಾಗಿ ಕ್ರಿ.ಶ.೩-೧೬ನೆ ಶತಮಾನದವರೆಗೆ ಆಳ್ವಿಕೆ ಮಾಡಿದ್ದಾರೆ. ನಂತರ ಇವರು ವಿವಿಧ ಪಂಗಡಗಳಲ್ಲಿ ಹರಿದು ಹಂಚಿ ಹೋಗಿ ಆಂಧ್ರ, ತಮಿಳುನಾಡು ಮತ್ತು ಮೈಸೂರು ಪ್ರದೇಶಗಳಲ್ಲಿ ನೆಲೆಸಿದ್ದರು. ಈ ಭಾಗದಲ್ಲಿ ದೊರೆತ ಶಾಸನಗಳು ಖಾಂಡವ ಮಂಡಲದ ಬಾಣ ಅರಸರ ಬಗ್ಗೆ ಲಿಖಿತ ಮಾಹಿತಿ ನೀಡುತ್ತವೆ.

**ಮರತೂರ**

ಕ್ರಿ.ಶ.೧೧೨೪ರ ಮರತೂರ ಶಾಸನವು ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದ್ದಾಗಿದೆ. ಸೋಮನೆಂಬುವವನು (ಸೋಮೇಶ್ವರ II) ಮತ್ತು ವಿಕ್ರಮಾರ್ಜುನ (ವಿಕ್ರಮಾದಿತ್ಯ VI) ಎಂಬುವವರು ಅಣ್ಣ ತಮ್ಮಂದಿರು. ಇವರು ವೀರರಾಗಿದ್ದು ದಾನ ಮಾಡುವುದರಲ್ಲಿ ಕಲ್ಪವೃಕ್ಷದಂತೆ ಇದ್ದರು. ಮತ್ತೆ ವೈಭವದಲ್ಲಿ ಇಂದ್ರನಿಗೂ, ತೇಜಸ್ಸಿನಲ್ಲಿ ಸೂರ್ಯನಿಗೂ ಸಮನಾಗಿದ್ದರು. ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ **ಮಿತಾಕ್ಷರ** ಕರ್ತೃ ವಿಜ್ಞಾನೇಶ್ವರ, ಇವನು ಈತನ ಆಸ್ಥಾನದಲ್ಲಿ ಅಲಂಕಾರಗೊಂಡಿದ್ದನು. ಇವರ ಮಗ ಬೀಚಿರಾಜ, ಈತ ಮರತೂರಿನಲ್ಲಿ ಪೆರ್ಗ್ಗಡೆಯಾದ ವಿಷಯ ಇಲ್ಲಿದೆ. ಶಿವದೇವಾಲಯವನ್ನು ಕಟ್ಟಿಸಿ ಇದರ ಜೊತೆಗೆ ಕೇಶವ ದೇವರಿಗೂ ದೇವಾಲಯವನ್ನು (ವಿಜ್ಞಾನೇಶ್ವರ ಮಿತಾಕ್ಷರ;೨೦೦೫;ಪು.೧೨೮) ಕಟ್ಟಿಸಿದನು. ಅಲಂದೆ-೧೦೦೦ ಭೂಭಾಗದಲ್ಲಿರುವ ಈ ದೇವಾಲಯಕ್ಕೆ ಅಲ್ಲಿನ ನಾಡಪ್ರಭು ಗೊಂಕರಸನು ಮತ್ತು ಈತನ ಪುತ್ರ ಕತ್ತ ನೃಪಾಳ, ಆರನೆಯ ವಿಕ್ರಮಾದಿತ್ಯರು ದೇವಾಲಯ ಖರ್ಚಿಗೆಂದು ದಾನ ದತ್ತಿ ಕೊಟ್ಟ ವಿಷಯವು ತಿಳಿದುಬರುತ್ತದೆ.

ಕಾಶಿ ವಿಶ್ವನಾಥ ಹಾಗೂ ಕಾಳಿಂಗೇಶ್ವರ ದೇವಾಲಯದ ಬೀಚಿ ರಾಜನ ಕಾಲದ ಶಾಸನ ದೊರಕಿದೆ. ಈ ದೇವಾಲಯಗಳು ಚಾಳುಕ್ಯ ಶಿಲ್ಪ ಶೈಲಿಯಲ್ಲಿರುವುದರಿಂದ ಮತ್ತು ಶಾಸನವು ಇಲ್ಲಿಯೇ ದೊರೆತಿರುವುದರಿಂದ ಇವು ಪೆರ್ಗಡೆ ಬೀಚಿರಾಜ ಕಟ್ಟಿಸಿದ ದೇವಾಲಯಗಳೆಂಬುದರಲ್ಲಿ ಸಂಶಯವಿಲ್ಲ. ಈ ಶಾಸನದಲ್ಲಿ ಬೀಚಿರಾಜನು ತನ್ನನ್ನು "ಶ್ರೀಮತ್ ವಿಜ್ಞಾನೇಶ್ವರ ಭಟ್ಟಾರಕ ದೇವರ ಮಗಂ" ಎಂದು ಹೇಳಿಕೊಂಡಿದ್ದಾನೆ.

ವಿಜ್ಞಾನೇಶ್ವರರು ಜನಿಸಿದ್ದು 'ಅಟ್ಟಳೆನಾಡಿನ ಮಾಸೆಯಮಡು' ಎಂಬ ಗ್ರಾಮದಲ್ಲಿ. ಇದೊಂದು ಪುರಾತನ ಗ್ರಾಮ. ಕಾರಂಜ ನದಿಯ ದಡದ ಮೇಲಿರುವ ಈ ಗ್ರಾಮದ ಶಾಸನದಲ್ಲಿ ತಿಳಿಸಿರುವ ಶಿವಾಲಯ ಈಗ ಇಲ್ಲ. ನೂರಾರು ವರ್ಷಗಳ ಹಿಂದೆ ಮಾಸಿಲಿಂಗ ಎಂಬ ದೇವಾಲಯವಿತ್ತೆಂದು, ಈಗ ಅದು ಹಾಳಾಗಿ ಹೋಗಿದೆಯೆಂದು ಊರಿನ ಜನ ಹೇಳುತ್ತಾರೆ. ಕಿರಿಯನಾದ ವಿಕ್ರಮಾದಿತ್ಯನು ಎಂತಹ ಕಡುವೈರಿಯನ್ನು ನಾಶಗೊಳಿಸುವ ಶಕ್ತಿ ಹೊಂದಿದ್ದನು. ಈತನ ಪಾದಕ್ಕೆ ಅನೇಕ ಜನ ಮಾಂಡಲಿಕರು, ಮಹಾಮಂಡಳೇಶ್ವರರು ನಮಸ್ಕರಿಸುತ್ತಿದ್ದರು. ಆತನ ಪಾದಗಳು ಅವರ ಕಿರೀಟಗಳಿಂದ ಅಲ್ಲಿನ ಹೊಳೆಯುವ ರತ್ನಗಳ ಬೆಳಕಿನಿಂದ-ಅಲಂಕೃತವಾಗಿ ಬೆಳಗಿದವು. ಅಂತಹ ಶ್ರೇಷ್ಠ ವ್ಯಕ್ತಿ ವಿಕ್ರಮಾದಿತ್ಯನು ಪಾದ ಮುಟ್ಟಿ ನಮಸ್ಕರಿಸುತ್ತಿದ್ದನು. ಕಾರಣ ವಿಜ್ಞಾನೇಶ್ವರನು ಸಾಮಾನ್ಯನಲ್ಲ ಇವನೊಬ್ಬ ವಿದ್ವಾಂಸರಾಗಿದ್ದನು.

ಯಾಜ್ಞವಲ್ಕ್ಯ ಸ್ಮೃತಿಗೆ ವಿಜ್ಞಾನೇಶ್ವರ ಬರೆದ ವ್ಯಾಖ್ಯಾನ 'ಮಿತಾಕ್ಷರ' ಇದು ಮಹತ್ವದ ಕೃತಿಯಾಗಿದೆ. ಇಡೀ ಭಾರತದಾದ್ಯಂತ 'ಮಿತಾಕ್ಷರ'ವನ್ನು ಅತ್ಯಂತ ಗೌರವದಿಂದ ಅನುಸರಿಸಲಾಗುತ್ತಿದೆ. ಇವರು ದೇಶ-ವಿದೇಶಗಳಲ್ಲೂ ಮಾನ್ಯತೆ ಪಡೆದವರಾಗಿದ್ದಾರೆ. ಬಲಿಷ್ಠ ಚಾಳುಕ್ಯ ಚಕ್ರವರ್ತಿಯು ಕೂಡ ಜ್ಞಾನಿಗೆ ತಲೆಬಾಗುತ್ತಾನೆನ್ನುವುದಕ್ಕೆ ವಿಜ್ಞಾನೇಶ್ವರನೇ ಸಾಕ್ಷಿ. ಹಿಂದೂ ಕಾನೂನು ಸಂಹಿತೆಯಾಗಿರುವ

ಮಿತಾಕ್ಷರ ಒಂಬೈನೂರು ವರ್ಷಗಳ ಹಿಂದೆ ರಚಿತವಾಗಿದ್ದರೂ ಎಲ್ಲ ಕಾಲಕ್ಕೂ, ಅದು ಸಮಾಜಕ್ಕೆ ಪ್ರಸ್ತುತವಾಗಿದೆ.

ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನ ಶಾಸನಗಳಲ್ಲಿಯ ವಿಷಯವನ್ನು ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕವಾಗಿ ಉಲ್ಲೇಖಿಸಿರುವ ಈ ಅಧ್ಯಯನದಲ್ಲಿ ವಿಷಯದ ವಿವರಣೆ ಕಿರು ಪರಿಚಯವಾಗಿದೆ. ಒಂದು ನಾಡಿನ ಐತಿಹಾಸಿಕ, ಸಾಂಸ್ಕೃತಿಕ ಜೀವನ ಸಂಗತಿಗಳನ್ನು ದಾಖಲೆಯಾಗಿಸುವ ಸಾಮಗ್ರಿಗಳಲ್ಲಿ ಶಾಸನಗಳಿಗೆ ಅಗ್ರಸ್ಥಾನವಿದೆ. ಶಾಸನಗಳಿಂದ ಅಲ್ಲಿನ ರಾಜರು ಆಳಿದ ರಾಜಕೀಯ ಭದ್ರತೆ, ಸಾಮಾಜಿಕ ಸಮಾನತೆ, ಆರ್ಥಿಕ ಸುಭೀಕ್ಷೆ, ಧಾರ್ಮಿಕ ಸಾಮರಸ್ಯ, ಸಾಂಸ್ಕೃತಿಕ ಪರಂಪರೆ ಕಂಡು ಬರುತ್ತದೆ. ಪ್ರಸ್ತುತ ಪ್ರಬಂಧದಲ್ಲಿ ಐತಿಹಾಸಿಕವಾದ ಅಂಶಗಳನ್ನು ಒಳಗೊಂಡಿದ್ದು, ಇವುಗಳ ಇತಿಹಾಸ ಸಂಕ್ಷಿಪ್ತ ಪರಿಚಯದೊಂದಿಗೆ ಈ ಅಧ್ಯಯನದಲ್ಲಿ ಮಾಡಲಾಗಿದೆ. ಇವುಗಳ ವಿವರವಾದ ವಿಷಯ ಮುಂದಿನ ಅಧ್ಯಯನದಲ್ಲಿ ಚರ್ಚೆ ಮಾಡಲಾಗಿದೆ. ಚಿತ್ತಾಪುರ ತಾಲೂಕು ತನ್ನದೇ ಆದ ವೈಶಿಷ್ಟ್ಯದಿಂದ, ಐತಿಹಾಸಿಕ ಮಹತ್ವದಿಂದ, ಧಾರ್ಮಿಕ ಚಟುವಟಿಕೆಯಿಂದ, ನೈಸರ್ಗಿಕ ಚೆಲುವಿನಿಂದ ಮಹತ್ವ ಪಡೆದಿದೆ. ಹಾಗಾಗಿ ಇದು ಪ್ರೇಕ್ಷಣೀಯ ಸ್ಥಳವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

* * * * *

ಒಂದು ಕಾಲದ ಚರಿತ್ರೆಯನ್ನು ಅಧ್ಯಯನ ಮಾಡಲು ಆಯಾ ಕಾಲದ ಘಟನೆಗಳೇ ಪ್ರಮುಖ ಆಧಾರಗಳಾಗಿವೆ. ಅದರಂತೆ ಆ ಪ್ರದೇಶದಲ್ಲಿ ಅಳಿದುಳಿದ ಎಲ್ಲವೂ ಇತಿಹಾಸಕ್ಕೆ ಪೂರಕ ಅಂಶಗಳಾಗಿ ಕಾರ್ಯನಿರ್ವಹಿಸುತ್ತವೆ. ಅನೇಕ ರಾಜಮನೆತನಗಳು ಈ ಪ್ರದೇಶದಲ್ಲಿ ಆಡಳಿತ ನಡೆಸಿ ಸಾಂಸ್ಕೃತಿಕ ಜೀವನದ ಮೇಲೆ ತಮ್ಮದೆಯಾದ ಪ್ರಭಾವವನ್ನು ಬೀರಿವೆ ಎಂಬುದನ್ನು ಈ ಭಾಗದಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದು. ಇತ್ತೀಚಿನ ಸಂಶೋಧನೆಯಲ್ಲಿ ನಡೆದ ಸನ್ನತಿಯ ಭೂಉತ್ಖನನದಿಂದ ಬೌದ್ಧ ಸ್ತೂಪಗಳು ದೊರೆತಿವೆ. ಕ್ರಿಪೂ. ೩ನೆಯ ಶತಮಾನದಲ್ಲಿ ದೊರೆತ ಶಿಲಾಶಾಸನಗಳಿಂದ ಇತಿಹಾಸ ಮತ್ತಷ್ಟು ಹಿಂದೆ ಸರಿಯುತ್ತದೆ. ಇಲ್ಲಿ ಅಶೋಕನ ಕಾಲದ ನಾಲ್ಕು ಶಿಲಾಶಾಸನಗಳು ದೊರೆತಿವೆ.

ಶಾಸನಗಳು ಸಮಕಾಲಿನ ದಾಖಲೆಗಳಾಗಿರುವುದರಿಂದ ಹೆಚ್ಚಾಗಿ ಇವುಗಳನ್ನು ನಂಬಬಹುದು. ಅಲ್ಲದೆ ಅರಸರು ಯಾವ ಮನೆತನದೊಂದಿಗೆ ತಮ್ಮ ವೈರತ್ವ ಹೊಂದಿದರೆಂಬುದು ತೂಗಿ ನೋಡಿದಾಗ, ಅವರ ವೈರತ್ವ ಯಾವ ಕಾರಣಕ್ಕಾಗಿ, ಯಾವ ಅರಸರೊಂದಿಗೆ ಎಂದು ನಿರ್ಧರಿಸಲು ಬರುವುದು. ಶಾಸನಗಳು ಕೇವಲ ದಾನ ಕೊಟ್ಟ ವಿಷಯವನ್ನಾಗಲಿ, ಅರಸರ ಪ್ರಶಸ್ತಿಯನ್ನಾಗಲಿ ತಿಳಿಸಿದರು, ಇವುಗಳ ಸಹಾಯದಿಂದ ಅಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಜೀವನ ಕಟ್ಟಿಕೊಳ್ಳಲು ಶಾಸನಗಳು ಸಹಾಯಕವಾಗಿವೆ. ಬರೀ ರಾಜಕೀಯ ಚಾರಿತ್ರ್ಯವನ್ನು ಅವು ಹೇಳುವುದಿಲ್ಲ. ಬದಲಾಗಿ ಅಂದಿನ ಸಾಮಾಜಿಕ ಜೀವನದ ಅನೇಕ ವಿವರಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತವೆ. ಅವುಗಳಲ್ಲಿ ರಾಜಕೀಯವೇ ಪ್ರಧಾನವಾಗಿ ಕಂಡುಬಂದರೂ ಸೂಕ್ಷ್ಮವಾಗಿ ಗಮನಿಸಿದಾಗ ಅನೇಕ ಘಟನೆಗಳ ಮೇಲೆ ಶಾಸನಗಳು ಬೆಳಕನ್ನು ಚೆಲ್ಲುತ್ತವೆ. ಈ ತಾಲೂಕಿನಲ್ಲಿ ನಡೆದಿರುವ ಅನೇಕ ಉತ್ಖನಗಳು ಇಲ್ಲಿನ ಪ್ರಾಗೈತಿಹಾಸಿಕ ನೆಲೆಗಳ ಬಗೆಗೆ ಬೆಳಕು ಚೆಲ್ಲಿವೆ. ಸನ್ನತಿಯಲ್ಲಿ ನಡೆದಿರುವ ಭೂ ಶೋಧನೆಯಲ್ಲಿ ಹಳೇ ಶಿಲಾಯುಗದ ಆಯುಧಗಳು ಕಂಡು ಬಂದಿರುವುದರಿಂದ ಈ ಪ್ರದೇಶವು ಆದಿಮಾನವರ ನೆಲೆಯಾಗಿತ್ತೆಂಬುದನ್ನು ಸೂಚಿಸುತ್ತದೆ.

ಈ ಪ್ರದೇಶದ ಸಂಶೋಧನೆಯಲ್ಲಿ ದೊರಕಿರುವ ಬೌದ್ಧ ಧರ್ಮದ ಕುರುಹುಗಳು, ಶಿಲಾಶಾಸನಗಳಿಂದ ಈ ಪ್ರದೇಶ ಕ್ರಿಪೂ.ದಲ್ಲೆ ಕರ್ನಾಟಕದ ಅತ್ಯಂತ ಪ್ರಮುಖ ಪ್ರದೇಶವಾಗಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕದ ಇತಿಹಾಸ ಆರಂಭ ಕಾಲವು ಮೌರ್‍ಯರ ಆಧಿಪತ್ಯದೊಂದಿಗೆ ಪ್ರಾರಂಭವಾಗುತ್ತದೆ. ಚಿತ್ತಾಪುರ ತಾಲೂಕಿನ ಶಾಸನಗಳ ಅಧ್ಯಯನ ಕೈಗೊಂಡಾಗ ಮೌರ್ಯರ, ಶಾತವಾಹನರ ಹಾಗೂ ಕಲ್ಯಾಣ ಚಾಳುಕ್ಯರ ಶಾಸನಗಳು ಹೆಚ್ಚಾಗಿ ಇಲ್ಲಿ ದೊರೆತಿವೆ. ಮೌರ್ಯರ ಕಾಲಕ್ಕಿಂತ ಪೂರ್ವ ಇತಿಹಾಸ ತಿಳಿದುಕೊಳ್ಳಲು ಯಾವುದೇ ಲಿಖಿತ ದಾಖಲೆಗಳು ದೊರೆತಿಲ್ಲ. ಕರ್ನಾಟಕದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಉದಯಗೊಂಡ ನಂತರ, ನಂದರು ಮತ್ತು ಮೌರ್ಯರು ತಮ್ಮ ಚಕ್ರಾಧಿಪತ್ಯವನ್ನು ದಖ್ಖನಿನಲ್ಲಿ ಸ್ಥಾಪಿಸಿದರು.

ಮೊದಲು ನಂದರು ಕುಂತಲ (ಕರ್ನಾಟಕ)ವನ್ನು ಆಳಿದರೆಂಬ ಅಂಶ ಶಿವಮೊಗ್ಗ ಜಿಲ್ಲೆಯಲ್ಲಿ (ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ ೭, ಶಿಕಾರಿಪುರ ಪು.೨೨೫) ದೊರೆತ ಕ್ರಿ.ಶ. ೧೨ ಮತ್ತು ೧೩ನೆಯ ಶತಮಾನದ ಕೆಲ ಶಾಸನಗಳು ತಿಳಿಸುತ್ತವೆ. ನಂದರ ಕೊನೆ ಅರಸ ಮಹಾಪದ್ಮನಂದನು ಮಗಧ ರಾಜ್ಯದ ಎಲ್ಲ ದಿಕ್ಕುಗಳಲ್ಲಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಕರ್ನಾಟಕದ ಕೆಲ ಪ್ರದೇಶಗಳು ಅವರ ಅಧೀನಕ್ಕೆ ಒಳಪಟ್ಟಿದ್ದವು. ಮೌರ್ಯರು ನಂದರನ್ನು ನಿರ್ಮೂಲ ಮಾಡಿ ಮಗಧ ರಾಜ್ಯವನ್ನು ತಮ್ಮ ಅಧೀನಕ್ಕೊಳಪಡಿಸಿದರೆಂದು ಪ್ರೊ.ನೀಲಕಂಠ ಶಾಸ್ತ್ರೀಯವರು (ದಕ್ಷಿಣ ಭಾರತದ ಇತಿಹಾಸ; ೨೦೦೫;ಪು.೭೮) ಅಭಿಪ್ರಾಯಪಟ್ಟಿದ್ದಾರೆ. ಈ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳುವ ಉದ್ದೇಶದಿಂದ ಈ ಅಧ್ಯಯನ ಕೈಗೊಂಡಿದ್ದರೂ, ಯಾವುದೇ ಪ್ರದೇಶದ ಸಂಸ್ಕೃತಿಯು ಆ ಪ್ರದೇಶವನ್ನು ಆಳಿದ ಅರಸರ ಇತಿಹಾಸದೊಂದಿಗೆ ತುಳುಕು ಹಾಕಿಕೊಂಡಿರುತ್ತದೆ. ಹಾಗಾಗಿ ಈ ಪ್ರದೇಶದ ರಾಜಕೀಯ ಹಿನ್ನಲೆಯನ್ನು ಅರಿಯುವುದು ಅತಿ ಅವಶ್ಯಕವಾಗಿದೆ.

**ಮೌರ್ಯರು**

ಕರ್ನಾಟಕವು ಭಾರತದಲ್ಲಿ ಮೊಟ್ಟ ಮೊದಲನೆ ಸಾಮ್ರಾಜ್ಯವಾದ ಮೌರ್ಯ ಚಕ್ರಾಧಿಪತ್ಯದ ಭಾಗವಾಗಿತ್ತೆಂಬುದು ಸನ್ನತಿಯಲ್ಲಿ ದೊರೆತ ಹದಿನಾಲ್ಕನೆಯ ಶಿಲಾಶಾಸನ ತಿಳಿಸುತ್ತದೆ. ಮುಂದಿನ ಭಾಗದಲ್ಲಿ ಇದರ ಚರ್ಚೆ ಮಾಡಲಾಗಿದೆ. ಮೌರ್ಯರು ಮಗಧ ರಾಜ್ಯವನ್ನು ಗೆದ್ದು ದಕ್ಷಿಣದವರೆಗೂ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದರು. ನಂದರಿಗೂ ಮತ್ತು ಮೌರ್ಯರಿಗೂ ಪೂರ್ವದಿಂದಲೂ ಹಗೆತನವಿತ್ತು. ಒಂದು ಐತಿಹ್ಯದ ಪ್ರಕಾರ, ಚಂದ್ರಗುಪ್ತ ಮೌರ್ಯರಿಗೂ ಮತ್ತು ನಂದರಿಗೂ, ಆಸ್ಥಾನದಲ್ಲಿ ಕಲಹ ಉಂಟಾಯಿತು. ನಂದರ ಕೊನೆ ಅರಸ ಧನನಂದನು ಅಪಾರ ಸೈನ್ಯ ಹೊಂದಿದ್ದನು. ತನ್ನ ಆಡಳಿತ ನಿರ್ವಹಣೆಗಾಗಿ ಮತ್ತು ಸೈನ್ಯದ ವೆಚ್ಚಕ್ಕಾಗಿ ಅಪಾರ ಧನನಷ್ಟವಾಯಿತು. ಇದರಿಂದ ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆ ವಿಧಿಸಿದನು. ಪ್ರಜೆಗಳು ಧನನಂದನ ವಿರುದ್ಧ ಧನಲೋಭಿ ಎಂದು ಅಪಪ್ರಚಾರ ಮಾಡಲು ಪ್ರಾರಂಭಿಸಿದರು. ಬಹುಶಃ ಅವನ ಕೀಳು ಕುಲವೇ ಜನರಲ್ಲಿ ಹಾಗೆ ಯೋಚಿಸುವಂತೆ ಮಾಡಿತು. ಇದರ ಸದುಪಯೋಗ ಪಡೆದುಕೊಂಡವನು ಚಂದ್ರಗುಪ್ತ ಮೌರ್ಯನು. ಈ ಕಲಹ ನಡೆಯುತ್ತಿರುವ ಸಂದರ್ಭದಲ್ಲಿ ಚಂದ್ರಗುಪ್ತ ತನ್ನ ಬ್ರಾಹ್ಮಣ ಮಂತ್ರಿ ಚಾಣುಕ್ಯನ ಸಹಾಯದಿಂದ ನಂದರ ವಿರುದ್ಧ ದಂಗೆ ಎದ್ದನು. ಆಗ ಚಾಣುಕ್ಯನ ತಲೆಗೂದಲು ಬಿಚ್ಚಿದವು. ಅಂದಿನಿಂದ ಚಾಣುಕ್ಯ ನಂದ ವಂಶ ನಿರ್ನಾಮವಾಗುವವರೆಗೂ ತನ್ನ ಜುಟ್ಟನ್ನು ಕಟ್ಟುವುದಿಲ್ಲವೆಂದು ಪಣ ತೊಟ್ಟನು. ಹೀಗಾಗಿ ಕೊನೆಯವರೆಗೂ ಚಂದ್ರಗುಪ್ತ ಮೌರ್ಯ ನಂದರೊಡನೆ ಸೆಣಸಾಡಬೇಕಾಯಿತು. ನಂದರನ್ನು ನಾಶ ಮಾಡಿ ಮಗಧವನ್ನು ವಶಪಡಿಸಿಕೊಂಡನು. ಮಗಧದಲ್ಲಿ ಚಕ್ರಾಧಿಪತ್ಯವನ್ನು ಸ್ಥಾಪಿಸಿದನು. ಈತ ದಖ್ಖನದಲ್ಲಿ ಆಡಳಿತ ಸ್ಥಾಪಿಸಿದುದಲ್ಲದೆ ಗಡಿಗಳನ್ನು ವಿಸ್ತರಿಸಿದನು. ಚಂದ್ರಗುಪ್ತನು ಬಹುಕಾಲ ನಂದರೊಡನೆಯೇ ಹೋರಾಡಬೇಕಾಯಿತು. ಮಗಧ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳುವುದರಲ್ಲಿ ನಿರತನಾಗಿದ್ದ ಈತ ದಕ್ಷಿಣದತ್ತ ಗಮನ ಹರಿಸಲು ಸಾಧ್ಯವಾಗಲಿಲ್ಲ. ನಂದರನ್ನು ಸೋಲಿಸಿದ ಪರಿಣಾಮವಾಗಿಯೇ ಆ ಸಾಮ್ರಾಜ್ಯದ ಭಾಗವಾಗಿದ್ದು ಕರ್ನಾಟಕದ ಭಾಗಗಳು ಮೌರ್ಯ ಸ್ವಾಧೀನಕ್ಕೆ ಬಂದಿರಬಹುದು.

ಚಂದ್ರಗುಪ್ತನು ತನ್ನ ಕೊನೆ ಅವಧಿಯಲ್ಲಿ ಜೈನಮುನಿ ಭದ್ರಬಾಹುವಿನ ಪ್ರಭಾವಕ್ಕೆ ಒಳಗಾಗಿ ಪ್ರಸಿದ್ಧ ಜೈನ ಕ್ಷೇತ್ರವಾದ ದಕ್ಷಿಣ ಭಾರತದ ಕಳ್ವಪ್ಪು ಅಥವಾ ಶ್ರವಣಬೆಳಗೊಳಕ್ಕೆ ಬಂದು ತಪೋನಿರತನಾದನು. ಮಗಧ ರಾಜ್ಯದಲ್ಲಿ ಭೀಕರ ಕ್ಷಾಮ ತಲೆದೂರಿ ಹನ್ನೆರಡು ವರ್ಷಗಳ ಕಾಲ ಜನರನ್ನು ನರಳಾಡಿಸುವುದೆಂದು ಭದ್ರಬಾಹು ಭವಿಷ್ಯ ನುಡಿದನಂತೆ. ಆ ಅಪಾಯದ ಕಾಲವು ಸಮೀಪ ಬಂದಂತೆ ಚಂದ್ರಗುಪ್ತ ತನ್ನ ಅನುಯಾಯಿಗಳೊಡನೆ ತನ್ನ ಗುರುವಾದ ಭದ್ರಬಾಹುವಿನ ಜೊತೆಗೆ ಹಾಸನ ಜಿಲ್ಲೆಯ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದನು. ದಕ್ಷಿಣಕ್ಕೆ ಬಂದು ಕೊನೆಗೆ ಅಲ್ಲೆ ಅವನು ಸಲ್ಲೇಖನ ವ್ರತ್ತವನ್ನು ಕೈಗೊಂಡು ಭವಪಾಶದಿಂದ ಮುಕ್ತನಾದನು. ಹರಿಸೇನಾ ಎಂಬ ಜೈನ ಕವಿಯ ಬೃಹತ್ ಕಥಾ ಕೋಶದಿಂದ ತಿಳಿದು ಬರುತ್ತದೆ. ಶ್ರವಣಬೆಳಗೊಳದಲ್ಲಿಯೆ ಚಂದ್ರಗಿರಿ (ಕರ್ನಾಟಕದ ಇತಿಹಾಸ; ೧೯೮೪;ಪು.೪೧) ಬೆಟ್ಟದ ಮೇಲೆಯೇ ದೇಹತ್ಯಾಗ ಮಾಡಿದನೆಂದು ಜೈನ ಪರಂಪರೆಯಿಂದ ತಿಳಿದು ಬರುತ್ತದೆ. ಚಂದ್ರಗುಪ್ತನ ನಂತರ (ಸುಮಾರು ಕ್ರಿ.ಪೂ.೩೨೧–೨೯೭) ಈತನ ಮಗ ಬಿಂದುಸಾರನು ಪಟ್ಟಕ್ಕೆ ಬಂದನು. ಗ್ರೀಕ್ ಬರಹಗಾರರು ಈತನನ್ನು ಅಮಿತ್ರೊ ಕ್ರೇಟಸ್ ಎಂದು ಕರೆದಿದ್ದಾರೆ. ಸಂಸ್ಕೃತದ ಅಮಿತ್ರಘಾತ್ ಎಂಬ ಪದದ ಗ್ರೀಕ್ ರೂಪಾಂತರವಿರಬಹುದು. ಶತ್ರುವಿನಾಶಕ ಎಂಬುದು ಇದರ ಅರ್ಥ. ಆದರೆ ಈತನಿಗೆ ಶತ್ರುಗಳೇ ಇರಲಿಲ್ಲ. ಶಾಂತಿ ಧೂತನಾಗಿದ್ದನು. (ಕರ್ನಾಟಕ ಪರಂಪರೆ I; ೧೯೭೦; ಪು.೨೮೬) ಈತನ ನಂತರ ಈತನ ಮಗನಾದ ಅಶೋಕ ಚಕ್ರವರ್ತಿ ಮೌರ್ಯ ಸಾಮ್ರಾಜ್ಯದ ಕೀರ್ತಿಯನ್ನು ಎಲ್ಲೆಡೆ ಹರಡಿಸಿದನು.

ಕರ್ನಾಟಕ ತನ್ನ ಚಾರಿತ್ರಿಕ ಘಟ್ಟವನ್ನು ಗುರುತಿಸಿಕೊಳ್ಳುವುದು ಮೌರ್ಯರ ಕಾಲದಿಂದ. ಮುಖ್ಯವಾಗಿ ಅಶೋಕ ಸಾಮ್ರಾಟನ (ಕ್ರಿ.ಪೂ.೨೭೩–೨೩೨) ಆಳ್ವಿಕೆ ಅವಧಿಯಿಂದ. ಕನ್ನಡ ನಾಡಿನಲ್ಲಿ ದೊರೆತಿರುವ ಶಾಸನಗಳಲ್ಲಿ, ಅಶೋಕನ ಶಾಸನಗಳೇ ಪ್ರಪ್ರಥಮವಾದವು. ಶಾಸನಗಳನ್ನು ಹಾಕಿಸುವ ಪದ್ಧತಿಯನ್ನು ಜಾರಿಗೆ ತಂದ ಕೀರ್ತಿ ಅಶೋಕನಿಗೆ ಸಲ್ಲುತ್ತದೆ. ಆದ್ದರಿಂದಲೇ ಅಶೋಕನನ್ನು 'ಶಾಸನಗಳ ಜನಕ' ಅಥವಾ 'ಸ್ವಕಥನಕಾರ' (ದಕ್ಷಿಣ ಭಾರತದ ಇತಿಹಾಸ; ೨೦೦೫;ಪು.೮೦) ಎಂದು ಕರೆಯಲಾಗಿದೆ. ಅಶೋಕನ ಶಾಸನಗಳು ಬ್ರಾಹ್ಮಿ ಲಿಪಿಯ ಬಂಡೆಗಲ್ಲು ಶಾಸನಗಳಾಗಿವೆ. ಈತನ ಕಾಲದಲ್ಲಿ ದೊರೆತಿರುವ ಎಲ್ಲ ಶಾಸನಗಳು ಮೌರ್ಯ ಸಂಸ್ಕೃತಿಯಿಂದ ನೆಲೆಗೊಂಡಿದ್ದ ನಿವೇಶನಗಳಾಗಿವೆ. ಈ ನಿವೇಶನಗಳು ದಕ್ಷಿಣ ಭಾರತದಲ್ಲಿ ದೊರೆತ ಅಶೋಕನ ಶಿಲಾಶಾಸನ ಸಂಖ್ಯೆ ಒಟ್ಟು ಹದಿನಾಲ್ಕು. ಇವೆಲ್ಲವೂ ಲಘು ಶಾಸನಗಳು. ಇತ್ತೀಚಿನ ಸಂಶೋಧನಾ ಕಾರ್ಯದಿಂದ ಕರ್ನಾಟಕದಲ್ಲಿ ಒಟ್ಟು ಹದಿನೇಳು ಶಾಸನಗಳು ದೊರೆತಿವೆ. ಅವುಗಳಲ್ಲಿ ಹದಿಮೂರು ಲಘು ಶಾಸನಗಳು ದೊರೆತಿವೆ. ಬ್ರಹ್ಮಗಿರಿಯಲ್ಲಿ ಎರಡು, ಸಿದ್ಧಾಪುರದಲ್ಲಿ ಎರಡು, ಜಟ್ಟಿಂಗರಾಮೇಶ್ವರದಲ್ಲಿ ಎರಡು, ನಿಟ್ಟೂರು ಎರಡು, ಉದೇಗೋಳಂಗಳಲ್ಲಿ ಎರಡು, ಮಸ್ಕಿಯಲ್ಲಿ ಒಂದು, ಗವಿಮಠದಲ್ಲಿ ಒಂದು, ಪಾಲ್ಕಿಗುಂಡಿಯಲ್ಲಿ ಒಂದು ದೊರಕಿವೆ. ಇತ್ತೀಚಿನ ವರದಿ ಪ್ರಕಾರ ಕಲಬುರ್ಗಿ ಜಿಲ್ಲೆ ಚಿತ್ತಾಪುರ ತಾಲೂಕಿನ ಸನ್ನತಿಯಲ್ಲಿ ನಾಲ್ಕು ಮುಖ್ಯ ಅಶೋಕನ ಶಾಸನಗಳು ದೊರೆತಿವೆ. (ಕರ್ನಾಟಕದಲ್ಲಿ ಅಶೋಕನ ಶಾಸನಗಳು; ೧೯೯೧;ಪು.೨೭) ಒಟ್ಟಿನಲ್ಲಿ ಕಲಬುರ್ಗಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಕೊಪ್ಪಳ ಪ್ರದೇಶವನ್ನು ಒಳಗೊಂಡಂತೆ ಕರ್ನಾಟಕದ ಬಹುಭಾಗವು ಮೌರ್ಯರ ಅಧೀನಕ್ಕೆ ಒಳಪಟ್ಟಿದ್ದು ಸ್ಪಷ್ಟಪಡಿಸುತ್ತದೆ.

**ಮೌರ್ಯರ ಪ್ರಮುಖ ಆಡಳಿತ ಕೇಂದ್ರವಾಗಿ ಸನ್ನತಿ**

ಕಲಬುರ್ಗಿ ಜಿಲ್ಲೆ ಚಿತ್ತಾಪುರ ತಾಲೂಕಿನಲ್ಲಿರುವ ಸಣ್ಣ ಗ್ರಾಮವಾದ ಸನ್ನತಿ ಇದು ಕರ್ನಾಟದ ನಿವೇಶನಗಳಲ್ಲಿ ಒಂದಾಗಿದೆ. ಕೃಷ್ಣೆಯ ಉಪನದಿಯಾದ ಭೀಮಾನದಿಯ ಎಡದಂಡೆಯ ಮೇಲಿರುವ ಈ ಗ್ರಾಮ ಚಿತ್ತಾಪುರದಿಂದ ನೈರುತ್ಯಕ್ಕೆ ೪೮ಕಿ.ಮೀ. ದಲ್ಲಿದೆ. ಕಲಬುರ್ಗಿ ಪ್ರವಾಸಿ ತಾಣವಲ್ಲದಿದ್ದರೂ ಚಿತ್ತಾಪುರದಲ್ಲಿರುವ ಸನ್ನತಿ ಇತಿಹಾಸವನ್ನು ತನ್ನ ಕಾಲಗರ್ಭದಲ್ಲಿ ಹುದುಗಿಸಿಟ್ಟುಕೊಂಡಿದೆ. ನಾಡಿನ ಪ್ರಮುಖ ಬೌದ್ಧ ಕೇಂದ್ರಗಳಲ್ಲಿ ಒಂದಾದ ಸನ್ನತಿ ಕರ್ನಾಟಕದ ಅತ್ಯಂತ ಪ್ರಸಿದ್ಧ ಆಡಳಿತ ಕೇಂದ್ರ, ಪ್ರಾಚೀನ ಬೌದ್ಧ ಕೇಂದ್ರವು ಹೌದು. ಸನ್ನತಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಪ್ರಾಚ್ಯವಸ್ತು ಅವಶೇಷಗಳಿಂದ ಕೂಡಿದ ಒಂದು ಶ್ರೀಮಂತ ಪ್ರದೇಶವಾಗಿದೆ. ಪ್ರಾಚ್ಯವಸ್ತು ಸಂಶೋಧಕರ ಗಮನ ತನ್ನ ಕಡೆ ವಾಲಿಸಿಕೊಂಡಿದೆ. ಮೊಟ್ಟ ಮೊದಲ ಬಾರಿಗೆ ಕ್ರಿ.ಶ.೧೯೫೪ರಲ್ಲಿ ಕಪಟರಾಳ ಕೃಷ್ಣರಾಯರು (ಶ್ರೀ ಚಂದ್ರಲಾಪರಮೇಶ್ವರಿ;೧೯೭೦;ಪು.೨೫೭) ಪರಿಶೋಧನೆ ಮಾಡಿದರು. ನಂತರ ಹೆಚ್ಚಿನ ಅವಶೇಷಗಳ ಕಾರ್ಯಕ್ಕೆ ಈ ಸ್ಥಳದಲ್ಲೆ ಪುನಃ ಪರಿಶೋಧನೆಗೈದವರು ಎಂ. ಶೇಷಾದ್ರಿ ಅವರು. (ಬುದ್ಧಿಸ್ಟ ಮಾನುಮೆಂಟ್ಸ್ ಅಟ್ ಸನ್ನತಿ;೧೯೬೫;ಪು.೩೫) ಇತಿಹಾಸ ಕಡೆ ಗಮನ ಕೊಟ್ಟು ವಾಸ್ತುಶಿಲ್ಪಗಳ ಬಗ್ಗೆ ವಿವರಣೆ ಮಾಡಿದ್ದಾರೆ. ನಂತರದಲ್ಲಿ ಸನ್ನತಿಯನ್ನು ಪರಿಶೋಧನೆಯ ಕಾರ್ಯ ಕೈಗೊಂಡವರು ಡಾ.ಪಿ.ಬಿ.ದೇಸಾಯಿ ಅವರು. (ನ್ಯೂ ಬುದ್ದಿಸ್ಟ್ ಸೆಂಟರ್;೧೯೬೮;ಪು.೩) ಹೈದ್ರಾಬಾದ ಕರ್ನಾಟಕದ ಶಿಲಾಶಾಸನಗಳು, ಶಿಲ್ಪಗಳು ಇತಿಹಾಸ ಕುರಿತು ಶೋಧನೆಗೆ ತೊಡಗಿದರು. ಶಾಸನಗಳ ಕುರಿತು ಸನ್ನತಿಯ ಮೇಲೆ ಹೊಸ ಬೆಳಕು ಚೆಲ್ಲಿದರು. ಬೌದ್ಧರ ಪ್ರಾಚೀನ ಕೇಂದ್ರ ಸನ್ನತಿ ಎಂದು ಹೇಳಿದ್ದಾರೆ. ಸನ್ನತಿ ಕರ್ನಾಟಕದ ಅತ್ಯಂತ ಮಹತ್ವಪೂರ್ಣ ಹಾಗೂ ಅತೀ ದೊಡ್ಡ ನಿವೇಶನ. ಹೆಚ್ಚಿನ ಪರಿಶೋಧನಾ ಕಾರ್ಯ ಮುಂದುವರೆದರೆ ಹೆಚ್ಚಿನ ಅವಶೇಷಗಳು ಪತ್ತೆಯಾಗಬಹುದು. ಇಲ್ಲಿ ಹಳೆಯ ಶಿಲಾಯುಗದ ಆಯುಧಗಳು ದೊರಕಿವೆ. ಭೌಗೋಳಿಕವಾಗಿ ಇದರ ಹರವು ಸಾಕಷ್ಟು ಹರಡಿದೆ. ಅನೇಕ ಶಾಖೆಗಳು ಇಲ್ಲಿ ನೆಲೆಸಿದವು. ಉಪಾಸಕರು ಭಿಕ್ಷುಗಳೆಲ್ಲ ವ್ಯಾಪಾರಕ್ಕಾಗಿ ಬಂದು ಆಡಳಿತ, ಧಾರ್ಮಿಕ, ವಾಣಿಜ್ಯ ಮುಂತಾದವುಗಳ ಕೇಂದ್ರವನ್ನಾಗಿ ಸನ್ನತಿಯನ್ನು ಪರಿವರ್ತಿಸಿದರು. ಇತ್ತೀಚಿನ ಉತ್ಖನನದಲ್ಲಿ ಅನೇಕ ಅವಶೇಷಗಳು ಪತ್ತೆ ಹಚ್ಚಲಾಗಿದ್ದು, ಅಧ್ಯಯನಕ್ಕೆ ನಾಂದಿಯಾಗಿರುವವು.

ಸನ್ನತಿ ಪ್ರಾದೇಶಿಕ ಹಿನ್ನಲೆಯಲ್ಲಿ 'ಸೋಂಥಿ' ಎಂದೇ ಕರೆಯುತ್ತಾರೆ. ಈ ಊರು ಭೀಮಾ ನದಿಯ ಎಡದಂಡೆಯ ಮೇಲಿದ್ದು ಪ್ರಾಗೈತಿಹಾಸಿಕ ಹಾಗೂ ಚಾರಿತ್ರಿಕ, ಸಾಂಸ್ಕೃತಿಕ ಹಿನ್ನಲೆಯನ್ನು ಪಡೆದುಕೊಂಡಿದೆ. ಸನ್ನತಿ ಇಂದು ಹಳೆಯ ಕೊಂಪೆ ಆಗಿದ್ದರೂ, ಅದರ ಉತ್ಖನದಿಂದ ಅಧ್ಯಯನದ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ. ಸ್ಥಳ ಪುರಾಣ ಮತ್ತು ಐತಿಹ್ಯದಂತೆ (ಶ್ರೀ ಚಂದ್ರಲಾಂಬಾ ಸನ್ನತಿ ದರ್ಶನ;೧೯೭೬;ಪು.೪೫) ಪುರಾಣ ಪ್ರಸಿದ್ಧರಾದ ಶ್ರೀರಾಮ ಹಾಗೂ ಸೀತಾದೇವಿಯವರು, ನಾರಾಯಣ ಹಾಗೂ ಚಂದ್ರವಧನೆಯರಾಗಿ ಜನಿಸಿ ಅವತರಿಸಿದ್ದಾಗ ಸೇತುರಾಜ (ಶ್ವೇತರಾಜ)ನು ಚಂದ್ರವದನೆಯಾಗಿ ಜನಿಸಿದ ಸೀತೆಯನ್ನು ಮೋಹಿಸಿ, ಕಾಮದಿಂದ ಅವಳನ್ನು ಪಡೆಯಲು ಪ್ರಯತ್ನಿಸಿದಾಗ, ಸೀತೆ ಭೃಂಗ ರೂಪದಲ್ಲಿ ಅವತರಿಸಿ, ಚಂದ್ರಲಾದೇವಿಯು ಒಂದು ದೈತ್ಯ ಅವತಾರ ತಾಳಿ, ಸೇತುರಾಜನನ್ನು ಸಂಹರಿಸಿದಳು. ಮುಂದೆ ಈಕೆಯೇ ಚಂದ್ರಲಾಪರಮೇಶ್ವರಿ ಎಂಬ ಹೆಸರಿನಿಂದ ಪೂಜೆಗೆ ಒಳಪಟ್ಟಳು. ಇಂದಿಗೂ ಈ ದೇವಿಯನ್ನು ಗ್ರಾಮದ ಜನರು ಆರಾಧಿಸುತ್ತಲೆ ಬಂದಿದ್ದಾರೆ.

ಮಸ್ಕಿಯಲ್ಲಿ ದೊರೆತ ಅಶೋಕನ ಹೆಸರನ್ನೊಳಗೊಂಡ ಮೊದಲನೆಯ ಶಾಸನ ಇದಾಗಿದೆ. 'ಪ್ರಿಯದರ್ಶಿ' ಎಂಬುದು ಈತನ ಬಿರುದಾಗಿತ್ತು. ಈತನ ಶಾಸನಗಳು ಆಳ್ವಿಕೆಗೆ ಒಳಪಟ್ಟಿದ್ದು ಗುರುಹಿರಿಯರಿಗೆ ವಿಧೇಯರಾಗಿರಬೇಕು. ಪ್ರಜೆಗಳು ನೀತಿ ಮತ್ತು ಧರ್ಮದ ಮಾರ್ಗದಲ್ಲಿ ನಡೆಯಬೇಕೆಂಬ ವಿಚಾರಗಳನ್ನು ಈ ಶಾಸನ ತಿಳಿಸುತ್ತದೆ.

ಸುವರ್ಣ ಗಿರಿಯ ನಿರ್ದಿಷ್ಟ ನೆಲೆಗಳಲ್ಲಿ ಅಶೋಕನ ಶಾಸನಗಳ ಬಗ್ಗೆ ಆಳವಾದ ಅಧ್ಯಯನ ಕೈಗೊಂಡ ಕೆಲ ವಿದ್ವಾಂಸರು ಈ ರೀತಿ ನಿಲುವು ತಾಳಿದ್ದಾರೆ. ಮಸ್ಕಿಯ ದಕ್ಷಿಣಕ್ಕಿರುವ ಕನಕಗಿರಿಯೇ ಸುವರ್ಣ ಗಿರಿಯೆನ್ನುತ್ತಾರೆ. ಇ. ಹುಲ್ಷ್ ಇವರ ಪ್ರಕಾರ ಬಿಹಾರ್ ಜಿಲ್ಲೆಯ ಸೋನಾಗಿರಿಯಾಗಿತ್ತು, ಎಮ್. ಕೆ. ರಾಯಚೌಧರಿ ಅವರ ಪ್ರಕಾರ ಮಹಾರಾಷ್ಟ್ರದ ಸೋನಾಗಿರಿ ಪಟ್ಟಣವೇ ಸುವರ್ಣಗಿರಿ, ಜೆ.ಎಫ್.ಫ್ಲೀಟ್, ಆರ್.ಡಿ. ಭಂಡಾರಕರ್ ಅವರ ಪ್ರಕಾರ ಸುವರ್ಣಗಿರಿ ಇರುವುದು ರಾಜಗೀರ್ (ರಾಜಗೃಹ) ಪರಿಸರದಲ್ಲಿ. ಜಿ. ಬ್ಯೂಹ್ಲರ್ ಪಶ್ಚಿಮ ಘಟ್ಟಗಳ ಎಡೆಯಲ್ಲಿ. ಇವುಗಳೊಡನೆ ಗಮನಿಸಲಾಗಿರುವ ಇನ್ನೊಂದು ಸ್ಥಳವೆಂದರೆ ಆಂಧ್ರ ಪ್ರದೇಶದ ಎರಗುಂಡಿ. ಸಿ. ಆರ್. ಕೃಷ್ಣಮಾಚಾರ್ಯ, ಡಿ.ಸಿ.ಸರಕಾರ ಅವರ ಪ್ರಕಾರ ಎರ್ರಗುಂಡಿ ಹತ್ತಿರ ಜೊನ್ನಗಿರಿಯೇ ಸುವರ್ಣಗಿರಿ ಎಂದು ಗುರುತಿಸಿದ್ದಾರೆ. ಸಿ. ಆರ್. ನಾರಾಯಣರಾವ್, ಜಯರಾಮಶರ್ಮ ಅವರ ಪ್ರಕಾರ ಶ್ರೀಲಂಕೆಯೇ ಸ್ವರ್ಣಗಿರಿ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಹೆಚ್. ಕೃಷ್ಣಶಾಸ್ತ್ರಿ, ಹುಲ್ಷ್ ಅವರು ಕರ್ನಾಟಕ ಪ್ರದೇಶದಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನಲ್ಲಿರುವ ಸನ್ನತಿಯೇ ಸುವರ್ಣಗಿರಿ ಎಂಬ ಅಭಿಪ್ರಾಯವೂ ಇದೆ. (ಎಪಿಗ್ರಾಫಿಯಾ ಇಂಡಿಕಾ, ೩, ಪು. ೨೩೪) ಅಶೋಕನ ಬೌದ್ಧ ನಿವೇಶನಗಳಲ್ಲಿ ಪ್ರತ್ಯೇಕ ಶಿಲಾಶಾಸನಗಳು ದೊರೆತಿರುವ ಹಿನ್ನೆಲೆಯಲ್ಲಿ ಸುವರ್ಣಗಿರಿ ಎಂಬ ಅಭಿಪ್ರಾಯವು ಇದೆ. ಧ್ವನಿಶಾಸ್ತ್ರದ ಹೆಚ್.ಎಸ್.ಥೋಸಾರ ಅವರ ಅಭಿಪ್ರಾಯದಂತೆ, ಸುವರ್ಣಗಿರಿ ಮತ್ತು ಸನ್ನತಿ ಇವುಗಳ ನಡುವೆ ಪರಸ್ಪರ ಹೊಂದಾಣಿಕೆಯ ಸಂಬಂಧವಿರಬಹುದು ಎಂದು ಹೇಳುತ್ತಾರೆ. ದಾಖಲೆಗಳಲ್ಲಿರುವ ಶಿಷ್ಟರೂಪ 'ಸನ್ನತಿ' ಇದರ ಆಡು ಭಾಷೆ 'ಸೊನ್ನತಿ', ಇದು 'ಸುವರ್ಣಗಿರಿ' ಎಂಬುವದರಿಂದಲೇ ನಿಷ್ಪನ್ನಗೊಂಡಿದೆ ಎಂಬುದು ಸ್ಪಷ್ಟ. ಈ ಎಲ್ಲ ಹೇಳಿಕೆಗಳಲ್ಲಿ ಕಂಡುಬರುವ ಅಂಶಗಳನ್ನು ಗಮನಿಸಿದಾಗ ಇದನ್ನು ಆಂಧ್ರ, ಮಹಾರಾಷ್ಟ್ರ, ಶ್ರೀಲಂಕಾಗೆ ಹೋಲಿಸಿದ್ದಾರೆ. ಆದರೆ ಸುವರ್ಣಗಿರಿ ಇರುವುದು ಸನ್ನತಿಯಲ್ಲಿಯೇ, ಕಾರಣ ಸನ್ನತಿ ಸುತ್ತಲೂ ಬೆಟ್ಟಗಳಿಂದ ಕೂಡಿದೆ. ವಾದ ವಿವಾದ ನಡುವೆಯು ಸುವರ್ಣಗಿರಿಯ ನಿರ್ದಿಷ್ಟದ ಬಗ್ಗೆ ವಿದ್ವಾಂಸರು ನಿಲುವು ತಳೆದಿಲ್ಲ. ಮೌರ್ಯರ ಕಾಲದಲ್ಲಿ ಸುವರ್ಣಗಿರಿ ಇದ್ದ ಸ್ಥಳನಾಮ ಕೊನೆಗೂ ಗಿರಿ ಎಂದು ಕರೆಯಲಾಗಿದೆ. ಕಾಲಕ್ರಮೇಣ 'ವತಿ' ಎಂದು ಬದಲಾಯಿತು. ಹಾಗಾಗಿ ಉಚ್ಚಾರಣೆಯಿಂದ ಬದಲಾವಣೆ ಕಂಡುಬಂದಿದೆ. ಆದರೆ ಸನ್ನತಿಯೇ ಸುವರ್ಣಗಿರಿ ಆಗಿದೆ.

**'ಸನ್ನತಿ'** ಎಂಬ ಹೆಸರು ದೈವೇಶಹ ನಾನು ಮತಿ, ಸಹಮತಿ, ಸಹಪತಿ, ಸನ್ಮತಿ, ಸನ್ನತಿ ಆಗಿದೆ. 'ಮತಿ' ಎಂದರೆ ಸ್ತೋತ್ರ. ದೇವತೆಗಳ ಸ್ತೋತ್ರ ತಾಯಿ (ದೇವಿ)ಯೇ ಕಾಪಾಡು ಎಂದರ್ಥ. ಅದರಂತೆ ಸನ್ನತಿ ಎಂಬ ಶಬ್ದ ಸಂಸ್ಕೃತ ಸನ್ಮತಿ ಪದದಿಂದ ಬಂದಿದೆ. ದೇವಾನುದೇವತೆಗಳು ಕಾಪಾಡಿದರು ಎಂದು

ಕರೆಯುವುದಕ್ಕೆ ಸನ್ನತಿ ಎಂಬ ಶಬ್ದ ಸಂಸ್ಕೃತ ಸನ್ಮತಿ ಪದದಿಂದ ಬಂದಿದೆ. ದೇವತೆಗಳು ಕಾಪಾಡಿದರು ಎಂದು ಕರೆಯುವುದಕ್ಕೆ ಸನ್ನತಿ ಎಂದು ಕರೆಯುತ್ತಾರೆ. ಇಂದು ಜನರ ಬಾಯಲ್ಲಿ ಸೋಂಥಿ ಆಗಿದೆ ಎಂದು ಅಲ್ಲಿನ ಜನರು ಹೇಳುತ್ತಾರೆ. ಡಾ. ಕೆ.ವಿ.ರಮೇಶ ಅವರು ಸನ್ನತಿ ತಾಣದ ಶಬ್ದಾರ್ಥ ಮಾಡುತ್ತಾ ಸನ್ನತಿಯು ಸೇತುರಾಜನ ಕಟ್ಟೆ ಅಥವಾ ಶಾತವಾಹನರ ಕೋಟೆ ಎಂದು ಅರ್ಥೈಸಿದ್ದಾರೆ.

ಸನ್ನತಿಯ ಕುರಿತು ಕರ್ನಾಟಕ ಪ್ರಾಚ್ಯವಸ್ತು ಸಂಶೋಧನಾ ಸಂಸ್ಥೆ ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪ್ರಾಚೀನ ಭಾರತೀಯ ಇತಿಹಾಸ, ಸಂಸ್ಕೃತಿ ವಿಭಾಗ ಈ ಸಂಸ್ಥೆಗಳು ಅನೇಕ ಬಾರಿ ಸಂಶೋಧನೆ ಕೈಗೊಂಡು ಹೊಸ ಹೊಸ ವಿಷಯಗಳನ್ನು ಬೆಳಕಿಗೆ ಬಂದಿವೆ. ಪಿ.ಬಿ.ದೇಸಾಯಿ, ರಿತ್ತಿ ಶ್ರೀನಿವಾಸ್, ಕಪಟರಾಳ ಕೃಷ್ಣರಾಯರು, ಜಾಗೀರದಾರ ಸೀತಾರಾಮ, ರು.ಮ.ಷಡಕ್ಷರಯ್ಯ, ತಾಳ್ತಜೆ ವಸಂತಕುಮಾರ, ಪೂಜಾರಿ, ಎಚ್.ಟಿ.ತಳವಾರ, ಅ. ಸುಂದರ ಮುಂತಾದ ವಿದ್ವಾಂಸರು ಅಧ್ಯಯನ ಕೈಗೊಂಡು ಸನ್ನತಿಯ ಪ್ರಾಚೀನತೆ ಮತ್ತು ಅದರ ಮಹತ್ವವನ್ನು ನಾಡಿನ ಜನತೆಗೆ ಪರಿಚಯಿಸಿದ್ದಾರೆ.

ಇಷ್ಟೆಲ್ಲಾ ಚಾರಿತ್ರಿಕ ಮಹತ್ವ ಪಡೆದ ಸನ್ನತಿ ಮೌರ್ಯರ ಕಾಲದಲ್ಲಿ ಪ್ರಮುಖ ರಾಜಕೀಯ ಮತ್ತು ಆಡಳಿತ ಕೇಂದ್ರವೆನಿಸುವುದರಲ್ಲಿ ಸಂಶಯವಿಲ್ಲ. ಸುವರ್ಣಗಿರಿಯು ಮೌರ್ಯರ ಕಾಲದ ದಕ್ಷಿಣ ಭಾರತದ ರಾಜಧಾನಿಯಾಗಿದ್ದು, ಅಭಿವೃದ್ಧಿಹೊಂದಿದ ನಗರವಾಗಿತ್ತು. ಭೀಮಾ ನದಿಯ ದಂಡೆಯ ಮೇಲಿರುವ ಕಲಬುರ್ಗಿ ಜಿಲ್ಲೆಯ ಪ್ರದೇಶಗಳು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದವು. ೧೨ ಹಾಗೂ ೧೪ನೆಯ ಶಿಲಾಶಾಸನಗಳು ಎರಡು ಪ್ರತ್ಯೇಕ ಶಾಸನ ಪ್ರತಿಗಳಿಂದ ಸನ್ನತಿ ಈ ಅವಧಿಯ ಇನ್ನೊಂದು ಪ್ರಮುಖ ಜನವಸತಿಯಿಂದ ಕೂಡಿದ ಗ್ರಾಮವಾಗಿತ್ತೆಂದು ದೃಢಪಡಿಸುತ್ತದೆ ಎಂದು ಅ.ಸುಂದರ ಅವರು ಮಾಹಿತಿ ಒದಗಿಸಿದ್ದಾರೆ. (ಎಕ್ಸ್‌ವೇಶನ್ ಅಟ್ ಸನ್ನತಿ; ೧೯೮೬;ಪು.೨೧). ಈ ಪ್ರತ್ಯೇಕ ಶಿಲಾ ಶಾಸನಗಳು ಕ್ರಿ.ಶ.ಸು.೮-೯ನೆಯ ಶತಮಾನದ ವೇಳೆಗೆ ಸನ್ನತಿಯ ಚಂದ್ರಲಾಂಬ ದೇವಾಲಯ ಆವರಣದ ಎಡಭಾಗದಲ್ಲಿರುವ ಮಹಾಕಾಳಿ ಅಥವಾ ಕಾಳಿಕಾಂಬ ದೇವಾಲಯ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿದ್ದು, ಈ ದೇವಿಯ (ಚಾಮುಂಡಾ) ವಿಗ್ರಹದ ಪೀಠದ ಮೇಲೆ ಈ ಶಾಸನಗಳು ಕಂಡುಬರುತ್ತವೆ.

ಸನ್ನತಿಯಲ್ಲಿ ದೊರೆತ ಶಾಸನಗಳು ಸಹ ಯಾವುದೇ ಪೂರ್ಣ ಮಾಹಿತಿ ನೀಡದೆ, ಅಪೂರ್ಣವಾಗಿವೆ. ಉಳಿದ ಸಾಲುಗಳಿಂದ ತಿಳಿಯಬಹುದಾದ ಅಂಶವೆಂದರೆ ಕಳಿಂಗ ರಾಜ್ಯದ ಜೌಗಾಡ (ಗಂಜಾಂ ಜಿಲ್ಲೆ, ಓರಿಸ್ಸಾ) ಮತ್ತು ದೌಲಿ (ಪುರಿ ಜಿಲ್ಲೆ, ಓರಿಸ್ಸಾ)ಗಳಲ್ಲಿರುವ ಶಿಲಾ ಶಾಸನಗಳನ್ನೇ ಹೆಚ್ಚಿನ ಮಟ್ಟಿಗೆ ಹೋಲಿಸಬಹುದು. (ಸಂಶೋಧನಾ; ೧೯೯೧;ಪು.೭೩೩).

ಈ ಪ್ರತ್ಯೇಕ ಶಿಲಾ ಶಾಸನವನ್ನು ಡಿ.ಸಿ.ಸರಕಾರ ಅವರು ಹದಿನೈದನೆಯ ಮುಖ್ಯ ಶಿಲಾಶಾಸನ ಎಂದು ಕರೆದಿದ್ದಾರೆ. (ಸೆಲೆಕ್ಟ್ ಇನ್ಸ್ಕ್ರಿಪ್ಷನ್ಸ್ ಬೇರಿಂಗ್ ಆನ್ ಇಂಡಿಯನ್ ಹಿಸ್ಟರಿ ಅಂಡ್ ಸಿವಿಲಿಜೇಷನ್ ಸಂ.೧;೧೯೬೫;ಪು.೪೪) ಶೈಲಿಯ ದೃಷ್ಟಿಯಿಂದಲೂ ಪ್ರತ್ಯೇಕ ಶಿಲಾ ಶಾಸನದ ಪಾಠಗಳು ದೌಲಿ, ಜೌಗಾಡ ಪಾಠಗಳಿಗಿಂತ ಭಿನ್ನವಾಗಿದೆ ಎಂದು ಡಾ.ರಮೇಶ ಅವರು ಅಭಿಪ್ರಾಯ ಪಟ್ಟಿದ್ದಾರೆ. ಇವು ಕಳಿಂಗ ರಾಜ್ಯದ ದೌಲಿ ಮತ್ತು ಜೌಗಾಡಗಳಲ್ಲಿ ದೊರೆತಿರುವುದರಿಂದ ಅಲ್ಲಿನ ಜನತೆಯನ್ನು ಉದ್ದೇಶಿಸಿ ಬರೆದ ಶಾಸನಗಳಾಗಿವೆ ಎಂಬುದು ವಿದ್ವಾಂಸರ ಅಭಿಮತ. (ಸಂಶೋಧನಾ ;೧೯೯೧;ಪು.೭೩೮) ಕೆಲ

ಪರಿಶೋಧನೆಯ ನಂತರ ಕಳಿಂಗ ಶಾಸನವೇ ಬೇರೆ ಸನ್ನತಿಯಲ್ಲಿ ದೊರೆತ ಶಾಸನವೇ ಬೇರೆ, ಎಂಬ ಅಭಿಪ್ರಾಯ ಸ್ಪಷ್ಟಪಡಿಸಿದೆ. ಅಶೋಕ ದಕ್ಷಿಣದಲ್ಲಿ ಕೃಷ್ಣ, ಭೀಮಾ, ದೋಅಬ್ ಪ್ರದೇಶಗಳನ್ನು ಹೆಚ್ಚಾಗಿ ಗೆದ್ದುಕೊಂಡ ವೇಳೆಗೆ ಈ ಶಾಸನಗಳು ಬರೆಯಿಸಿರಬೇಕು. ಆ ಕಾರಣಕ್ಕಾಗಿಯೇ ಹೆಚ್ಚಿನ ಶಿಲಾಶಾಸನಗಳು, ಇಲ್ಲಿ ಕಾಣಬಹುದಾಗಿದೆ. ಈ ಶಾಸನಗಳು ದೊರೆತ ರಣಮಂಡಲವೆಂಬ ಭಾಗವನ್ನು ಗಮನಿಸಿದರೆ, ಕರ್ನಾಟಕಕ್ಕೆ ಒಳಪಟ್ಟ ಈ ಭಾಗವನ್ನು ವಶಪಡಿಸಿಕೊಳ್ಳಲು ಯತ್ನಿಸಿರಬಹುದು ಎಂಬುದಕ್ಕೆ ಸಮರ್ಥನೀಯವಾಗಿದೆ. ಎ. ಘೋಷ್ ಅವರ ಪ್ರಕಾರ, ಸನ್ನತಿ ಕೋಟೆ ನಿರ್ಮಾಣಗೊಂಡಿದ್ದು, ಕ್ರಿ.ಪೂ.೨೦೦ರಲ್ಲಿ. ಇದೇ ವೇಳೆಗೆ ಸ್ಥಳೀಯ ಜನರನ್ನು ಹಾಗೂ ಕೋಟೆ-ಕೊತ್ತಲಗಳನ್ನು ವಶಪಡಿಸಿಕೊಂಡು, ಸನ್ನತಿಯನ್ನು ಅಶೋಕ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಈ ದೃಷ್ಟಿಯಿಂದ ಅಶೋಕನ ಕಾಲದಲ್ಲೆ ಸನ್ನತಿ ಕೋಟೆ ಅಸ್ತಿತ್ವದಲ್ಲಿದ್ದಿತು.

**ಅಶೋಕನ ಶಾಸನಗಳು**

ಕರ್ನಾಟಕದಲ್ಲಿ ಕೆಲ ಪ್ರದೇಶಗಳಲ್ಲಿ ನೆಲೆಸಿದ್ದ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳನ್ನರಿಯಲು ಅಶೋಕನ ಶಾಸನಗಳು ಹಾಗೂ ಇತರ ಸ್ಮಾರಕಗಳು ನೆರವು ನೀಡಿ ಇತಿಹಾಸ ಕಟ್ಟಿಕೊಳ್ಳುವಲ್ಲಿ ಸಹಾಯಕವಾಗಿವೆ. ಅಶೋಕನ ಶಾಸನಗಳು ಬಯಲು ಪ್ರದೇಶದಲ್ಲಿದ್ದರೂ ಆ ನೆಲೆಗಳಲ್ಲಾಗಲಿ, ಸುತ್ತಮುತ್ತಲಿನ ನೆಲೆಗಳಲ್ಲಾಗಲಿ ನಡೆದ ಉತ್ಖನನಗಳಿಂದ ಮೌರ್ಯ ಸಂಸ್ಕೃತಿಯಲ್ಲಿ ವಿಶೇಷತೆಗಳೇನು ಕಂಡುಬಂದಿಲ್ಲ. ಬೃಹತ್ ಶಿಲಾಯುಗದ ಕೆಲ ಅವಶೇಷಗಳು ದೊರೆತಿರುವುದು ಗಮನಾರ್ಹವಾಗಿವೆ. ಹೀಗಾಗಿ ಮೌರ್ಯ ಸಂಸ್ಕೃತಿಯ ಪ್ರಭಾವ ಪಟ್ಟಣಗಳಿಗಷ್ಟೇ ಸೀಮಿತವಾಗಿತ್ತು. (ಕರ್ನಾಟಕ ಚರಿತ್ರೆ;ಸಂ.೧;೧೯೯೭;ಪು.೭೮). ಮೌರ್ಯ ಆಡಳಿತ ಕುರಿತು ಮಾಹಿತಿ ನೀಡುವಲ್ಲಿ ಆತನ ಶಾಸನಗಳೇ ಸಾಕ್ಷಿಯಾಗಿವೆ.

ಲಘು ಶಾಸನಗಳು ಈಗಾಗಲೇ ದಕ್ಷಿಣ ಭಾರತ (ಆಂಧ್ರ-ಕರ್ನಾಟಕ)ದ ಸಾಮ್ರಾಜ್ಯದ ಗಡಿಯಾಚೆ ಧರ್ಮ ಪ್ರಚಾರಕ್ಕಾಗಿ, ಧರ್ಮ ಸಮನ್ವಯಗೊಳಿಸಲು ಬರೆಯಿಸಿದನು. ಹಾಗೆಯೇ ಮುಖ್ಯ ಶಿಲಾಶಾಸನ ತನ್ನ ಸಾಮ್ರಾಜ್ಯದಲ್ಲಿ ಧರ್ಮಾಭಿವೃದ್ಧಿಗಾಗಿ, ಪ್ರಜಾಹಿತ ಕಾರ್ಯಕ್ಕಾಗಿ, ಹಲವು ಯೋಜನೆಗಳಿಗಾಗಿ ಬರೆಯುವ ಉದ್ದೇಶ ಹೊಂದಿದ್ದನು. ದೊರೆತ ಪ್ರತ್ಯೇಕ ಶಿಲಾಶಾಸನಗಳು ಸಹ ಹಲವಾರು ಯೋಜನೆಯನ್ನು ಹೊಂದಿದ್ದನು. ಈ ರೀತಿ ಅಶೋಕ ಕೆಲ ಕಾರಣಕ್ಕಾಗಿ ಶಾಸನಗಳನ್ನು ಹೊರಡಿಸಿರುವುದು ಸಮಂಜಸವೆನಿಸುತ್ತದೆ.

**ಹದಿನಾಲ್ಕನೆಯ ಮುಖ್ಯ ಶಿಲಾ ಶಾಸನ**

ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನಿಂದ ಬರೆಯಿಸಲಾಗಿದೆ. ಈ ಶಾಸನಗಳು ಎಲ್ಲ ಸ್ಥಳಗಳಲ್ಲಿ ಸಮರ್ಪಕವಾಗಿ ವಿಸ್ತಾರಗೊಳಿಸಿದನು. ವಿಸ್ತಾರವಾದ ರಾಜ್ಯವನ್ನು ಗೆದ್ದದ್ದಾಯಿತು. ಬಹಳಷ್ಟು ಲಿಪಿಗಳನ್ನು ಬರೆಯಿಸಿದನು. ಹೀಗೆಯೇ ಪ್ರತಿ ನಿತ್ಯ ಬರೆಯಿಸುತ್ತಲೇ ಇರುವೆನು. ಕೆಲವೆಡೆಗಳಲ್ಲಿ ಮತ್ತೆ ಮತ್ತೆ ಬರೆಯಿಸಿದ್ದನ್ನೇ ಬರೆಯಿಸಿದ್ದು ಉಂಟು. ಆ ಬರಹ ಸ್ವಾರಸ್ಯವಾದದ್ದೆಂದು ಕಂಡದ್ದರಿಂದ ಮತ್ತು ಜನರಿಗೂ ಹಾಗೆ ಕಾಣಲಿ ಎಂಬ ಕಾರಣಕ್ಕಾಗಿ ಈ ಶಾಸನ ಬರೆಯಿಸಲಾಗಿದೆ. ಈ ಹದಿನಾಲ್ಕನೆ ಮುಖ್ಯ ಶಿಲಾ ಶಾಸನದ ಬರಹ ಅಪೂರ್ಣವಾಗಿದ್ದರಿಂದ ಸಂಶಯಕ್ಕೆ ಎಡೆ ಮಾಡಿಕೊಟ್ಟಿದೆ.

**ಮೊದಲನೆಯ ಮುಖ್ಯ ಶಿಲಾ ಶಾಸನ**

ದೇವತೆಗಳಿಗೆ ಪ್ರಿಯನಾದವನ ಆಜ್ಞಾನುಸಾರ ತೊಸಾಲಿಯಲ್ಲಿರುವ ಮಹಾಮಾತ್ರರಿಗೆ ಮತ್ತು ನಗರ ವ್ಯವಹಾರಕರಿಗೆ ಹೀಗೆ ಹೇಳಲಾಗಿದೆ "ನನಗೆ ಯಾವುದಾದರೂ ಮುಖ್ಯವೆಂದು ತೋರಿದಾಗ ಅದು ಹಾಗೆ ನಡೆಯಬೇಕೆಂದು ಬಯಸುತ್ತೇನೆ. ಅದು ಹೇಗೆ? ಅದನ್ನು ಕೃತಿಯಲ್ಲಿ ಪ್ರತಿಪಾದಿಸಬೇಕೆಂದು, ಯೋಗ್ಯವಾದ ಸನ್ಮಾರ್ಗದಲ್ಲಿ ನಡೆಯಬೇಕೆಂಬುದೇ ನನ್ನ ಅಭಿಪ್ರಾಯ. ನೀವು ಸಹ ಅದೇ ಮಾರ್ಗದಲ್ಲಿ ನಡೆದರೆ ಸಾವಿರಾರು ಜೀವಿಗಳು ನಿಮ್ಮ ಅಧೀನಕ್ಕೆ ಒಳಪಡುತ್ತಾರೆ. ನಾವು ಒಳ್ಳೆಯವರಿಗೆಲ್ಲ ಪ್ರಿಯರಾಗಬೇಕು. ಸಮಸ್ತ ಜನ ನನ್ನ ಮಕ್ಕಳು. ನನ್ನ ಮಕ್ಕಳಿಗಾಗಿ ನಾನು ಬಯಸುವುದೇನನ್ನು? ಎಲ್ಲರಿಗೂ ಇಹದಲ್ಲಿಯೂ ಪರದಲ್ಲಿಯೂ ಒಳ್ಳೆಯದಾಗಲಿ, ಸುಖ ಶಾಂತಿ ಸಿಗಲೆಂದು ಬಯಸುತ್ತೇನೆ".

ಈ ನೀತಿಯು ಒಳ್ಳೆಯದಾಗಿದ್ದರೂ ಇದರಿಂದ ಒಬ್ಬರಾದರೂ ಕಷ್ಟಕ್ಕೆ ಸಿಲುಕಬಹುದು. ಒಬ್ಬ ಕಷ್ಟದಿಂದ ಪಾರಾದರೆ, ಇನ್ನೊಬ್ಬರು ಕಷ್ಟದಲ್ಲಿ ಸಿಲುಕಬಹುದು. ಆದ್ದರಿಂದ ಅನುಸರಿಸಬೇಕಾದ ಮಾರ್ಗ ಯಾವುದೆಂದರೆ, ಮಧ್ಯಮ ಮಾರ್ಗ. ಮಧ್ಯಮ ಮಾರ್ಗವನ್ನು ಅನುಸರಿಸಬೇಕು. ಈರ್ಷ್ಯೆ, ಶ್ರಮಕ್ಕೆ ಹಿಂಜರಿಯುವುದು, ಕಠೋರತೆ, ಆತುರ, ಆಲಸ್ಯ, ಸತತ ಪ್ರಯತ್ನ ಮಾಡದಿರುವುದು, ಅಲ್ಪಶ್ರಮದಿಂದಲೇ ದಣಿಯುವುದು, ಇಂತಹ ದೋಷಗಳು ವ್ಯಕ್ತಿಯಲ್ಲಿ ಸಹಜವಾದದ್ದು. ಇಂತಹ ದೋಷವಿರುವ ವ್ಯಕ್ತಿಗೆ ಈ ಮಾರ್ಗ ಅನ್ವಯಿಸುವುದಿಲ್ಲ. ಹಾಗಾಗಿ ಈ ದೋಷಗಳು ನನ್ನಲ್ಲಿ ಹುಟ್ಟಬಾರದು ಎನ್ನುವುದು. ಯಾರು ಶ್ರಮಕ್ಕೆ, ದುಡಿಮೆಗೆ ಹಿಂಜರಿಯುತ್ತಾರೋ, ಯಾರು ಉತ್ತಮ ಮಾರ್ಗದಲ್ಲಿ ನಡೆಯಲು ಪ್ರಯತ್ನಿಸುವುದಿಲ್ಲವೋ, ಅವರಿಗೆ ಜೀವನದಲ್ಲಿ ಮುಕ್ತಿ ದೊರೆಯುವುದಿಲ್ಲ. ಯಾವಾಗಲೂ ಚಟುವಟಿಕೆಯಿಂದ, ಆಸಕ್ತಿಯಿಂದಿದ್ದರೆ ಒಳ್ಳೆಯ ಮಾರ್ಗದಲ್ಲಿ ನಡೆದರೆ, ಅದೇ ಸರಿಯಾದ ಮಾರ್ಗ. ನಮ್ಮನ್ನು ನಾವು ಮೊದಲು ಅರಿತುಕೊಂಡು ಉಳಿದವರಿಗೆ ಹೀಗೆ ಹೇಳಬೇಕು. "ನಿಮಗೆ ರಾಜನ ಆಜ್ಞೆ ತಿಳಿದಿಲ್ಲವೆ? ದೇವತೆಗಳಿಗೆ ಪ್ರಿಯನಾದವನ ಶಾಸನ ಇರುವುದು ಹೀಗೆ. ಇದನ್ನು ಅರಿತರೆ ಒಳ್ಳೆಯ ಫಲ ದೊರೆಯುವುದು. ಅರಿಯದೆ ಇದ್ದರೆ ಅಪಾಯ ಸಂಭವಿಸಬಹುದು. ಎಲ್ಲವನ್ನೂ ಅರಿತರೆ ಸ್ವರ್ಗವೂ ಸಿಗುವುದಿಲ್ಲ. ಆದರೆ ಮಾಡುವ ಕಾರ್ಯದಲ್ಲಿ ಒಳ್ಳೆಯತನವಿದ್ದರೆ, ಫಲ ದೊರಕುವುದು. ಒಳ್ಳೆಯ ಮಾರ್ಗ ಅನುಸರಿಸಿದರೆ ರಾಜಾನುಗ್ರಹ ಮತ್ತು ಸ್ವರ್ಗವು ದೊರಕುತ್ತದೆ.

ಈ ಶಾಸನವನ್ನು ತಿಷ್ಯ ನಕ್ಷತ್ರದ ದಿನದಂದು ಎಲ್ಲರೂ ಕೇಳಲೇಬೇಕು. ಬೇರೆ ದಿನಗಳಲ್ಲಿ ಒಬ್ಬರಾದರೂ ಕೇಳಬೇಕು ಎಂಬ ನಿಯಮವನ್ನು ಹೊರಡಿಸಿದನು. ಇದನ್ನು ನಿಮ್ಮ ಜೀವನದಲ್ಲಿ ಅಳವಡಿಸಿಕೊಂಡು ಭವಿಷ್ಯವನ್ನು ರೂಪಿಸಿಕೊಳ್ಳಲು ಹೇಳಿದ್ದಾನೆ. ಈ ಲಿಪಿಯನ್ನು ಬರೆಯಿಸಿದ್ದರ ಉದ್ದೇಶವೇನೆಂದರೆ ನಗರ ಆಡಳಿತ ನಡೆಸುವವರು ಈ ನಿಯಮಗಳನ್ನು ಸದಾ ಕಾಲ ಪಾಲಿಸುತ್ತಿರಬೇಕು. ನಗರವಾಸಿಗಳಿಗೆ ಯಾವುದೇ ತೊಂದರೆಯಾಗದಿರಲಿ ಎಂಬುದೇ ಈ ಶಾಸನದ ಉದ್ದೇಶ. ಈ ಉದ್ದೇಶಕ್ಕಾಗಿ ಪ್ರತಿ ಐದು ವರ್ಷಗಳಿಗೊಮ್ಮೆ ಯಾರು ಯಾರು ಕರ್ಕಶರಲ್ಲವೋ, ಕ್ರೂರರಲ್ಲವೋ, ಕಾರ್ಯಾಚರಣೆಯಲ್ಲಿ ಮಾರ್ದವವುಳ್ಳವರೋ ಅಂತಹ ಅಧಿಕಾರಿ ವರ್ಗದವರನ್ನು ಪದಚ್ಯುತಗೊಳಿಸಲಾಗುವುದು ಎಂದು ತಿಳಿಸಿದ್ದಾನೆ. ಅಶೋಕನು ಹೊರಡಿಸಿದ ಈ ಶಾಸನಗಳ ಉದ್ದೇಶ, ಎಲ್ಲಾ ಜನರು ಧರ್ಮದ ಉದ್ದೇಶ ತಿಳಿದುಕೊಳ್ಳಬೇಕು. ಈ ಕಾರಣಕ್ಕಾಗಿ ತನ್ನ ಮಗ ಸುಶೀಮನನ್ನು ಶ್ರೀಲಂಕಾಗೆ ಮತ್ತು ಬೌದ್ಧ ಅನುಯಾಯಿಗಳನ್ನು ಇತರ ಪ್ರದೇಶಗಳಿಗೆ ಧರ್ಮ ಪ್ರಚಾರ ಮಾಡಲು ಕಳುಹಿಸಿದನು.

**ಎರಡನೆಯ ಪ್ರತ್ಯೇಕ ಶಿಲಾ ಶಾಸನ**

ಎರಡನೆಯ ಪ್ರತ್ಯೇಕ ಶಿಲಾ ಶಾಸನದಲ್ಲಿ ತನ್ನ ಗಡಿ ಪ್ರದೇಶಗಳ ಜನರಿಗೆ ಆತ ನೀಡಿರುವ ಕರೆ ವಾಖಲೆಯಾಗಿದೆ. ಅಲ್ಲಿಯ ಜನರಿಗೆ ಭರವಸೆಯೂ ನೀಡಲಾಗಿದೆ. "ನಾನು ಗೆಲ್ಲದೆ ಇರುವ, ಗಡಿ ಪ್ರದೇಶಗಳ ಜನರು ತಮ್ಮನ್ನು ಕುರಿತು ಈ ರಾಜನ ಇಚ್ಛೆಯೇನು? ಎಂದು ಕೊಳ್ಳುತ್ತಿರಬಹುದು. ನನ್ನ ಇಚ್ಛೆ ಇಷ್ಟೇ, ಅವರು ನನ್ನ ವಿಷಯದಲ್ಲಿ ಭಯಪಡುವುದು ಬೇಡ. ನನ್ನಲ್ಲಿ ವಿಶ್ವಾಸವಿರಲಿ, ನನ್ನಿಂದ ಅವರಿಗೆ ಸುಖವೇ ಹೊರತು, ದುಃಖವೆಂದಿಗೂ ಅಲ್ಲ" ಮತ್ತೆ ಅವರಿಗೆ ತಿಳಿದಿರಲಿ ಯಾವ ಸಂಧರ್ಭದಲ್ಲಿ ಕ್ಷಮೆ ಅವಶ್ಯವೋ, ಆಗೆಲ್ಲ ನಮ್ಮನ್ನು ಕ್ಷಮಿಸುವನು ಎಂದು. ನನ್ನ ನಿಮಿತ್ತವಾಗಿ ಅವರು ಧರ್ಮ ಮಾರ್ಗದಲ್ಲಿ ನಡೆಯುತ್ತಿರಬೇಕು. ಇಹಲೋಕದಲ್ಲೂ, ಪರಲೋಕದಲ್ಲೂ ಸಮೃದ್ಧಿಯನ್ನು ಪಡೆಯಲಿ ಎಂದು ತಿಳಿಸಿದ್ದಾನೆ. ಈ ಉದ್ದೇಶಕ್ಕಾಗಿರುವ ಅನುಶಾಸನವೇ ಇದು. ಇದರಿಂದ ನನ್ನ ಋಣವೂ ತೀರಲಿ ನೀವು ಅನುಸರಿಸುತ್ತಿರುವ ಈ ಅನುಶಾಸನದ ಪ್ರಯತ್ನದ ಫಲದಿಂದ ನಿಮ್ಮಲ್ಲಿ ವಿಶ್ವಾಸ, ಭರವಸೆ ಉಂಟಾಗಲಿ, ನಿಮ್ಮ ಕಾರ್ಯಾಚರಣೆಯಿಂದ ನೀವು ಮನಗಾಣಬೇಕು. ಏನೆಂದರೆ? ನಮ್ಮ ರಾಜ ನಮಗೆ ತಂದೆಯಂತೆಯೆ. ತನ್ನವರಲ್ಲಿರುವ ಸಹಾನುಭೂತಿಯೆ ಅವನಿಗೆ ನಮ್ಮಲ್ಲಿಯೂ ಇದೆ. ಈ ರಾಜನಿಗೆ ತನ್ನ ಮಕ್ಕಳು ಹೇಗೋ, ಹಾಗೆಯೇ ನಾವೂ ಎಂದು ಭಾವಿಸಬೇಕು ಎಂದು ತಿಳಿಸಿದ್ದಾನೆ.

ಈ ಅನುಶಾಸನ ಪಾಲಿಸುತ್ತಿರುವವರಲ್ಲಿ ಬಯಸುವುದೇನೆಂದರೆ, ಸತತ ಪ್ರಯತ್ನ ಮಹತ್ವದ್ದಾಗಿದೆ. ಈ ಉದ್ದೇಶದಿಂದಲೇ ದೇಶಾಧಿಕಾರಿಗಳಲ್ಲಿ ಭರವಸೆ ನೀಡುತ್ತೇನೆ, ನಿಮ್ಮ ವಿಶ್ವಾಸದಿಂದ ನಿಮ್ಮ ಸಾಮರ್ಥ್ಯಕ್ಕೆ ಎದುರಿಸುವ ಶಕ್ತಿ ನಿಮ್ಮಲ್ಲಿ ಹುದುಗಿರುವುದರಿಂದ ನೀವು ಎಂದಿಗೂ ಸಮರ್ಥರು. ಇಹದಲ್ಲಿ ಮತ್ತು ಪರದಲ್ಲಿ ನಿಮಗೆ ಸುಖ ಲಭಿಸುವುದು ಹಾಗೂ ನನ್ನ ಋಣ ತೀರಿಸಿದಂತಾಗುತ್ತದೆ. ಈ ಕಾರಣಕ್ಕಾಗಿ ಈ ಲಿಪಿ ಬರೆಯಿಸಲಾಗಿದ್ದು ರಾಜನ ಬಗ್ಗೆ, ಭಯ ಭೀತಿ, ಶಂಕೆಯನ್ನು ಹೋಗಲಾಡಿಸಿ, ರಾಜ 'ದೇವರ ಸಮಾನ'ವೆಂದು ತಿಳಿಸುವ ಶಾಸನ ಇದಾಗಿದೆ. ಈ ಲಿಪಿಯನ್ನು ಪ್ರತಿ ನಾಲ್ಕು ತಿಂಗಳಲ್ಲಿ ಎಲ್ಲರೂ ಕೇಳಬೇಕು ಲಕ್ಷಗೊಟ್ಟು ಶಾಂತಚಿತ್ತದಿಂದ ಒಬ್ಬನೆ ಆದರೂ ಕೇಳಬೇಕು. ಸನ್ನತಿಯಲ್ಲಿರುವ ಈ ಶಾಸನಗಳು ಬ್ರಾಹ್ಮಿಲಿಪಿಯಲ್ಲಿವೆ. ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ ಈ ಹಿಂದೆ ದೊರೆತಿರುವ ಶಾಸನಗಳ ಲಿಪಿಯನ್ನು ಪೂರ್ಣವಾಗಿ ಹೋಲುತ್ತವೆ. ಈ ಶಾಸನಗಳು ಲಭ್ಯವಾದ್ದರಿಂದ ಕರ್ನಾಟಕದಲ್ಲಿ ಮೊದಲ ಬಾರಿಗೆ ಅಶೋಕನ ಶಾಸನಗಳು ಬೆಳಕಿಗೆ ಬಂದಿವೆ.

ಈ ನಾಲ್ಕು ಶಾಸನಗಳ ಆಧಾರದಿಂದ ಭೀಮಾನದಿಯ ದಡದಲ್ಲಿರುವ ಕಲಬುರ್ಗಿ ಜಿಲ್ಲೆಯ ಪ್ರದೇಶಗಳು ಮೌರ್ಯರ ಆಡಳಿತಕ್ಕೆ ಒಳಪಟ್ಟಿದ್ದು ಸ್ಪಷ್ಟಪಡಿಸುತ್ತವೆ. ಈ ಪ್ರದೇಶವನ್ನು ಆಡಳಿತಾಧಿಕಾರಿ ನಿಯುಕ್ತರಾಗಿ ಮಹಾಮಾತ್ರರು ನೋಡಿಕೊಳ್ಳುತ್ತಿದ್ದರು. ದೇವನಾಂಪ್ರಿಯ ಪ್ರಿಯದರ್ಶಿ ರಾಜಾ ತನ್ನ ಪಟ್ಟಾಭಿಷೇಕವಾದ ಎಂಟು ವರ್ಷಗಳ ನಂತರ (ಕ್ರಿ.ಪೂ.೨೬೨-೬೧) ಕಳಿಂಗದ ಮೇಲೆ ಯುದ್ಧ ಕೈಗೊಂಡು, ಕಳಿಂಗ ಗೆದ್ದುಕೊಂಡನು. ಈ ಕದನದಲ್ಲಿ ಅನೇಕ ಲಕ್ಷ ಜನ ಸಾವಿಗೀಡಾದರು. ಸಾವಿರಾರು ಜನ ಅನಾಥರಾದರು, ಕೈಕಾಲುಗಳನ್ನು ಕಳೆದುಕೊಂಡು ಅಂಗವೈಕಲ್ಯರಾದರು. ಇಡೀ ರಣರಂಗವೇ ರಕ್ತದ ಹೊಳೆಯಿಂದ ಹರಿಯುತ್ತಿತ್ತು. ಇಂತಃ ಭೀಕರ ಕದನ ಅಶೋಕನ ಮೇಲೆ ಪರಿಣಾಮ ಬೀರಿ, ಮನಸ್ಸು ಪರಿವರ್ತನೆಗೊಂಡಿತು. ಇದರಿಂದ ದಿಗ್ವಿಜಯ ತೊರೆದು ಧರ್ಮವಿಜಯ ಸ್ವೀಕರಿಸಿದನು. (ಬೌದ್ಧ ಧರ್ಮ

ಅನುಯಾಯಿಯಾಗಿ ಕರ್ನಾಟಕದಾದ್ಯಂತ, ಧರ್ಮ ಪ್ರಚಾರಕ್ಕಾಗಿ ಮಹಾಮಾತ್ರರನ್ನು ನೇಮಿಸಿದನು) ಸನ್ನತಿಯಲ್ಲಿ ದೊರೆತ ಶಾಸನಗಳು ದಖ್ಖನ್ ಪ್ರದೇಶವನ್ನು ಹೇಗೆ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡ ಎಂಬ ಪ್ರಶ್ನೆಗಳಿಗೆ ಅವಕಾಶ ಮಾಡಿಕೊಡುತ್ತದೆ. ಬಹುಶಃ ಈ ಭಾಗ ಕಳಿಂಗ ಯುದ್ಧ ಮಾಡುವುದಕ್ಕಿಂತ ಪೂರ್ವದಲ್ಲೇ ಈ ಪ್ರದೇಶವನ್ನು ಗೆದ್ದು ಕೊಂಡಿರಬೇಕೆಂದು ಊಹಿಸಬಹುದು. ಅಥವಾ ಆ ನೆನಪು ಇನ್ನು ಮಾಸುವುದಕ್ಕಿಂತ ಮೊದಲೆ ಈ ಪ್ರತ್ಯೇಕ ಶಿಲಾ ಶಾಸನಗಳು ಬರೆಯಿಸಿರುವುದು ಔಚಿತ್ಯಪೂರ್ಣವಾಗಿದೆ. (ಸಂಶೋಧನೆ;೧೯೯೧;ಪು.೭೩೮) ಈ ಪ್ರದೇಶದಲ್ಲಿ ಮೊದಲು ಸ್ಥಳೀಯರು ಸ್ವತಂತ್ರ ಅರಸರಾಗಿದ್ದರು. ಅವರ ಅಧೀನದಲ್ಲಿ ಇದ್ದವೆಂದು ಆಗ ಲಘು ಶಿಲಾಶಾಸನಗಳನ್ನು ಬರೆಯಿಸಲಾಯಿತೆಂದು, ಕೆಲ ಕಾಲದ ನಂತರ ಕಲಬುರ್ಗಿ ಜಿಲ್ಲೆಯು ತನ್ನ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದರಿಂದ ಇಲ್ಲಿ ಮುಖ್ಯ ಶಿಲಾಶಾಸನಗಳನ್ನು ಬರೆಯಿಸಲಾಯಿತೆಂಬ ನಿಲುವು ಸ್ಪಷ್ಟಗೊಳ್ಳುತ್ತದೆ. (ಸಂಶೋಧನೆ;೧೯೯೧;ಪು.೭೩೬).

ತೋಸಾಲಿ ಸುವರ್ಣಗಿರಿಗಳೇ ತನ್ನ ಸಾಮ್ರಾಜ್ಯದ ಗಡಿಯನ್ನಾಗಿ ಮಾಡಿಕೊಂಡು, ಬಳಿಕ ಅಧಿಕಾರಿಗಳನ್ನು ನೇಮಿಸಿದ ನಂತರ ಕ್ರಿ.ಪೂ.೨೬೩-೨೬೨ರ ಸುಮಾರಿಗೆ ಪ್ರತ್ಯೇಕ ಶಿಲಾ ಶಾಸನಗಳನ್ನು ಸನ್ನತಿಯಲ್ಲಿ ಬರೆಯಿಸಿದ್ದರಿಂದ, ಇವು ಮಹತ್ವದ ಶಾಸನಗಳಾಗಿವೆ. ಅಶೋಕನ ಕಾಲದಲ್ಲಿ ಸನ್ನತಿ ಪ್ರಸಿದ್ಧಿ ಪಡೆದುಕೊಂಡಿತು. ಇಲ್ಲಿ ದೊರೆತಿರುವ ಬೃಹತ್ ಶಿಲಾಬಂಡೆ ಶಾಸನಗಳು ಕುರಿತು ಈಗಾಗಲೇ ಅಧ್ಯಯನ ಮಾಡಲಾಗಿದೆ. ಹಲವಾರು ನಂಬಿಕೆ, ಐತಿಹ್ಯ, ಪುರಾಣ, ಸ್ಥಳ, ಅನೇಕ ಕೃತಿಗಳ ಹೇಳಿಕೆಯ ಮೂಲಕ, ಜನಮನದಲ್ಲಿ ಸನ್ನತಿ ಬಗ್ಗೆ ಹೇಳುವುದೇನೆಂದರೆ, ಸನ್ನತಿ ಒಂದು ಪ್ರಾಚೀನ ಪ್ರಾಗೈತಿಹಾಸಿಕ, ಚಾರಿತ್ರಿಕ, ಐತಿಹಾಸಿಕ, ಮಹತ್ವ ಪಡೆದಿದೆ. ಇಂದು ಅವುಗಳ ಅವಶೇಷಗಳು ಮಾತ್ರ ದೊರಕಿವೆ. ಸನ್ನತಿ ಒಂದು ಶಿಲಾಯುಗ ಸಂಸ್ಕೃತಿಯಿಂದ ಹರಪ್ಪಾ-ಮಹೆಂಜೋದಾರ ಸಿಂಧೂ ಬಯಲಿನ ನಾಗರಿಕತೆಯನ್ನು ಹೊಂದಿದ ಕುರುಹುಗಳು ನಮಗೆ ದೊರಕಿವೆ. ಕನಗನಹಳ್ಳಿಯಲ್ಲಿ ಬೌದ್ಧ ಸ್ತೂಪಗಳು, ಅವಶೇಷಗಳು ದೊರಕಿರುವುದರಿಂದ ಅಲ್ಲಿನ ವಾಸ್ತು ಶಿಲ್ಪ-ಚಿತ್ರಕಲೆಯ ಮೂಲಕ ಅಂದಿನ ಸಾಮಾನ್ಯ ಜನರ ಜೀವನದ ವ್ಯವಸ್ಥೆ ತಿಳಿಯಬಹುದು.

**ಶಾತವಾಹನರು**

ಮೌರ್ಯ ಸಾಮ್ರಾಜ್ಯದ ಪತನದ ನಂತರ ದಖಿನ್ ಪ್ರಸ್ಥಭೂಮಿಯಲ್ಲಿ ಶಾತವಾಹನರು ಮೌರ್ಯರ ಸಾಮಂತರಾಗಿದ್ದು ಡೆಕ್ಕನ್ನಿನಲ್ಲಿ (ವಿಂಧ್ಯ ಪರ್ವತಗಳಿಂದ ಕಾವೇರಿ ನದಿಯವರೆಗಿನ ಪ್ರಸ್ಥಭೂಮಿ, ಇದನ್ನು ದಕ್ಷಿಣಪಥವೆಂದು ಹೇಳಲಾಗುತ್ತದೆ). ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಅಶೋಕನ ಮರಣ ಮೌರ್ಯ ಸಾಮ್ರಾಜ್ಯದ ವಿಘಟನೆಗೆ ನಾಂದಿಯಾಯಿತು. ಇದರಿಂದ ಮಗಧ ಸಾಮ್ರಾಜ್ಯ ಅವನತಿ ಹೊಂದಿತು. ಶಾತವಾಹನರು ದಖ್ಖನ್‌ದಲ್ಲಿ ತಮ್ಮ ರಾಜಕೀಯ ಶಕ್ತಿಯನ್ನು ಬಲಪಡಿಸಿಕೊಂಡರು. ಸುಮಾರು ಮೂರುವರೆ ನೂರು ವರ್ಷಗಳ ಕಾಲ ಡೆಕ್ಕನ್‌ದ ಬಹುಭಾಗವನ್ನು ಆಳಿದ ಇವರು ಕನ್ನಡ ನಾಡಿನ ಜನಾಂಗವನ್ನು ಒಂದು ಸಂಘಟನೆಯ ಶಕ್ತಿಯನ್ನಾಗಿ ಮಾರ್ಪಡಿಸಿದರು.

ಮೂಲತಃ ಶಾತವಾಹನರನ್ನು ದಕ್ಷಿಣಾಪಥದ ಸ್ವಾಮಿಗಳೆಂದೂ ಹಾಗೂ ಇನ್ನು ಕೆಲವರು ತ್ರೈಸಮುದ್ರತೋಯಪಿತ ವಾಹನರೆಂದೂ ಕರೆದುಕೊಂಡಿದ್ದಾರೆ. ದಕ್ಷಿಣ ಪಥದ ಮೇಲೆ ತಮ್ಮ ಪ್ರಭುತ್ವ ಸಾಧಿಸಿದರು. ಶಾಸನಗಳಲ್ಲಿ ಇವರನ್ನು ಆಂಧ್ರರೆಂದು ಕರೆಯಲಾಗಿದೆ. ಪುರಾಣ ಉಲ್ಲೇಖವನ್ನಾಧರಿಸಿ,

ಆಂಧ್ರದಲ್ಲಿ ಆಳುತ್ತಿದ್ದ ಒಂದು ರಾಜಮನೆತನದ ಸೇವಕರಾಗಿದ್ದರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇನ್ನೂ ಕೆಲವು ವಿದ್ವಾಂಸರ ಪ್ರಕಾರ ಶಾತವಾಹನರು ಮೌರ್ಯ ವಂಶದವರ ಅಧೀನರಾಗಿದ್ದರಿಂದ ಪುರಾಣಗಳಲ್ಲಿ ಇವರನ್ನು 'ಆಂಧ್ರಭೃತ್ಯ'ರೆಂದು (ಕರ್ನಾಟಕದ ಇತಿಹಾಸ; ೧೯೮೪; ಪು.೪೨) ಕರೆಯಲಾಗಿದೆ. ಮೌರ್ಯರ ನಂತರ ಶಾತವಾಹನರ ಆಳ್ವಿಕೆಯಲ್ಲಿ ಕ್ರಿ.ಪೂ.೨೩೪–೧೮೭ರ ಅವಧಿವರೆಗೆ ಯಾವುದೇ ರಾಜ ಮನೆತನಗಳ ಬಗ್ಗೆ ತಿಳಿದು ಬರುವುದಿಲ್ಲ. ಕ್ರಿ.ಪೂ.೧೮೭–೭೫ರ ಅವಧಿಯಲ್ಲಿ ಶುಂಗ ವಂಶದ ಹತ್ತು ಅರಸರು ಹಾಗೂ ಕ್ರಿ.ಪೂ.೩೦ರಲ್ಲಿ ಕಣ್ವ ವಂಶದ ಅರಸರು ಏಳಿಗೆಗೆ ಬಂದರು. ಆದರೆ ಈ ಎರಡು ವಂಶಗಳ ಬಗ್ಗೆ ಕರ್ನಾಟಕದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಹಾಗೂ ಧಾರ್ಮಿಕವಾಗಿ ತಿಳಿದುಕೊಳ್ಳಲು ಯಾವುದೇ ಆಕಾರಗಳು ಲಭ್ಯವಿಲ್ಲ. (ಕರ್ನಾಟಕ ಚರಿತ್ರೆ ಸಂ.೧;೧೯೯೭;ಪು.೩೦೧) ಇದರಿಂದ ದಖ್ಖನ್ ಪ್ರದೇಶ ಕ್ಷೀಣದೆಸೆಗೆ ಸಾಗಿತು. ಇದೇ ವೇಳೆಗೆ 'ಆಂಧ್ರಭೃತ್ಯ'ರೆನಿಸಿಕೊಂಡ ಶಾತವಾಹನರು ತಮ್ಮ ಶಕ್ತಿ ಸಾಮರ್ಥ್ಯದಿಂದ ತಮ್ಮ ಆಸೆ, ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಕರ್ನಾಟಕ ಚರಿತ್ರೆ ಪ್ರಾರಂಭಕಾಲದ ಸಂಸ್ಕೃತಿಯ ವೈಭವವನ್ನು ಪ್ರತಿಬಿಂಬಿಸುವಲ್ಲಿ ಶಾತವಾಹನರು ಪ್ರಮುಖರಾಗಿದ್ದಾರೆ. ಇವರು ದಕ್ಷಿಣದಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ ನಂತರ ಆ ಪ್ರದೇಶದಲ್ಲಿ ಭದ್ರವಾಗಿ ನೆಲೆಯೂರಿದರು. ಇದರಿಂದ ದಖ್ಖನ್ ಪ್ರಸ್ಥಭೂಮಿ ತನ್ನ ಹೆಚ್ಚಿನ ಮಹತ್ವ ಪಡೆದುಕೊಂಡಿತು. ಡಾ. ಕೆ. ರಾಜಗೋಪಾಲಚಾರಿಯವರ ಪ್ರಕಾರ ಶಾತವಾಹನರ ಕಾಲ ದಕ್ಷಿಣ ಭಾರತದಲ್ಲಿ ಸ್ಥಗಿತಗೊಂಡ ಕಾಲವಾಗಿರದೆ ಸದಾ ಚಟುವಟಿಕೆಯಿಂದ ಕೂಡಿದ ಕಾಲವಾಗಿತ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಶಾತವಾಹನರು ಮೂಲತಃ ಆಂಧ್ರಪ್ರದೇಶದವರು ಎಂಬ ಅಭಿಪ್ರಾಯವಿದೆ. ಆಂಧ್ರಪ್ರದೇಶದ ಸ್ವಲ್ಪ ಭಾಗ ಸೇರಿದಂತೆ ಬಳ್ಳಾರಿ ಪ್ರದೇಶವನ್ನು 'ಶಾತವಾಹನೀಹಾರ' ಮತ್ತು ಆ ಭಾಗದಲ್ಲಿ ರಾಜ್ಯವನ್ನು 'ಶಾತವಾಹನಿ ರಾಷ್ಟ್ರ' ಎಂದು ಕರೆಯಲಾಗಿದೆ. ಇವರು ಬಳ್ಳಾರಿ ಜಿಲ್ಲೆಯವರಾಗಿದ್ದರಿಂದ ಇವರ ಮೂಲ ಸ್ಥಳ ಕರ್ನಾಟಕವಾಗಿರಬೇಕೆಂದೂ ಅಭಿಪ್ರಾಯ ಪಡಲಾಗಿದೆ. (ಕರ್ನಾಟಕ ಚರಿತ್ರೆ ಸಂ.೧;೧೯೯೭; ಪು.೩೦೨) ಆದರೆ ಯಾವುದೇ ಶಾಸನಗಳಲ್ಲಿ ತಮ್ಮನ್ನು ತಾವು 'ಆಂಧ್ರಭೃತ್ಯ'ರೆಂದು ಹೇಳಿಕೊಂಡಿಲ್ಲ ಹೀಗಾಗಿ ಇವರನ್ನು ಆಂಧ್ರರು (ಆಂಧ್ರಭೃತ್ಯ) ಎಂದು ಕರೆಯುವುದರಲ್ಲಿ ಅರ್ಥವೆಲ್ಲಿಯದು? ಶಾತವಾಹನರ ಶಾಸನಗಳು ಹೆಚ್ಚಾಗಿ ಮಹಾರಾಷ್ಟ್ರದಲ್ಲಿ ದೊರೆತಿವೆ. ಕಾರಣ ಅದು ಫಲವತ್ತಾದ ಪ್ರದೇಶವಾಗಿದ್ದು, ಕೃಷಿಗೆ ಯೋಗ್ಯ ಭೂಮಿಯಾಗಿತ್ತು. ಆದ್ದರಿಂದ ಅಧಿಕಾರವನ್ನು ಸ್ಥಾಪಿಸಿ, ಗೋದಾವರಿ ಕಣಿವೆಯವರೆಗೂ ಸಾಮ್ರಾಜ್ಯದ ವ್ಯಾಪ್ತಿ ಹರಡಿತು. ಇವರ ಶಾಸನಗಳಲ್ಲಿ ತಮ್ಮನ್ನು 'ಶಾತವಾಹನ ಕುಲ' ಹಾಗೂ 'ಶಾತವಾಹನ'ರೆಂದಷ್ಟೆ ಕರೆಯಿಸಿಕೊಂಡಿದ್ದಾರೆ.

ಉತ್ತರ ಮತ್ತು ದಕ್ಷಿಣದ ಸಂಸ್ಕೃತಿಯನ್ನು ಸಮ್ಮಿಲನಗೊಳಿಸಿ ಮೌರ್ಯರ ಸಾಮಂತರಾಗಿ ಶಾತವಾಹನರು ದಕ್ಷಿಣದ ಭಾಗದಲ್ಲಿ ಅಧಿಕಾರವನ್ನು ಹೊಂದಿದರು. ಚಂದ್ರಗುಪ್ತನ ಸೈನ್ಯವನ್ನು ಬಿಟ್ಟರೆ, ಬೇರೆ ಯಾವ ಅರಸರು ಬೃಹತ್ ಸೈನ್ಯ ಹೊಂದಿರಲಿಲ್ಲ. ಆದರೆ ಶಾತವಾಹನರು ಚಂದ್ರಗುಪ್ತನಕ್ಕಿಂತಲೂ ಬಲಿಷ್ಠವಾದ ಬೃಹತ್ ಸೈನ್ಯವನ್ನು ಹೊಂದಿದರೆಂದು ಮೆಗಸ್ತಾನೀಸ್ ಹೇಳಿದ್ದಾನೆ. (ಕರ್ನಾಟಕ ಇತಿಹಾಸ ದರ್ಶನ; ೧೯೭೦;ಪು.೧೮)

ದಕ್ಷಿಣದಲ್ಲಿ ರಾಜಕೀಯ ಶಕ್ತಿಯಿಂದ ಏಳಿಗೆಗೆ ಬಂದರು. ಸೈನಿಕ ಸಂಘಟನೆಯಲ್ಲಿ ಏಕತೆ ಸಾಧಿಸಿದರು. ಹದಿನೆಳು ರಾಜರು ಮುನ್ನೂರು ವರ್ಷಗಳ ಕಾಲ ರಾಜ್ಯಭಾರ ಮಾಡಿದರೆ, ಮುವತ್ತು ಅರಸರು ನಾಲ್ಕುನೂರಾ ಅರವತ್ತು ವರ್ಷಗಳ ಕಾಲ ರಾಜ್ಯಭಾರ ಮಾಡಿದರು. ಉತ್ತರಭಾಗವು ಶಾತವಾಹನರ ಆಡಳಿತಕ್ಕೆ ಒಳಪಟ್ಟಿದ್ದು, ಇವರ ಶಾಸನಗಳು ಕರ್ನಾಟಕದಲ್ಲಿ ಸನ್ನತಿ, ಬೆಳಗಾವಿ ಜಿಲ್ಲೆಯ ವಡ್ಡಗಾಂವ, ಬಳ್ಳಾರಿ ಜಿಲ್ಲೆಯ ಮ್ಯಾಕೆಡೋಣಿ, ಹಿರೇಹಡಗಲಿ, ಮಳವಳ್ಳಿ, ಬನವಾಸಿ, ತಾಳಗುಂದ ಮುಂತಾದ ಸ್ಥಳದಲ್ಲಿ ದೊರೆಯುತ್ತವೆ.

ಸಿಮುಖನು ಶಾತವಾಹನ ವಂಶದ ಮೂಲ ಪುರುಷ ಕ್ರಿಪೂ.೨೩೦ರಲ್ಲಿ ಆಳ್ವಿಕೆ ಮಾಡಿದನು. ಸಿಮುಖನು ಶುಂಗ ಹಾಗೂ ಕಣ್ವ ಅರಸರ ಶಕ್ತಿಯನ್ನು ಕುಗ್ಗಿಸಿ ದಕ್ಷಿಣದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ಈತನನ್ನು ಜೈನ ಗ್ರಂಥದಲ್ಲಿ ಶಾಲಿವಾಹನನೆಂದು ಸಂಭೋಧಿಸಲಾಗಿದೆ. ಈತನು ನಾಣ್ಯಗಳು ಆಂಧ್ರ ಪ್ರದೇಶದಲ್ಲಿ ಹೆಚ್ಚಾಗಿ ದೊರೆತಿದ್ದು, 'ಚಿಮುಖ' ಎಂಬ ಹೆಸರುಳ್ಳ ನಾಣ್ಯಗಳು ಈತನದಾಗಿರಬಹುದೆಂದು ಊಹಿಸಲಾಗಿದೆ. ನಾನಾಘಟ್ಟ ಶಾಸನವು ಈತನನ್ನು 'ರಾಜಾ ಸಿಮುಖ' ಎಂದು ಕರೆದಿದೆ. ರಾಜಾ 'ಸಿಮುಖ ಶಾತವಾಹನ'ನೆಂದೇ ಪ್ರಸಿದ್ಧಿ ಪಡೆದ ಈತ ಪಲ್ಲವ ಹಾಗೂ ಚುಟುಗಳೊಂದಿಗೆ ರಕ್ತ ಸಂಬಂಧ ಬೆಳೆಸಿ, ದಕ್ಷಿಣದ ರಾಜಕೀಯ ವಲಯದಲ್ಲಿ ಪ್ರಭುತ್ವ ಪಡೆದುಕೊಂಡನು.

ಸಿಮುಖನ ನಂತರ ಆತನ ಸಹೋದರನಾದ ಕೃಷ್ಣ ಅನಂತರ ಈತನ ಮೊಮ್ಮಗನಾದ ಗೌತಮ ಪುತ್ರ ಶಾತಕರ್ಣಿ ಆಡಳಿತ ವಹಿಸಿಕೊಂಡನು. ಶಾತವಾಹನ ಅರಸರಲ್ಲಿಯೇ ಪ್ರಸಿದ್ಧನಾಗಿದ್ದ, ಈತ ಕ್ರಿಪೂ.೧೦೬ರಲ್ಲಿ ದಖ್ಖನ್‌ದಲ್ಲಿ ರಾಜಕೀಯ ಪ್ರಭುತ್ವ ಸಾಧಿಸಿದನು. ಈ ವಂಶವನ್ನು ಉಚ್ಛ್ರಾಯ ಸ್ಥಿತಿಗೆ ತಂದನು. ಅಂಗಿಕವಂಶದ ಮಹಾರಥಿಯ ಮಗಳಾದ ನಗನ್ನಿಕಾಳನ್ನು ವಿವಾಹವಾದನು. ಇವಳ ಒಂದು ಶಾಸನದಲ್ಲಿ ತನ್ನ ಪತಿಯನ್ನು 'ದಕ್ಷಿಣಾಪಥಪತಿ' ಎಂದು ಹಾಗೂ ವೀರಯೋಧನೆಂದು ವರ್ಣಿಸಿದ್ದಾಳೆ. (ಕರ್ನಾಟಕ ಚರಿತ್ರೆ ಸಂ.೧;೧೯೯೭;ಪು.೩೦೨). ಗೌತಮಿ ಪುತ್ರ ಶಾತಕರ್ಣಿಯ ಆಡಳಿತ ಉತ್ತುಂಗ ಶಿಖರಕ್ಕೆ ತಲುಪಿತು. ಈತ ತನ್ನ ಆಳ್ವಿಕೆ ಅವಧಿಯಲ್ಲಿ ಶಕ ಮತ್ತು ಪಲ್ಲವರನ್ನು ಹಿಮ್ಮೆಟಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದನು. ದಕ್ಷಿಣ ಭಾರತದ ಚರಿತ್ರೆಯಲ್ಲಿ ತನ್ನದೇ ಆದ ವಿಶಿಷ್ಟವಾದ ಸ್ಥಾನಮಾನವನ್ನು ಹೊಂದಿದ್ದನು. ಈತ 'ತ್ರೈಸಮುದ್ರ ತೊಯಪಿತವಾಹನ' ಎಂಬ ಬಿರುದನ್ನು ಧರಿಸಿದನು. ನಾಸಿಕ್ ಹಾಗೂ ಸನ್ನತಿ ಶಾಸನದಲ್ಲಿ ಈತನನ್ನು ಅಭಗವಾಹನ (ಮೇಘವಾಹನ) ಶಾತವಾಹನನೆಂದೂ ಕರೆಯಲಾಗಿದೆ.

ಗೌತಮಿ ಪುತ್ರ ಶಾತಕರ್ಣಿಗಿಂತ ಮುಂಚೆ ಶಾತವಾಹನರು ಆಂಧ್ರ ಪ್ರದೇಶದಲ್ಲಿ ಆಳ್ವಿಕೆ ಮಾಡಿದರು ಎನ್ನಲು ಯಾವುದೇ ಸಾಕ್ಷಾಧಾರಗಳು ಲಭ್ಯವಿಲ್ಲ. ಗೌತಮಿಪುತ್ರ ಶಾತಕರ್ಣಿ ತುಂಬಾ ಆಕರ್ಷಕ ವ್ಯಕ್ತಿ, ಬಲಿಷ್ಠದೇಹ, ಗಂಭೀರ, ನಡೆ-ನುಡಿಗಳಿಂದ ತನ್ನ ತಾಯಿಯ ಪ್ರೀತಿಯ ಮಗನಾಗಿದ್ದ. ತನ್ನ ಪ್ರಜೆಗಳ ಹಿತವನ್ನು ಬಯಸುತ್ತಿದ್ದನು. ಯಾವುದೇ ತೊಂದರೆಗಳಾಗದಂತೆ ನೋಡಿಕೊಳ್ಳುತ್ತಿದ್ದನು. ನ್ಯಾಯಯುತನಾದ ಆಡಳಿತ ನಡೆಸಿಕೊಂಡು ಹೋಗುತ್ತಿದ್ದ ಇಂತಹ ಒಳ್ಳೆಯ ವ್ಯಕ್ತಿತ್ವ ಹೊಂದಿದ್ದ. ಈತನನ್ನು ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಿ ಕರೆಯುತ್ತಿದ್ದರು ಎಂದರೆ ಆತನ ಮೇಲೆ ಜನರು ಇಟ್ಟ ಪ್ರೀತಿ ವ್ಯಕ್ತವಾಗುತ್ತದೆ.

ನಂತರ ಈತನ ಮಗನಾದ ವಾಸಿಷ್ಠಪುತ್ರ ಪುಳಮಾಪಿ ಅಧಿಕಾರ ವಹಿಸಿಕೊಂಡಿದ್ದು ಸನ್ನತಿಯ ಚಿತ್ರ ಫಲಕದಲ್ಲಿ ಮೂಡಿ ಬಂದಿದೆ. ನಾಸಿಕ್‌ದಲ್ಲಿ ದೊರೆತ ಈತನ ಶಾಸನ ಪ್ರಮುಖ ದಾಖಲೆಯಾಗಿದೆ. (ಕರ್ನಾಟಕ ಚರಿತ್ರೆ ಸಂ.೧;೧೯೯೭;ಪು.೨೯). ಈತನ ಆಳ್ವಿಕೆ ಆಂಧ್ರ ಪ್ರದೇಶವನ್ನೊಳಗೊಂಡಿದ್ದರ ಜೊತೆಗೆ ಕರ್ನಾಟಕದ ಬಳ್ಳಾರಿ ಸುತ್ತಮುತ್ತಲಿನ ಪ್ರದೇಶವನ್ನು ವ್ಯಾಪಿಸಿತ್ತು. ಈತನು ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ನಾಡನ್ನು 'ಶಾತವಾಹನಿಯ ನಾಡು' ಎಂದು ಕರೆಯಲಾಗುತ್ತಿತ್ತು. ಈತನ ಶಾಸನಗಳು ಮಹಾರಾಷ್ಟ್ರದ ಕನ್ಹೇರಿಯಲ್ಲಿ ದೊರೆತಂತೆಯೇ ಕರ್ನಾಟಕದ ಸನ್ನತಿಯಲ್ಲೂ ದೊರೆತಿವೆ. ದೊರೆತ ಶಾಸನಗಳಲ್ಲಿ ವಾಸಿಷ್ಠ ಪುತ್ರ ಪುಳಮಾಯಿಯ ಒಳ್ಳೆಯ ಗುಣಗಳನ್ನು ಹೇಳಿವೆ. ದಕ್ಷಿಣಾಪಥೇಶ್ವರನು ಆದ ವಾಸಿಷ್ಠಪುತ್ರ ಶ್ರೀ ಶಾತಕರ್ಣಿಯು ರುದ್ರದಾಮನ ಅಳಿಯನಾಗಿರಬೇಕೆಂಬ ಊಹೆ ಇದೆ. ಮ್ಯಾಕೆ ದೋಣಿ (ಬಳ್ಳಾರಿ) ಧಾರವಾಡ ಜಿಲ್ಲೆಯ ಶಾಸನಗಳು ಈತನ ಕಾಲದ್ದಾಗಿವೆ. ಈತ ಅಧಿಕಾರವಹಿಸಕೊಂಡಾಗ ಶಾತವಾಹನ ಸಾಮ್ರಾಜ್ಯ ಕ್ಷೀಣಿಸಲು ಪ್ರಾರಂಭಿಸಿತೆಂದು ಸನ್ನತಿಯ ಶಾಸನ ಮೂಲಕ ತಿಳಿದುಕೊಳ್ಳಬಹುದು. ಕ್ಷಿಣದೆಸೆಗೆ ಸಾಗಿದಾಗ ಮತ್ತೆ ಗೌತಮಿ ಪುತ್ರ ಶಾತಕರ್ಣಿಯೆ ಸೋತು ಹೋದ ಭಾಗಗಳನ್ನು ಪುನಃ ಗೆದ್ದುಕೊಂಡನು. ಈತ ಶಾತವಾಹನರ ಬಲಿಷ್ಠ ಅರಸನಾಗಿದ್ದನೆಂಬುದನ್ನು ಸನ್ನತಿಯ ಶಾಸನವೇ ಮೊದಲು ದಾಖಲೆ ಒದಗಿಸುತ್ತದೆ. ಬನವಾಸಿ, ಚಂದ್ರವಳ್ಳಿ, ವಡಗಾಂವ, ಮಾಧವಪುರಗಳೆಲ್ಲ ಏನು ದಾಖಲೆ ಒದಗಿಸುತ್ತದೆಯೋ ಅವುಗಳಿಗಿಂತ ಶಾತವಾಹನರ ಬಗ್ಗೆ ಹೆಚ್ಚಿನ ದಾಖಲೆ ಒದಗಿಸಿ, ಪ್ರಾಮುಖ್ಯತೆ ಪಡೆದುಕೊಂಡಿದೆ. ಈತ ಹೊರಡಿಸಿದ ನಾಣ್ಯಗಳು ಈತನ ಪ್ರದೇಶದಲ್ಲಿ ಚಲಾವಣೆಯಲ್ಲಿದ್ದವು. ಈತನ ನಂತರ ವಾಸಿಷ್ಠಪುತ್ರ ಶಿವಶ್ರೀ ಪುಳುಮಾಯಿ (ಕ್ರಿ.ಶ.ಸು.೧೪೮–೧೫೪) ತನ್ನ ರಾಣಿ ಮಹಾದೇವಿಯ ಸ್ಮರಣೆಗೆ ಬನವಾಸಿಯಲ್ಲಿ ಹಾಕಿಸಿದ ಸ್ಮಾರಕ ಶಿಲೆ ಸನ್ನತಿಯಲ್ಲಿರುವ ಶಾಸನಗಳಿಂದ ತಿಳಿದು ಬರುತ್ತದೆ. ಶಿವಶ್ರೀ ಪುಳಮಾಯಿ ನಂತರ ಶಾತವಾಹನರ ವಂಶ ಕ್ಷೀಣದೆಸೆಗೆ ಸಾಗಿತ್ತು. ಇದೇ ವೇಳೆಗೆ ಶಾತವಾಹನ ಕೊನೆ ಅರಸನಾದ ಯಜ್ಞಶ್ರೀ ಶಾತಕರ್ಣಿ ಶಕ್ತಿಶಾಲಿ ಅರಸನಾಗಿದ್ದು, ಕ್ಷೀಣಿಸುತ್ತಿದ್ದ ರಾಜ್ಯವನ್ನು ಮರಳಿ ಪಡೆದು ಪುನಃ ಸಾರ್ವಭೌಮತ್ವ ಸ್ಥಾಪಿಸಿದನು. ಈತನ ನಾಣ್ಯಗಳು ಚಂದ್ರವಳ್ಳಿ, ಬನವಾಸಿ, ವಡ್ಡಗಾಂವ್, ಮಾದವಪುರ್, ಸನ್ನತಿ ಮುಂತಾದ ನೆಲೆಗಳಲ್ಲಿ ದೊರೆತಿವೆ.

**ಆಡಳಿತ ಕೇಂದ್ರವಾಗಿ ಸನ್ನತಿ**

ಪ್ರಾಕ್‌ಚಾರಿತ್ರಿಕ ಮತ್ತು ಚಾರಿತ್ರಿಕ ಕಾಲದ ನೆಲೆಗಟ್ಟಿನಿಂದ ಎರಡು ಸಂಸ್ಕೃತಿಗಳು ನಿರಂತರವಾಗಿ ಹರಿದುಬಂದಿದ್ದನ್ನು ಈ ಭಾಗದಲ್ಲಿ ಕಂಡು ಬರುತ್ತದೆ. ಮೌರ್ಯರ ಕಾಲದಲ್ಲಿದ್ದ ಬರಹ ಪದ್ಧತಿಗಳು ಇವರ ಕಾಲದಲ್ಲಿ ಮತ್ತಷ್ಟು ಅಭಿವೃದ್ಧಿ ಹೊಂದಿದ್ದವು. ಶಾತವಾಹನರ ಅವಧಿಯಲ್ಲಿ ನಗರ ರಚನೆ, ಸಂಸ್ಕೃತಿ, ವಿಶಿಷ್ಟವಾಗಿತ್ತು. ಸನ್ನತಿಯಲ್ಲಿ ಕೈಗೊಂಡಿರುವ ಭೂಶೋಧನೆಯಿಂದ ಬೆಳಕಿಗೆ ಬಂದ ವಿಶಿಷ್ಟ ಮಾದರಿಯ ಹೊಳಪುಳ್ಳ ಮೃತ್‌ಪಾತ್ರೆ ಉತ್ಪಾದನೆ, ಕಲಾತ್ಮಕ, ಶಿಲಾಫಲಕಗಳು, ಬೌದ್ಧಸ್ತೂಪಗಳು, ವಿಹಾರಗಳು, ಇಟ್ಟಿಗೆಯ ಸೌಧಗಳು, ವಿಶಾಲ ರಸ್ತೆಗಳು, ಬೃಹತ್ ಕೆರೆಗಳು, ಕಂದಕಗಳು, ಕಣಜ ಮತ್ತು ಬಾವಿಗಳು, ಸ್ನಾನದ ಘಟ್ಟಗಳು, ಬಿಳಿ ಸುಣ್ಣದ ಗಾರೆ ಲೇಪಿತ ಸ್ತಂಬಗಳು, ಸುಟ್ಟ ಹೆಂಚುಗಳು ನೂರಾರು ಗೃಹೋಪಯೋಗಿ ಸಾಧನಗಳು, ಚಿತ್ರ ಬಿಡಿಸಿದ ನಾಣ್ಯಗಳು, ಕಾರ್ನಿಲಿಯನ್ ಮುಂತಾದ ಅರೆ ಪ್ರಶಸ್ತಿ ಶಿಲೆಯ ಮಣಿಗಳು ಶಂಖದ ಆಭರಣಗಳು ದೊರೆಕಿವೆ. ಆದಿ ಇತಿಹಾಸ ಯುಗದ ಜನವಸತಿಯ

ಕುರುಹುಗಳು ಇಲ್ಲಿನ ಅನೇಕ ಸ್ಥಳದಲ್ಲಿ ಕಂಡುಬಂದಿವೆ. ಮಹತ್ವದ ಅವಶೇಷಗಳನ್ನು ಸನ್ನತಿ ತನ್ನ ಚಾರಿತ್ರಿಕ ಘಟ್ಟವನ್ನು ತನ್ನ ಮಡಿಲಲ್ಲಿ ಹುದುಗಿಸಿಕೊಂಡಿದ್ದು ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಊರುಗಳ ನಿರ್ಮಾಣ ಹಾಗೂ ಬರವಣಿಗೆ ಶಾತವಾಹನರ ಆಡಳಿತಕ್ಕೆ ಸಾಕ್ಷಿಯಾಗಿವೆ. ಸನ್ನತಿ ಶಾತವಾಹನರ ಕಾಲಿನ ಆಡಳಿತದ ಪ್ರಮುಖ ಕೇಂದ್ರ, ಚಂದ್ರವಳ್ಳಿ, ವಡಗಾಂವ್, ಮಾಧವಪುರ, ಉಪಕೇಂದ್ರಗಳಿರಬಹುದು. ಸನ್ನತಿ ಶಾತವಾಹನ ಅರಸರ ನೇರ ಆಡಳಿತಕ್ಕೆ ಒಳಪಟ್ಟಿತ್ತು.

ಭೂ ಶೋಧನೆಯಲ್ಲಿ ದಂತದ ಬಳೆಗಳು, ಸ್ಫಟಿಕದ ಮಣಿಗಳು, ತಾಮ್ರದ ಉಂಗುರ, ಕಬ್ಬಿಣದ ಚೂರು ಮತ್ತು ಬಟ್ಟಲುಗಳು, ಮಣ್ಣಿನ ಬಂಡಿ ಮತ್ತು ಗಾಲಿಗಳು ದೇಹವನ್ನು ಉಜ್ಜಿಕೊಳ್ಳುವ ಮಣ್ಣಿನ ಸಾಧನ, ಕಲ್ಲಿನ ಒನಕೆಗಳು, ಬೀಸುವ ಕಲ್ಲುಗಳು, ಹಣತೆಗಳು ಸನ್ನತಿಯಲ್ಲಿ ದೊರೆತಿವೆ. ಸನ್ನತಿಯಲ್ಲಿರುವ ಮಹಾಕಾಳಿ ಅಥವಾ ಕಾಳಿಕಾಂಬೆ ದೇವಾಲಯದಲ್ಲಿ ಕ್ರಿ.ಶ.೮–೯ ಶತಮಾನದ ಕಾಲಕ್ಕೆ ಸೇರಿದ ದೇವಿಯ ಪೀಠದ ಶಾಸನವೊಂದು ದೊರೆತಿದೆ. ಇತ್ತೀಚಿನ ಸಂಶೋಧನೆಯಿಂದ ಕ್ರಿ.ಶ.೨ನೆಯ ಶತಮಾನಕ್ಕೆ ಸೇರಿದ ಅವಶೇಷಗಳು ಭೀಮಾನದಿ ದಂಡೆಯಲ್ಲಿರುವ ರೋಜಾ (ಶಹಾಪೂರ ತಾಲೂಕು) ಜೇವರ್ಗಿ, ಬೆಳವಾಡಗಿ, ಹಿಪ್ಪರಗಿ ಸನ್ನತಿಯಲ್ಲಿ ದೊರೆತಂತೆ ನಿವೇಶನಗಳು ದೊರೆತಿವೆ. ಶಾಸನ ಸಹಿತವಿರುವ ಸ್ಮಾರಕ ಶಿಲ್ಪ, ಹಾಗೂ ಇತರ ಶಿಲ್ಪಗಳು ದೊರೆತಿವೆ. ಜೇವರ್ಗಿ ತಾಲೂಕಿನ ಹಸರಗುಂಡಗಿ ಅಣಬಿ ಹಾಗೂ ಚಿತ್ತಾಪುರ ತಾಲೂಕಿನ ಕೊಲ್ಲೂರುಗಳಲ್ಲಿ ಇದೇ ಕಾಲಕ್ಕೆ ಸಂಬಂಧಿಸಿದ ಸ್ಮಾರಗಳಿವೆ.

ಸನ್ನತಿಯಲ್ಲಿ ಇನ್ನು ಹೆಚ್ಚಿನ ಪರಿಶೋಧನೆಯಿಂದ ಸ್ತೂಪ, ಛಾಯಾ ಪ್ರತಿಮೆ, ಜನವಸತಿಯ ಇಟ್ಟಿಗೆಯ ಕಟ್ಟಡಗಳು, ದೊರೆತಿವೆ. ಅಲ್ಲಲ್ಲಿ ದೊರೆತ ಕೋಟೆ ಮತ್ತು ಸ್ಮಾರಕಗಳು ಇಟ್ಟಿಗೆಯಿಂದ ನಿರ್ಮಾಣಗೊಂಡಿವೆ. ಶಾತವಾಹನರ ಕಾಲದಲ್ಲಿ ಬರಹವುಳ್ಳ ಸ್ಮಾರಕಗಳು ವಿಪುಲವಾಗಿ ದೊರೆತಿವೆ. ಇಲ್ಲಿನ ಶಿಲ್ಪಗಳ ವೈವಿಧ್ಯತೆಯು ಸುಂದರ ಮತ್ತು ಆಕರ್ಷಣೆಯಿಂದ ಕೂಡಿದೆ. ಶಾಸನ ಸಹಿತವಿರುವ ಗೌತಮಿ ಪುತ್ರ ಶಾತಕರ್ಣಿ ಸುಂದರ ಶಿಲ್ಪಕಲೆಯಿಂದ ಮನಮೋಹಕವಾಗಿದೆ. ಶೈಲಿ ಮತ್ತು ಚಾರಿತ್ರಿಕ ಸನ್ನಿವೇಶದ ದೃಷ್ಟಿಯಿಂದ ಇದೊಂದು ಅಮೋಘ ಶಿಲ್ಪ. ಈ ಶಾಸನ ಪಾಠವು ಅತಿ ಉಪಯುಕ್ತವಾದುದು. ಕೇವಲ ಎರಡೇ ಸಾಲಿನಲ್ಲಿ ಅಡಕವಾಗಿರುವ ಹೋರಾಟದ ಬರಹಗಳಲ್ಲಿ ಅರಸರ ಸಾಧನೆಗಳನ್ನು ನಿರೂಪಿಸುತ್ತವೆ. ಮಾತ್ರವಲ್ಲ, ಪ್ರಮುಖ ಚಾರಿತ್ರಿಕ ಘಟನೆಗಳನ್ನು ಒಳಗೊಂಡಿದೆ. ಆದರೆ ಈ ಶಾಸನ ಪ್ರಾರಂಭ ಮತ್ತು ಅಂತ್ಯ ಭಾಗ ತ್ರುಟಿತಗೊಂಡಿದ್ದರಿಂದ ಯಾವುದೇ ಅಂಶಗಳು ಸ್ಪಷ್ಟವಾಗಿ ತಿಳಿಸುವುದಿಲ್ಲ. ಅವುಗಳಲ್ಲಿ ಮಹತ್ವದ ಫಲಕಗಳೆಂದರೆ, ಗೌತಮಿಪುತ್ರ ಶಾತಕರ್ಣಿಯ ಸಾಧನೆಗಳನ್ನು ಚಿತ್ರಿಸುವ ಫಲಕ, ಶಾಸನ ಸಹಿತ ವಿರುವಂಥದ್ದು ದೊರೆತಿವೆ. ಈ ಶಾಸನ ಈತನ ಮಗನಾದ ವಶಿಷ್ಠಪುತ್ರ ಪುಳಮಾಯಿ ಹಾಕಿಸಿರಬಹುದೆಂದು ತಿಳಿದುಬರುತ್ತದೆ. ಈ ಶಾಸನದ ಫಲಕದ ಮೇಲೆ ಈತನ ತಂದೆ ಅಸ್ವಸ್ಥನಾಗಿರುವಾಗ ರಾಣಿಯರು ದುಃಖದಿಂದ ಕುಳಿತಿದ್ದಾರೆ. ರಾಜ ಮಂಚದ ಮೇಲೆ ಮಲಗಿರುವ ದೃಶ್ಯ, ಈತನ ಎದುರಿಗೆ ಇತರ ದಾಸಿಯರು, ದುಃಖತಪ್ತರಾಗಿ ಕುಳಿತಿದ್ದಾರೆ. ಇತರ ಸ್ತ್ರೀಯರು ಆಭರಣಗಳನ್ನು ಹಾಕಿಕೊಂಡಿರುವುದರಿಂದ ಇವರು ಆಸ್ಥಾನಕ್ಕೆ ಸಂಬಂಧಿಸಿದವರೆಂದು ತಿಳಿದು ಬರುತ್ತದೆ. ಈ ಶಾಸನದ ಮೇಲಿನ ಭಾಗ ಒಡೆದು ಹೋಗಿದೆ. (ಮೌರ್ಯ ಮತ್ತು ಶಾತವಾಹನ ಯುಗ;೨೦೦೪;ಪು.೧೦೬). ಹಾಗಾಗಿ ಈ ಶಾಸನ ಪ್ರಮುಖ ಚಾರಿತ್ರಿಕ ಸಾಕ್ಷಾಧಾರ ಎನ್ನುವಲ್ಲಿ ಸಂಶಯವಿಲ್ಲ. ಶಾಸನ ಮತ್ತು ಶಾಸನ ದೃಷ್ಟಿಯಿಂದ ಸನ್ನತಿ ನಿವೇಶನ ಶ್ರೀಮಂತವಾದುದು. ಇವರ ಕಾಲದ ಸನ್ನತಿಯಲ್ಲಿ ಎಂಬತ್ತಕ್ಕೂ ಹೆಚ್ಚು

ಶಾಸನಗಳು ಲಭ್ಯವಾಗಿದ್ದು, ಅವುಗಳಲ್ಲಿ ನಲವತ್ತು ಶಾತವಾಹನರ ಕಾಲದ್ದಾಗಿವೆ. ಸನ್ನತಿ ಪ್ರದೇಶದಲ್ಲಿ ದೊರೆತ ಈ ಶಾಸನಗಳು ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿವೆ. ಸನ್ನತಿ ಶಾಸನ ಹಾಗೂ ಶಿಲ್ಪಗಳ ದೃಷ್ಟಿಯಿಂದ ವೈಭವ ಪಡೆದಿದೆ. ಶಾತವಾಹನರ ಅಧಿಕೃತ ಭಾಷೆ ಪ್ರಾಕೃತ. ಬ್ರಾಹ್ಮಿಲಿಪಿಯ ಶಾಸನಗಳು (ಪ್ರಾಚೀನ ಭಾರತ;೧೯೯೩;ಪು.೧೭೫) ಹೆಚ್ಚಾಗಿ ದೊರೆತಿದ್ದು, ಇವುಗಳ ಅಧ್ಯಯನ ಇನ್ನು ಹೆಚ್ಚಿನ ಮಟ್ಟದಲ್ಲಿ ನಡೆಯಬೇಕಾಗಿದೆ.

ಇವರ ಕಾಲದ ಅರಸರ ಶಾಸನಗಳು ಪ್ರಾಕೃತ ಭಾಷೆಯಲ್ಲಿವೆ. ಕ್ರಿ.ಶ.೨-೩ನೆಯ ಶತಮಾನದ ಶಾತವಾಹನ ಇಕ್ಷ್ವಾಕು ಶಾಸನಗಳು ಇದೇ ಲಿಪಿಶೈಲಿಯಲ್ಲಿವೆ. ಶಾಸನಪಾಠ ಹೊಂದಿರುವ ಇನ್ನೊಂದು ಶಿಲ್ಪವೆಂದರೆ ವಶಿಷ್ಠ ಪುತ್ರ ಶಿವಸಿರಿ ಪುಳಮಾವಿ ಶಿಲ್ಪ. ಇದು ಕಲಬುರ್ಗಿ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಸಂರಕ್ಷಿಸಿಡಲಾಗಿದೆ. ನಂತರದ ಶಿಲ್ಪಗಳು ಅಮಾತ್ಯರಿಗೆ ಸಂಬಂಧಿಸಿದ್ದಾಗಿವೆ. ಶಿಲ್ಪ ಸಹಿತ ಹೊಂದಿರುವ ಶಾಸನ ಅಮಾತ್ಯನ ಮಗ ಪ್ರಿಯದತ್ತನ ಶಿಲ್ಪ ಕಂಡುಬರುತ್ತದೆ. ಇನ್ನೊಂದು ರಾಜಾಮಾತ್ಯ ಗಗನಕನ ಪತ್ನಿ ರಾಮಸಿರಿಯ ಸ್ಮರಣ ಶಿಲ್ಪ ಸನ್ನತಿಯಲ್ಲಿ ಕಂಡುಬರುತ್ತದೆ. ಕರ್ನಾಟಕದ ಕೆಲ ಪ್ರದೇಶಗಳು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು. ಆದರೆ ದೊರೆತ ಮಾಹಿತಿ ಅಲ್ಪ. ಪೂರ್ವಕ್ಕೆ ಸನ್ನತಿ ಪಶ್ಚಿಮದಲ್ಲಿ ಬನವಾಸಿ ಇವರ ಆಡಳಿತ ಮುಖ್ಯ ಕೇಂದ್ರಗಳಾಗಿದ್ದವು. ಅನೇಕ ಉಪಕೇಂದ್ರಗಳು ಸಹ ಕಂಡು ಬರುತ್ತವೆ. ಆದರೆ ಸನ್ನತಿ ಸಂಪೂರ್ಣವಾಗಿ ಇವರ ಆಡಳಿತಕ್ಕೆ ಒಳಪಟ್ಟಿತ್ತು.

**ಸಾಮಂತರು**

ಶಾತವಾಹನರು ಮೌರ್ಯರ ಆಡಳಿತ ಪದ್ಧತಿಯನ್ನು ಮುಂದುವರೆಸಿದರು. ಇವರ ಕಾಲದ ಮಂತ್ರಿಗಳು, ದಂಡನಾಯಕರು, ನ್ಯಾಯಾಧಿಪತಿಗಳು, ಮಹಾಮಾತ್ರರು ಎಂಬ ಹುದ್ದೆಗಳು ಇದ್ದವು. 'ಅಮಾತ್ಯ' ರೆಂಬ ಹುದ್ದೆ ಕೆಳ ಮಟ್ಟದ ಹುದ್ದೆಯಾಗಿತ್ತು. ರಾಜನೇ ರಾಜ್ಯದ ಪ್ರಮುಖನಾಗಿದ್ದನು. ರಾಜ್ಯದ ಅನುಕೂಲಕ್ಕಾಗಿ ಅನೇಕ ಪ್ರಾಂತಗಳನ್ನಾಗಿ ವಿಭಾಗಿಸಲಾಗಿತ್ತು. ಈ ಪ್ರಾಂತಗಳನ್ನು ಇತರ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು. ರಾಜ್ಯದ ಪ್ರಮುಖ ಆಡಳಿತ ಅಧಿಕಾರಿಗಳಾಗಿ ಭಾಂಡಾಗಾರಿಕ (ಉಗ್ರಾಣಾಧಿಕಾರಿ) ಹೇರಣಿಕ (ಹಣಕಾಸು ಅಧಿಕಾರಿ) ಲೇಖಕ (ರಾಜ್ಯದ ಮುಖ್ಯ ಕಾರ್ಯದರ್ಶಿ) ಎಂಬುವವರು ಕಾರ್ಯ ನಿರ್ವಹಿಸುತ್ತಿದ್ದರು. ಮಾಂಡಲಿಕರಾದ ಮಹಾರಥಿ, (ಪಶ್ಚಿಮ ಘಟ್ಟ) ಮಹಾಭೋಜ(ಉತ್ತರ ಕೊಂಕಣ) ಎಂಬುವವರು ಕೆಲ ಪ್ರದೇಶಗಳನ್ನು ನೋಡಿಕೊಳ್ಳತ್ತಿದ್ದರು. ರಾಜನೇ ರಾಜ್ಯದ ನ್ಯಾಯಾಧೀಶನಾಗಿದ್ದನು. ತನ್ನ ಆಡಳಿತಕ್ಕಾಗಿ ಇತರ ಮಂತ್ರಿಗಳು ಸಹಕರಿಸುತ್ತಿದ್ದರು. ಶಾತವಾಹನರು ಶಾಸನಗಳ ಕರಡನ್ನು ತಯಾರಿಸಲು ಅಮಾತ್ಯ, ಪ್ರತೀಹಾರ, ಮಹಾಸೇನಾಪತಿಗಳನ್ನು ನೇಮಿಸುತ್ತಿದ್ದರು. ಶಾಸನಗಳನ್ನು ರಕ್ಷಿಸಿಡಲು ಪಟ್ಟಿಕಪಾಲಕ ಎಂಬ ಅಧಿಕಾರಿಗಳನ್ನು ಶಾಸನ ಕೊರೆಯುವ ಮತ್ತು ಫಲಾನುಭವಿಗಳಿಗೆ, ಆ ದಾನದ ವಿಷಯವನ್ನು ತಿಳಿಸಲು ನಿಯೋಗಿಗಳು (ಸಮಗ್ರ ಭಾರತದ ಇತಿಹಾಸ;೧೯೯೭;ಪು.೨೭೨) ಇರುತ್ತಿದ್ದರು. ಗ್ರಾಮವು ಆಡಳಿತದ ಕೊನೆ ಘಟಕವಾಗಿತ್ತು. ಗ್ರಾಮಿಣಿ ಎಂಬುವವನ್ನು ಗ್ರಾಮದ ಅಧಿಕಾರಿಯಾಗಿದ್ದನು. ಸ್ವತಃ ಈತನೇ ಗ್ರಾಮದ ವ್ಯಾಜ್ಯಗಳನ್ನು ಬಗೆಹರಿಸುತ್ತಿದ್ದನು. ದಾನವನ್ನು ಪಡೆದ ಬ್ರಾಹ್ಮಣರು ಮತ್ತು ಬೌದ್ಧರು ಆರ್ಥಿಕವಾಗಿ ಶ್ರೀಮಂತರಾಗಿದ್ದರು. ಹಾಗೂ ಆಡಳಿತದಲ್ಲಿ ಸಹ ಉನ್ನತ ಸ್ಥಾನ ಪಡೆದಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಶಾತವಾಹನರ ಆಡಳಿತ ಪದ್ಧತಿ ಶಿಸ್ತಿನಿಂದ ಕೂಡಿದ್ದು, ಶಾಂತಿ ನೆಲೆಸಿತ್ತು.

**ಸ್ತೂಪ**

ಅಶೋಕ ತನ್ನ ಆಳ್ವಿಕೆ ಅವಧಿಯಲ್ಲಿ ಎಂಬತ್ತನಾಲ್ಕುಸಾವಿರ ಸ್ತೂಪಗಳನ್ನು ನಿರ್ಮಿಸಿದ್ದನು. ಆಂಧ್ರಪ್ರದೇಶದ ಅಮರಾವತಿಯಲ್ಲಿ ಮಹಾಸ್ತೂಪ, ಸಾಂಚಿಯಲ್ಲಿರುವ ಸ್ತೂಪಗಳು ಪ್ರಮುಖವಾಗಿವೆ. ಹಾಗೆಯೇ ಸನ್ನತಿಯಲ್ಲಿರುವ ಸ್ತೂಪವು ಕೂಡ ಪ್ರಾಮುಖ್ಯತೆ ಪಡೆದಿದೆ. ಈ ಭಾಗವನ್ನು ಸಂಶೋಧನಾ ಕಾರ್ಯದ ವೇಳೆಗೆ ಬೌದ್ಧ ಸ್ತೂಪದ ಅವಶೇಷಗಳು ದೊರಕಿವೆ. ಸ್ತೂಪಗಳೆಂದರೆ "ಬುದ್ಧನ ಅವಶೇಷಗಳನ್ನು ತುಂಬಿಡಲು ಇಟ್ಟಿಗೆ ಅಥವಾ ಕಲ್ಲಿನಿಂದ ನಿರ್ಮಿಸಿದ ಗುಮ್ಮಟಾಕಾರದ ಕಟ್ಟಡಗಳಾಗಿವೆ." (ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ;೨೦೦೨;ಪು.೬೩) ಈ ಸ್ತೂಪಗಳು ಹೊರನೋಟದಿಂದ ಗುಮ್ಮಟಾಕಾರದಿಂದ ಕೂಡಿದ್ದು, ಹೆಚ್ಚು ಬಾಗಿಲುಗಳನ್ನು ಹೊಂದಿವೆ. ಇವುಗಳನ್ನು ಹೆಚ್ಚಾಗಿ ಧಾರ್ಮಿಕ ಚರ್ಚಗಳಿಗೆ ಉಪಯೋಗಿಸಲಾಗುತ್ತಿತ್ತು. (ಸಮಗ್ರ ಭಾರತದ ಇತಿಹಾಸ;೧೯೭೭;೨೬೨) ಸ್ತೂಪಗಳಲ್ಲಿ ಪವಿತ್ರವಾದ ಅಸ್ಥಿಗಳನ್ನು ಮಾತ್ರ ಕರಂಡಕವೊಂದರಲ್ಲಿ ಹುದುಗಿಸಿಯಿಡುವುದು ಸಾಮಾನ್ಯವಾದ ಪದ್ಧತಿ ಆಗಿದೆ. ಕಲ್ಲಿನ ಕರಂಡಕ ಹುದುಗಿಟ್ಟಿದ್ದಾರೆ ಎಂಬುದು ಸ್ಪಷ್ಟ. ಈ ಸ್ತೂಪಗಳು ಬೌದ್ಧ ಧರ್ಮದಲ್ಲಿ ಪೂಜ್ಯನೀಯ ಸ್ಥಾನ ಪಡೆದಿದೆ. ಇವುಗಳ ಮೇಲೆ 'ಅಹಿಮರಿ ಕಾಯನಾಗನಿಕಾಯ" ಎಂದು ಬರೆಯಲಾಗಿದೆ. (ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ;೨೦೦೨;ಪು.೧೬) ಈ ಸ್ತೂಪಗಳು ಬೇರೆ-ಬೇರೆ ದಿಕ್ಕಿನಲ್ಲಿ ಕಂಡು ಬರುತ್ತವೆ. ಸ್ತೂಪಗಳನ್ನು ಕಟ್ಟಿಸುವ ಪದ್ಧತಿ ತುಂಬ ಪ್ರಾಚೀನವಾದದ್ದು. ಕಾರಣ ಸ್ತೂಪಗಳು ಐತಿಹಾಸಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ತನ್ನದೇ ಆದ ಮಹತ್ವ ಪಡೆದಿದೆ.

ಸನ್ನತಿಯ ಸಮೀಪವಿರುವ ಕನಗನ ಹಳ್ಳಿಯಲ್ಲಿ ಮೂರು ಬೃಹತ್ ದಿನ್ನೆಗಳಿವೆ. ಕನಗನಹಳ್ಳಿಯ ಸ್ತೂಪ ಆನೆಗುತ್ತಿಯ ಸ್ತೂಪದ ದಿನ್ನೆ, ಬೆನ್ನು ಗುತ್ತಿಯ ದಿಬ್ಬ, ಕೈತಾಳ ಹೊಲದಲ್ಲಿರುವ ವಸತಿ ಪ್ರದೇಶದ ದಿಬ್ಬಗಳು ಹಾಗೂ ಭೀಮಾನದಿಯವರೆಗೂ ಅನೇಕ ಸ್ತೂಪಗಳು ಶಾತವಾಹನರ ಕಾಲ ಕ್ರಿ.ಶ.೧-೨ನೆಯ ಶತಮಾನಕ್ಕೆ ಸೇರಿದ್ದಾಗಿವೆ. ಒಂದು ಸ್ತೂಪ ಚಂದ್ರಲಾಪರಮೇಶ್ವರಿ ದೇವಾಲಯದ ಸಮೀಪದಲ್ಲಿದೆ. ಇವುಗಳಲ್ಲಿ ಅತ್ಯಂತ ದೊಡ್ಡ ಸ್ತೂಪ ಕ್ರಿ.ಶ.೧೯೮೫ರಲ್ಲಿ ಉತ್ಖನನ ಮಾಡಲಾಯಿತು. ಸನ್ನತಿಯೊಂದನ್ನು ಬಿಟ್ಟರೆ ಬೌದ್ಧ ಸ್ತೂಪ ಮತ್ತು ಶಿಲ್ಪಾವಶೇಷಗಳು ಹೆಚ್ಚಾಗಿ ಕನಗನ ಹಳ್ಳಿಯಲ್ಲಿಯೇ ದೊರಕಿವೆ. ಒಟ್ಟಿನಲ್ಲಿ ಈ ಬೌದ್ಧಸ್ತೂಪಗಳು ಅಲ್ಲಿದ್ದ ಸ್ತೂಪ ಹಾಗೂ ವಾಸ್ತು ಶಿಲ್ಪದ ಸಾಮಾನ್ಯ ಚಿತ್ರದ ಕಲ್ಪನೆಯನ್ನು ಮೂಡಿಸುತ್ತವೆ.

**ನಾಣ್ಯ**

ಶಾತವಾಹನರ ಕಾಲದ ಸನ್ನತಿಯಲ್ಲಿ ಸೀಸ ಮತ್ತು ತಾಮ್ರದ ನಾಣ್ಯಗಳು ದೊರೆತಿವೆ. ಸಿರಿಶಾತವಾಹನನ ಸೀಸದ ನಾಣ್ಯಗಳ ಮೇಲೆ ಕಮಾನಿನ ಆಕಾರದಲ್ಲಿ ತೋರಿಸಲಾದ ಬೆಟ್ಟ, ಮುಂತಾದ ಚಿಹ್ನೆಗಳು ಕಂಡು ಬರುತ್ತವೆ. ಸನ್ನತಿಯಲ್ಲಿ ಭೂ ಉತ್ಖನನ ಕ್ರಿ.ಶ.೧೯೯೩-೯೪ನೆಯ ಅವಧಿಯಲ್ಲಿ ಕೈಗೊಂಡ ಕಾರ್ಯದ ವೇಳೆಗೆ ಎಂಟು ಬೆಳ್ಳಿಯ ನಾಣ್ಯಗಳು (ಮೌರ್ಯ ಮತ್ತು ಶಾತವಾಹನ ಯುಗ;೨೦೦೪;ಪು.೧೧೧) ದೊರಕಿವೆ. ಸಿಮುಖನ ನಾಣ್ಯಗಳು ಸಹ ಇಲ್ಲಿ ದೊರಕಿವೆ. ನಾಣ್ಯಗಳ ಮೇಲೆ ಮೂರು ಶಿಖರಗಳ ಬೆಟ್ಟ, ಮುಂತಾದ ಚಿಹ್ನೆಗಳು ಕಂಡು ಬರುತ್ತವೆ. ಇವರ ಕಾಲದ ನಾಣ್ಯಗಳು ಕಾಸಿನ ನಾಣ್ಯ, ಬೆಳ್ಳಿಯ ಮುದ್ರೆ ಹೊಂದಿರುವ ನಾಣ್ಯಗಳು ದೊರೆತಿವೆ. ಗೌತಮಿ ಪುತ್ರ ಶಾತಕರ್ಣಿ ಟಂಕಿಸಿದ ನಾಣ್ಯಗಳು ಕರ್ನಾಟಕದಲ್ಲಿ ಚಲಾವಣೆಯಲ್ಲಿದ್ದು, ಬಳಕೆಗೆ ಬಂದಿವೆ. ಆದರೆ ಈ ಅರಸರ ನಾಣ್ಯಗಳ

ಮೇಲೆ ಬೇರೆ ಬೇರೆ ಹೆಸರುಗಳನ್ನು ಕೊರೆದಿರುವುದರಿಂದ ವಿದ್ವಾಂಸರಲ್ಲಿ ನಾಣ್ಯಗಳ ಬಗ್ಗೆ ಒಮ್ಮತದ ನಿಲುವು ತಳೆದಿಲ್ಲ. ಆದರೆ ಸನ್ನತಿಯಲ್ಲಿ ದೊರೆತ ನಾಣ್ಯಗಳ ಬಗ್ಗೆ ಎ.ವಿ.ನರಸಿಂಹ ಮೂರ್ತಿಯವರು ಸನ್ನತಿಯಲ್ಲಿ ನಡೆಯುತ್ತಿರುವ ಉತ್ಖನನ ನಾಣ್ಯ ಶಾಸ್ತ್ರದ ದೃಷ್ಟಿಯಿಂದ ಉತ್ತಮ ಫಲಿತಾಂಶಗಳನ್ನು ನೀಡಬಲ್ಲದೆಂಬುದನ್ನು ಅನೇಕ ವಿದ್ವಾಂಸರು ಮನಗಂಡಿಲ್ಲವೆನ್ನುತ್ತಾರೆ. ಅವರು ವಿವರಿಸುವಂತೆ, ವಿವಾದಾಸ್ಪದವಾಗಿದ್ದರೂ, ಶಾತವಾಹನ ಮೊದಲನೆಯ ಅರಸನ ನಾಣ್ಯಗಳು ಇಲ್ಲಿ ದೊರಕಿವೆ.

**ಸನ್ನತಿಯ ಕೋಟೆ**

ಸನ್ನತಿಯ ಸಂಶೋಧನಾ ಕಾರ್ಯವನ್ನು ಕಪಟರಾಳ ಕೃಷ್ಣರಾಯರು, ಎಮ್.ಶೇಷಾದ್ರಿ, ಪಿ.ಬಿ.ದೇಸಾಯಿ, ಎಸ್.ಆರ್.ರಾವ್, ಅ. ಸುಂದರ, ಕೆ.ವಿ.ರಮೇಶ, ಆಯ್.ಕೆ.ಶರ್ಮ, ಎಸ್.ಕೆ.ಜೋಷಿ, ಎಚ್.ಟಿ. ತಳವಾರ, ರು.ಮ.ಷಡಕ್ಷರಯ್ಯ, ಆರ್.ವಿ.ಶಿವಶರ್ಮ ಮುಂತಾದವರು ಕೈಗೊಂಡರು. ಭೀಮಾ ನದಿಯ ತೀರದ ಮೇಲೆ ಹಾಗೂ ಕೆಳಭಾಗದಲ್ಲಿ ಕೋಟೆ ಇದೇ ಎಂದು ಸ್ಪಷ್ಟ ಪಡಿಸಿದರು. ಈ ಕೋಟೆಯಿಂದ ಊರನ್ನು ರಕ್ಷಿಸಲಾಗಿದೆ. ಇಲ್ಲಿನ ಗೋಡೆ ಇಟ್ಟಿಗೆ ಮಣ್ಣು ಮತ್ತು ದ್ವಾರಗಳು ಕಂಡಾಗ ಎರಡು ಸಾವಿರ ವರ್ಷಗಳ ಹಿಂದಿನ ಇತಿಹಾಸ ತಿಳಿಸುತ್ತದೆ. ಸನ್ನತಿ ಒಳಕೋಟೆ ಹಾಗೂ ಹೊರಕೋಟೆಗಳು ಮೂನ್ನೂರು ಮೀಟರ್ ಅಂತರದಲ್ಲಿದೆ.

ಶಾತವಾಹನರ ಕಾಲದಲ್ಲಿ ಸನ್ನತಿ ಕೋಟೆಯಿಂದ ಆವರಿಸಿದೆ. ಇಟ್ಟಿಗೆಯಿಂದ ನಿರ್ಮಾಣವಾಗಿದೆ. ಇವರ ಕಾಲದ ಕೋಟೆಗಳು ಬೆಳಗಾವ ಜಿಲ್ಲೆಯ ಹಲಸಿಗೆಯಲ್ಲಿ, ಬನವಾಸಿ ಜಿಲ್ಲೆಯ ಹಾಸಗಲ್ಲು ಎಂಬಲ್ಲಿ, ಕಲಬುರ್ಗಿ ಜಿಲ್ಲೆಯ ಸನ್ನತಿಯಲ್ಲಿ ಕಂಡು ಬರುತ್ತವೆ. ಇವರ ಕಾಲದಲ್ಲಿ ಸನ್ನತಿ ಬೆಳವಣಿಗೆ ಹೊಂದಿದ್ದು, ನಗರ ಸಂಸ್ಕೃತಿಯ ವೈಶಿಷ್ಟ್ಯತೆ ಕಂಡು ಬರುತ್ತದೆ. ಸನ್ನತಿ ಬೃಹತ್‌ವಾಗಿ ಬೆಳೆದಿದಷ್ಟೆ ಅಲ್ಲದೆ, ತನ್ನ ಸುತ್ತಲೂ ಇಟ್ಟಿಗೆಗಳಿಂದ ನಿರ್ಮಿಸಲಾಗಿದ್ದ, ಕೋಟೆಯಿಂದ, ನೂರಾರು ಇಟ್ಟಿಗೆ ಸೌಧಗಳಿಂದ ಕೂಡಿದ ಗ್ರಾಮವೇ ಸನ್ನತಿ. ಇಲ್ಲಿ ಬೃಹತ್ ಗಾತ್ರದ ಕೋಟೆ ಕಂಡು ಬಂದಿದ್ದು, ಇದು ನಗರ ರಕ್ಷಣೆಯ ವೈಶಿಷ್ಟ್ಯತೆಯನ್ನು ಎತ್ತಿತೋರಿಸುತ್ತದೆ. ಕೋಟೆ ಎರಡು ಸುತ್ತುವರಿದ ಗೋಡಿಗಳಿಂದ ಕೂಡಿದೆ. ಒಳಗಿರುವ ಕೋಟೆಯ ರಣಮಂಡಲವೆಂದು ಕರೆಯುವ ಸುಮಾರು ೮೦ ಎಕರೆ ಪ್ರದೇಶವಾಗಿದೆ. ಇಟ್ಟಿಗೆ ಕೋಟೆ ಗೋಡೆ ಸುಮಾರು ನಾಲ್ಕು ಮೀಟರ್ ಅಗಲ ಮತ್ತು ೨-೩ಮೀ. ಎತ್ತರವಿದೆ. ಇದನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. (ಇತಿಹಾಸ ದರ್ಶನ ಸಂ.೧೦; ೧೯೯೫;ಪು.೧) ಸನ್ನತಿ ಕೋಟೆ ಕ್ರಿ.ಪೂ.೨೦೦ರಲ್ಲಿ ನಿರ್ಮಾಣಗೊಂಡಿತು. ಕೆ.ವಿ.ರಮೇಶ ಅವರ ಪ್ರಕಾರ ಸನ್ನತಿ ಕೋಟೆ 'ಶಾತವಾಹನರ ಕೋಟೆ' ಎಂದು ಕರೆದಿದ್ದಾರೆ. ಸನ್ನತಿ ಎಂಬುದು ಸೇತುರಾಜನ ಕಟ್ಟೆ ಅಥವಾ ಶಾತವಾಹನರ ಕೋಟೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. (ಮೌರ್ಯ ಮತ್ತು ಶಾತವಾಹನಯುಗ; ೨೦೦೪;ಪು.೯೫) ಅರ್ಧ ಚಂದ್ರಾಕೃತಿಯಲ್ಲಿ ಒಂದರೊಳಗೆ ಒಂದರಂತೆ ಚಾಚಿ ಭೀಮಾನದಿಯ ಮೇಲಿನ ಭಾಗ ಹಾಗೂ ಮಣ್ಣು ದಿಬ್ಬಗಳಿಂದ ಕೂಡಿದ್ದು ಎರಡು ಅರ್ಧ ಸುತ್ತಿನ ಗೋಡೆ ಆವರಿಸಿದೆ. ಗೋಡೆ ಅಗಲ ನಾಲ್ಕು ಮಿ. ಎತ್ತರ ೬-೮ಮಿ. ನಷ್ಟಿದೆ. ಇಲ್ಲಿ ಪ್ರಮುಖವಾಗಿ ಎರಡು ದ್ವಾರಗಳಿಂದ ಕೂಡಿದ್ದು, ಜನಸಾಮಾನ್ಯರ ಹಾಗೂ ರಾಜ ಪ್ರಮುಖರ ಪ್ರತ್ಯೇಕ ವಸತಿಗಳು ಹಾಗೂ ಎರಡು ಕ್ಷೇತ್ರಗಳನ್ನು ಸೇರವಾಗಿ ಹೊಂದಿರುವ ಮಹಾದ್ವಾರಗಳು ಕಂಡುಬರುತ್ತವೆ.

ಎರಡೂ ಕೋಟೆಗಳ ಒಳಗಿನ ಭಾಗ ಸುಮಾರು ೫೦೦ ಎಕರೆ ಪ್ರದೇಶದಲ್ಲಿ ದೊರೆತ ಅವಶೇಷಗಳ ಮೇಲೆ ಈಗ ರೈತರು ತೊಗರಿ ಮತ್ತು ಜೋಳವನ್ನು ಬೆಳೆಯುತ್ತಿದ್ದಾರೆ. ಕೋಟೆಯನ್ನು ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಇದು ಕರ್ನಾಟಕದಲ್ಲಿಯೇ ಅತ್ಯಂತ ಪ್ರಾಚೀನ ಕೋಟೆಯಾಗಿದೆ. ಈ ಕೋಟೆಗೆ ಎರಡು ಅಥವಾ ಮೂರು ಬಾಗಿಲುಗಳು ಇವೆ (ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ;೨೦೦೨;ಪು.೪೯) ಆದರೆ ಸನ್ನತಿ ಕೋಟೆ ನಾಶದ ಬಗ್ಗೆ ಐತಿಹ್ಯವೊಂದು ಹೀಗಿದೆ. ಸನ್ನತಿ ಗ್ರಾಮದ ಮಹಿಳೆಯೊಬ್ಬಳಿಗೆ ಮದುವೆ ಮಾಡಿ ದೂರದ ಊರಿಗೆ ಕೊಡುತ್ತಾರೆ. ಆಕೆ ತನ್ನ ತವರಿನವರು ಮತ್ತು ಗ್ರಾಮದ ಜನರು ಸುಖವಾಗಿ ಇದ್ದಾರೆ ಎಂದು ತಿಳಿಯಬೇಕಾದರೆ ಕೋಟೆಯ ಬಾಗಿಲನ್ನೆ ನಂಬಿದ್ದಳು. ಹೇಗೆಂದರೆ ಪ್ರತಿದಿನ ರಾತ್ರಿ ಮಲಗುವ ಮುನ್ನ ಕೋಟೆಯ ಬಾಗಿಲು ಮುಚ್ಚಿದಾಗ ಮಾತ್ರ ತವರಿನವರು ಮತ್ತು ಗ್ರಾಮದ ಜನರು ಸುಖವಾಗಿ ಇದ್ದಾರೆ ಎಂದು ತಿಳಿಯುತ್ತಿದ್ದಳು. ಆದರೆ ಒಂದು ದಿನ ಊರಿನ ಜನರು ಕೋಟೆಯ ಬಾಗಿಲನ್ನು ಮುಚ್ಚದೇ ಊಟ ಮಾಡಿ ಹಾಗೆ ಮಲಗುತ್ತಾರೆ. ಇದರಿಂದ ಆ ಮಹಿಳೆಯು ಊರಿನ ಮಗಳನ್ನು ಮರೆತು, ಸುಖದಿಂದ ನಿದ್ರೆ ಮಾಡುತ್ತಿದ್ದಾರೆ ಎಂದು ತಿಳಿದು ಕಂಚಿನ ಕೋಟೆ ನಾಶವಾಗಿ ಹೋಗಲಿ ಎಂದು ಶಾಪ ಹಾಕುತ್ತಾಳೆ. ಆಗ ಕಂಚಿನ ಕೋಟೆ ನಾಶ ಹೊಂದಿತು ಎಂದು ಜನಪದರು ಹೇಳುತ್ತಾರೆ. ಇಂದು ಈ ಕೋಟೆ ಮಣ್ಣಲ್ಲಿ ಹಾಳಾಗಿ ಹೋಗಿದೆ. ಆದರೂ ಸನ್ನತಿ ಕೋಟೆಯಿಂದ ಸುತ್ತುವರೆದಿದೆ. ಇಲ್ಲಿ ಜನಸಾಮಾನ್ಯರ ವಸತಿಯ ಕೇಂದ್ರಗಳು ಕಂಡು ಬರುತ್ತವೆ. ಶಾತವಾಹನರು ಜನವಸತಿಗೆ ತೊಂದರೆಯಾಗದಂತೆ ಕೋಟೆಯನ್ನು ಕಟ್ಟಿದ್ದಾರೆ. ಈ ಕೋಟೆ ಯುದ್ಧಕ್ಕಾಗಿ ಕಟ್ಟಲಿಲ್ಲ ಇದರಿಂದ ಶಾಂತಿ, ಪ್ರೀತಿ, ಧರ್ಮ, ಶಿಕ್ಷಣ ಪ್ರಸಾರ ಮಾಡುವುದಾಗಿತ್ತು. ಇಲ್ಲಿ ಭೀಮಾನದಿ ಹರಿಯುವುದರಿಂದ ಪ್ರವಾಹ ಬಂದಾಗ ತೊಂದರೆಯಾಗದಂತೆ ಬೃಹತ್ ಪ್ರಮಾಣದ ಕೋಟೆ ಶಾತವಾಹನರ ಕಾಲದಲ್ಲಿ ಕಟ್ಟಿರುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಹೇಳುವುದಾದರೆ ಶಾತವಾಹನರ ಕಾಲದಲ್ಲಿ ಸನ್ನತಿ ಪ್ರಧಾನ ಆಡಳಿತ ಕೇಂದ್ರವಾಗಿತ್ತು. ಇಲ್ಲಿ ದೊರೆತ ನಾಲ್ಕು ಶಾಸನಗಳು ಕ್ರಿ.ಪೂ.ಒಂದು ಅಥವಾ ಎರಡನೆಯ ಶತಮಾನದ್ದು. ಕೇವಲ ಶಾತವಾಹನರ ಆಡಳಿತ ಸನ್ನತಿಗಷ್ಟೆ ಸೀಮಿತವಾಗಿಲ್ಲ. ಕಲಬುರ್ಗಿ ಜಿಲ್ಲೆಯ ವಜ್ಜಲ, ಅಣಬಿ, ಹುರಸಗುಂದಿ, ಜೇವರ್ಗಿ, ಅವರಾದ, ಹಿಪ್ಪರಗಿ, ಕಲ್ಹಂಗರಗಾ, ಹಾಗರಗುಂಡಗಿ ಮುಂತಾದ ತಾಲೂಕಿನವರೆಗೂ ಶಾಸನಗಳು ದೊರೆಕಿರುವುದರಿಂದ ಇವರ ಆಡಳಿತ ಈ ಭಾಗದವರೆಗೂ ವ್ಯಾಪಿಸಿತು ಎಂಬುದು ತಿಳಿದು ಬರುತ್ತದೆ.

**ಕಲ್ಯಾಣ ಚಾಳುಕ್ಯರು**

ಶಾತವಾಹನರ ನಂತರ ಬಾದಾಮಿ ಚಳುಕ್ಯರು ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಕಲಬುರ್ಗಿ ಜಿಲ್ಲೆಯನ್ನು ಅಪರೋಕ್ಷವಾಗಿ ಆಳ್ವಿಕೆ ಮಾಡಿದರು. ಇವರ ಕಾಲದ ಯಾವುದೇ ಶಾಸನಗಳು ದೊರೆತಿಲ್ಲ. ಮುಂದೆ ಕರ್ನಾಟಕವನ್ನಾಳಿದ ರಾಷ್ಟ್ರಕೂಟರು ಮಾನ್ಯಖೇಟವನ್ನು ತಮ್ಮ ರಾಜಧಾನಿಯನ್ನಾಗಿ

ಮಾಡಿಕೊಂಡು ಎರಡು ಶತಮಾನಗಳವರೆಗೆ ಆಳ್ವಿಕೆ ಮಾಡಿದರು. ಇವರ ನಂತರ ಕಲ್ಯಾಣ ಚಾಳುಕ್ಯರು ಮತ್ತೆ ಅಧಿಕಾರಕ್ಕೆ ಬಂದರು. ಪೊಟ್ಟಲಕೆರೆ, ಯಾತಗಿರಿ ಹಾಗೂ ಬಸವಕಲ್ಯಾಣಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಎರಡು ನೂರು ವರ್ಷಗಳ ಕಾಲ ಆಳ್ವಿಕೆ ಮಾಡಿದರು. ಕಲ್ಯಾಣ ಚಾಳುಕ್ಯರ ಆಳ್ವಿಕೆ ಕಲಬುರ್ಗಿ ಜಿಲ್ಲೆಯನ್ನು ವ್ಯಾಪಿಸಿದ್ದರಿಂದ, ಇವರ ಕಾಲದ ಶಾಸನಗಳು ಹೆಚ್ಚಾಗಿ ದೊರಕಿವೆ.

ಕಲ್ಯಾಣ ಚಾಳುಕ್ಯ ವಂಶದ ಮೂಲ ಪುರುಷ ಇಮ್ಮಡಿ ತೈಲ. ಈತ ರಾಷ್ಟ್ರಕೂಟರ ಸಾಮಂತನಾಗಿದ್ದನು. ರಾಷ್ಟ್ರಕೂಟರ ಅಸಮರ್ಥ ಅರಸ ಎರಡನೆಯ ಕರ್ಕನನ್ನು ಸೋಲಿಸಿ, ಮಾನ್ಯಖೇಟವನ್ನು ವಶಪಡಿಸಿಕೊಂಡನು. (ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ;೧೯೬೬;ಪು.೧೦೬). ಈತ ಇಪ್ಪತ್ತನಾಲ್ಕು ವರ್ಷಗಳ ಕಾಲ ರಾಜ್ಯಭಾರ ಮಾಡಿದನು. ತೈಲ ರಾಷ್ಟ್ರಕೂಟ ಅರಸ ಮೂರನೆಯ ಕೃಷ್ಣನ ಆಳ್ವಿಕೆಯಲ್ಲಿಯೂ ಸಹ ಸೇನಾನಿಯಾಗಿದ್ದನು. ತನ್ನ ನಿಸ್ವಾರ್ಥ ಸೇವೆ ಫಲವಾಗಿ ರಾಷ್ಟ್ರಕೂಟ ಅರಸನಿಂದ ತಿರುವಾಡಿ ಎಂಬ ಸಣ್ಣ ಗ್ರಾಮವನ್ನು ಬಳುವಳಿಯಾಗಿ ಪಡೆದನು. ಮೂರನೆಯ ಕೃಷ್ಣನ ಮರಣಾನಂತರ ತನ್ನ ಪೂರ್ವಿಕರು ಬಾದಾಮಿಯಲ್ಲಿ ಆಳ್ವಿಕೆ ಮಾಡಿದ ಕಲ್ಯಾಣ ಚಾಳುಕ್ಯರ ವೈಭವವನ್ನು ಪುನಃ ಊರ್ಜಿತಗೊಳಿಸುವ ಪ್ರಯತ್ನ ಮಾಡಿದನು. ಈ ಮಧ್ಯ ಪಾರಮಾರರು ರಾಷ್ಟ್ರಕೂಟರ ಮೇಲೆ ಯುದ್ಧ ಹೂಡಿ ಮಾನ್ಯಖೇಟವನ್ನು ಕೊಳ್ಳೆ ಹೊಡೆಯಲಾರಂಭಿಸಿದರು. ಇದರ ಸದುಪಯೋಗ ಉಪಯೋಗಿಸಿಕೊಂಡು ತೈಲ ರಾಷ್ಟ್ರಕೂಟರ ಅಸಮರ್ಥ ದೊರೆ ಇಮ್ಮಡಿ ಕರ್ಕನನ್ನು ಮೂಲೆಗೊತ್ತಿ ರಾಜಧಾನಿಯಾದ ಮಾನ್ಯಖೇಟವನ್ನು ಕ್ರಿ.ಶ.೯೭೩ರಲ್ಲಿ ವಶಪಡಿಸಿಕೊಂಡನು. ತೈಲ ರಾಷ್ಟ್ರಕೂಟರ ಕುಮಾರಿ ಜಾಕಬ್ಬೆಯನ್ನು ವಿವಾಹವಾದನು. ತೈಲನಿಗೆ, ಸತ್ಯಾಶ್ರಯ ಮತ್ತು ದಶವರ್ಮ ಎಂಬ ಇಬ್ಬರು ಮಕ್ಕಳಿದ್ದರು. ಇಮ್ಮಡಿ ತೈಲ ಕ್ರಿ.ಶ.೯೯೭ರಲ್ಲಿ ಮರಣ ಹೊಂದಿದನು. ನಂತರ ಈತನ ಮಗನಾದ ಸತ್ಯಾಶ್ರಯ ಕ್ರಿ.ಶ.೯೯೭-೧೦೦೮ರವರೆಗೆ ಆಳ್ವಿಕೆ ಮಾಡಿದನು. ಸತ್ಯಾಶ್ರಯನು ಆಳುತ್ತಿರುವ ಭೂಮಿ ಕುಂತಳವೆಂದು ಪ್ರಸಿದ್ಧಿ ಪಡೆಯಿತು. ಚಾಳುಕ್ಯರ ವರ್ಣನೆ ನಾಗಾಯಿಯ ಶಾಸನ (ಕ್ರಿ.ಶ.೧೦೫೮)ದಲ್ಲಿ ಕಂಡು ಬರುತ್ತವೆ. ಇವರು ಪಡೆದ ಮಯೂರ ಧ್ವಜ, ಪದ್ಮಭೂಷಣನಿಂದ ಪಡೆದ ವರಾಹಮುದ್ರೆ, ಕಾತ್ಯಾಯಿನಿದೇವಿ ಕೊಟ್ಟ ಛತ್ರದಿಂದ ಕಲ್ಯಾಣ ಚಾಳುಕ್ಯರ ಅರಸರು ತಮ್ಮ ಶಕ್ತಿ, ಸಾಮರ್ಥ್ಯದಿಂದ ಆಡಳಿತ ಮಾಡಿದರು. ನಂತರ ಈತನ ತಮ್ಮನಾದ ದಶವರ್ಮನ ಮಗ ಐದನೆಯ ವಿಕ್ರಮಾದಿತ್ಯನು, ಕ್ರಿ.ಶ.೧೦೦೮-೧೦೧೫ರವರೆಗೆ ಆಳ್ವಿಕೆ ಮಾಡಿದನು. ನಂತರ ಈತನ ತಮ್ಮ ಅಯ್ಯಣನ ಮಗ ಎರಡನೆಯ ಜಯಸಿಂಹನು ಕ್ರಿ.ಶ.೧೦೧೫-೧೦೪೩ರವರೆಗೆ ಅಧಿಕಾರಕ್ಕೆ ಬಂದನು. ಇವರ ಕಾಲದ ಶಾಸನಗಳು ಹೆಚ್ಚಾಗಿ ಈ ಭಾಗದಲ್ಲಿ ದೊರೆತಿಲ್ಲ. ನಂತರ ಈತನ ಮಗ ಒಂದನೆಯ ಸೋಮೇಶ್ವರ ಅಧಿಕಾರಕ್ಕೆ ಬಂದನು. ಇಮ್ಮಡಿ ತೈಲಪನಿಂದ ಒಂದನೆಯ ಸೋಮೇಶ್ವರನ ಕಾಲದ ವರೆಗೆ ಮಾನ್ಯಖೇಟವೇ ಕಲ್ಯಾಣ ಚಾಳುಕ್ಯರ ರಾಜಧಾನಿಯಾಗಿತ್ತು. ಕಲ್ಯಾಣ ಚಾಳುಕ್ಯರೆಂದು ಕರೆದುಕೊಳ್ಳುವ ಈ ವಂಶದವರು ಬಾದಾಮಿ ಚಳುಕ್ಯರ ವಂಶಜರೆಂದು ಕರೆದುಕೊಂಡಿದ್ದಾರೆ.

ಶಾಸನಗಳು ವಿಕ್ರಮಾದಿತ್ಯನ ವಂಶಾವಳಿಯನ್ನು ಕಾವ್ಯಗಳಂತೆಯೇ ನಿರೂಪಿಸಿವೆ. ಕೆಲವು ಶಾಸನಗಳು ವಿಕ್ರಮಾದಿತ್ಯ ಮತ್ತು ಬೊಂತಾದೇವಿಯವರ ಪುತ್ರ ತೈಲಪ–II ನಿಂದ ಪ್ರಾರಂಭಿಸಿದರೆ (ಬಳ್ಳಿಗಾವಿ ಶಾಸನ) ಮತ್ತೆ ಕೆಲವು ಪೌರಾಣಿಕ ಹಿನ್ನಲೆಯಿಂದ ಪ್ರಾರಂಭವಾಗಿವೆ. (ನಾಗಾಯಿ ಮತ್ತು ಹಿರೇಹಡಗಲಿ ಶಾಸನಗಳು) ಕಾವ್ಯ ಮತ್ತು ಶಾಸನಾಧಾರದಿಂದ ವಂಶಾವಳಿಯನ್ನು ಹೀಗೆ ನಿರೂಪಿಸಬಹುದು.




**ಒಂದನೆಯ ಸೋಮೇಶ್ವರ – ಕ್ರಿ.ಶ.೧೦೪೩–೧೦೬೮**

ಎರಡನೆಯ ಜಯಸಿಂಹನ ನಂತರ ಈತನ ಮಗ ಒಂದನೆಯ ಸೋಮೇಶ್ವರ ಕಲ್ಯಾಣ ಚಾಳುಕ್ಯರ ಸಿಂಹಾಸನಕ್ಕೆ ಉತ್ತರಾಧಿಕಾರಿಯಾದನು. ಇವನಿಗೆ ತ್ರೈಲೋಕಮಲ್ಲ ಹಾಗೂ ರಾಜನಾರಾಯಣ ಎಂಬ ಬಿರುದುಗಳಿದ್ದವು. ಒಂದನೆಯ ಸೋಮೇಶ್ವರನು ರಾಜಧಾನಿಯನ್ನು ಮಾನ್ಯಖೇಟದಿಂದ ಕಲ್ಯಾಣಕ್ಕೆ. ಸ್ಥಳಾಂತರಿಸಿದನು. ದಿಗ್ಗಾಂವಿಯ ಅಗಸಿ ಹತ್ತಿರವಿರುವ ಶಾಸನವು (ಕ್ರಿ.ಶ.೧೦೫೪) ಒಂದನೆಯ ಸೋಮೇಶ್ವರನ ಕಾಲದ್ದಾಗಿದೆ. ಬಾಚರಸ ಹಾಗೂ ಸಾಮಂತ, ಯರಗರಸನು ಸ್ವಯಂಭು ಸೋಮೇಶ್ವರ ದೇವರಿಗೆ ನೀಡಿದ ದತ್ತಿ ಹಾಗೂ ದಿಗ್ಗಾಂವಿಯಲ್ಲಿ ಮುನ್ನೂರು ಬ್ರಾಹ್ಮಣ ಪಂಡಿತರುಗಳಿದ್ದರು ಎಂಬುದು ತಿಳಿದು ಬರುತ್ತದೆ. ಪ್ರಾರಂಭದಲ್ಲಿ ಚಾಳುಕ್ಯ ವಂಶಾವಳಿಯ ಉಲ್ಲೇಖವಿದೆ. ನಾಗಾಯಿಯ ಈ ಶಾಸನವು (ಕ್ರಿ.ಶ.೧೦೫೮) ಸ್ಥಳೀಯ ಅರವತ್ತು ಕಂಬದ ದೇವಾಲಯದ ಮುಂಭಾಗದಲ್ಲಿರುವ ಸ್ತಂಭ ಶಾಸನವೇ ಪ್ರಾಚೀನದ್ದಾಗಿದೆ. ಈ ಶಾಸನ ನಾಗಾಯಿಯ ಅಗ್ರಹಾರದ ಘಟಿಕಾಸ್ಥಾನಕ್ಕೆ ಮಧುವಪ್ಪರಸ ದಂಡನಾಯಕ ದಾನ ಕೊಟ್ಟ ವಿಷಯವಿದೆ. ಇದರ ಚರ್ಚೆ ಮುಂದಿನ ಅಧ್ಯಯನದಲ್ಲಿ ಮಾಡಲಾಗಿದೆ. ಈತನ ಆಳ್ವಿಕೆ

ಕೇವಲ ಈ ಗ್ರಾಮಗಳಿಗಷ್ಟೆ ಅಲ್ಲದೆ (ಜೇವರ್ಗಿ ತಾಲೂಕ) ಅಂದೇಲಿಯಲ್ಲಿ ದೊರೆತ ಶಾಸನ (ಕ್ರಿ.ಶ.೧೦೫೦) ಈತನ ಕಾಲದ್ದಾಗಿವೆ. ಈ ಶಾಸನ ಚೆನ್ನಮಾಧವ ದೇವಾಲಯಕ್ಕೆ ದಾನ, ದತ್ತಿ ಕೊಟ್ಟ ವಿಷಯ ತಿಳಿಸುತ್ತದೆ. ಇನ್ನೊಂದು ಶಾಸನ ಕೆಂಭಾವಿ (ಸುರಪುರ ತಾಲೂಕು)ಯ ಸಿದ್ಧೇಶ್ವರ ದೇವಾಲಯದಲ್ಲಿದೆ. ಕೆಂಭಾವಿ – ೨೪ ಎಂಬ ಮುಖ್ಯವಾದ ಆಡಳಿತ ಘಟಕವಾಗಿತ್ತು. (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೯೭;ಪು.೫೨). ಸಮಸ್ತ ಭೂವನಾಶ್ರಯ ಶ್ರೀಪೃಥೀವಲ್ಲಭ ಮಹಾರಾಜಾ – ಧೀರಾಜ ಪರಮೇಶ್ವರ, ಪರಮಭಟ್ಟಾರಕ, ಸತ್ಯಾಶ್ರಯ ಕುಲತಿಲಕ, ಚಾಳುಕ್ಯಾಭರಣ ಎಂಬ ಬಿರುದನ್ನು ಧರಿಸಿದನು. ಈತ ತನ್ನ ರಾಜ್ಯವನ್ನು ಉತ್ತರ ಭಾಗದಿಂದ ಆಳ್ವಿಕೆ ಮಾಡುತ್ತಿದ್ದನು. ಧರ್ಮದಿಂದ ಆಡಳಿತ ಮಾಡಿ, ವೈರಿಗಳನ್ನು ನಾಶಗೊಳಿಸಿ ರಾಜ್ಯವನ್ನು ಯಾವತೊಂದರೆ ಇಲ್ಲದಂತೆ ಆಳ್ವಿಕೆ ಮಾಡುತ್ತಿದ್ದನು. ಚಾಳುಕ್ಯ ರಾಜ ರಾಜ್ಯಭಾರಗೈದು ಸಾರ್ವಭೌಮತ್ವದಿಂದ ಆಳ್ವಿಕೆ ಮಾಡಿದನೆಂದು ಕ್ರಿ.ಶ.೧೦೫೮ರ ನಾಗಾಯಿಯ ಶಾಸನ ತಿಳಿಸುತ್ತದೆ. ಒಂದನೆಯ ಸೋಮೇಶ್ವರನ ನಂತರ ಈತನ ಮಗ ಎರಡನೆಯ ಸೋಮೇಶ್ವರ ಕ್ರಿ.ಶ.೧೦೬೮ರಿಂದ ೧೦೭೬ರವರೆಗೆ ಆಳ್ವಿಕೆ ಮಾಡಿದನು. ಈತನ ನಂತರ ಈತನ ಸಹೋದರ ಆರನೆಯ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದನು.

**ಆರನೆಯ ವಿಕ್ರಮಾದಿತ್ಯ ಕ್ರಿ.ಶ.೧೦೭೬ರಿಂದ೧೧೨೬**

ಕರ್ನಾಟಕದ ಶಾಸನಗಳಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ಶಾಸನಗಳನ್ನು ಬರೆಯಿಸಿದ ಶ್ರೇಯಸ್ಸು ಆರನೆಯ ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. ಈತ ಕಲ್ಯಾಣ ಚಾಳುಕ್ಯ ವಂಶದ ಶ್ರೇಷ್ಠ ಅರಸನಾಗಿದ್ದನು. ನಾಗಾಯಿಯ ಶಾಸನ (ಕ್ರಿ.ಶ.೧೦೫೮)ದಲ್ಲಿ ಚಾಳುಕ್ಯ ವಂಶಾವಳಿಯನ್ನು ಮಾನವ್ಯನೆಂಬ ಮಗ ಜನಿಸಲು ಆತನಿಗೆ ಮುಂದೆ ಹುಟ್ಟಿದವರು ಮಾನವ್ಯಗೋತ್ರದವರು. ಇವರು ಮಾನವ್ಯನ ಮಗ ಹಾರಿತ. ಈತನ ಮಗ ಚಾಳುಕ್ಯ. ಈತನಿಂದ ಚಾಲುಕ್ಯ ವಂಶವು ಪ್ರಸಿದ್ಧಿ ಪಡೆಯಿತು. ಈ ವಂಶದಲ್ಲಿ ಜನಿಸಿದ ವಿಷ್ಣುವರ್ದನ, ವಿಜಯಾದಿತ್ಯರು ಆಳ್ವಿಕೆ ಮಾಡಿದರು. ಆರನೆಯ ವಿಕ್ರಮಾದಿತ್ಯನು ಭೂಮಿಯ ಮೇಲೆ ಆಳ್ವಿಕೆ ಮಾಡಲು ವಿಷ್ಣುವಿನ ಅವತಾರ ಧರಿಸಿದ ಹಾಗೆ ಸಿಂಹ ಭೂಪತಿಯ ಮಗನಾಗಿ ತನ್ನ ನಾಲ್ಕು ಭುಜಗಳನ್ನು ಹೊಂದಿದವನಾಗಿದ್ದನು. ಚೋಳರನ್ನು ಹಿಮ್ಮೆಟ್ಟಿಸಿದನು. ಈತ ಶಕ್ತಿ, ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಸತ್ಯವನ್ನೇ ನುಡಿಯವನು, ತ್ಯಾಗ ಜೀವಿಯಾಗಿದ್ದನು. ಸ್ತ್ರೀಯರ ಬಗ್ಗೆ ಗೌರವದ ಭಾವನೆ ಇತ್ತು. ಇಂತಹ ಸ್ವಭಾವ ಈತನಲ್ಲಿ ಕಂಡು ಬರುತ್ತದೆ. ಯುದ್ಧವನ್ನು ಮಾಡುವ ಸಮಯದಲ್ಲಿ ಎದೆಯ ಕವಚವನ್ನು ಹಾಕಿಕೊಳ್ಳದೆ, ಯಾವುದಕ್ಕೂ ಭಯಪಡದೆ, ಯುದ್ಧ ಮಾಡುತ್ತಿದ್ದನು. ಆ ಸಮಯದಲ್ಲಿ ಏಕಾಂಗಿಯಾಗಿ ಹೋರಾಡುತ್ತಿದ್ದನು. ಅನೇಕ ಯುದ್ಧಗಳನ್ನು ಮಾಡಿ ರಾಜ್ಯವನ್ನು ಗೆದ್ದುಕೊಂಡನು. ಈತನ ಆಸ್ಥಾನ ಕವಿ ಬಿಲ್ಹಣನು ವಿಕ್ರಮನ ವೈಭವದ ಆಡಳಿತವನ್ನು ವರ್ಣಿಸಿದ್ದಾನೆ. ಮೂಲತಃ ಕಾಶ್ಮೀರದವನಾಗಿದ್ದ ಬಿಲ್ಹಣನು ರಚಿಸಿರುವ 'ವಿಕ್ರಮಾಂಕದೇವ ಚರಿತ'ದ ನಾಯಕನು ವಿಕ್ರಮಾದಿತ್ಯನೆಂಬುದು ಶಾಸನಾಧಾರಗಳಿಂದ (ಗುಲಬರ್ಗಾ ಜಿಲ್ಲಾ ಗ್ಯಾಸಿಟಿಯರ್: ೧೯೯೭:ಪು.೫೦) ತಿಳಿದು ಬರುತ್ತದೆ. ಕ್ರಿ.ಶ.೧೦೭೬ರ ಅವಧಿಯಲ್ಲಿ (ವಿಕ್ರಮ ಶಕೆ) ತನ್ನದೊಂದು ಶಕೆಯನ್ನು ಪ್ರಾರಂಭಿಸಿದನು. ಕ್ರಿ.ಶ.೧೦೭೬ರಿಂದ೧೧೨೬ರವರೆಗೆ ಅಂದರೆ ಸುಮಾರು ಐವತ್ತು ವರ್ಷಗಳ ಕಾಲ ಈತ ರಾಜ್ಯಭಾರ ಮಾಡಿದನು.

ಈ ತಾಲೂಕಿನಲ್ಲಿದ್ದು ಶಾಸನಗಳು ದೊರಕಿದ್ದು ದಿಗ್ಗಾಂವ, ನಾಗಾಯಿ, ಇಂಗಳಗಿ, ಕಾಳಗಿ, ತೆಂಗಳಿ ಗ್ರಾಮಗಳಲ್ಲಿ ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನಗಳು ಹೆಚ್ಚಾಗಿ ದೊರಕಿವೆ. ಈ ಗ್ರಾಮಗಳು ಈತನ ಮಹಾಮಂಡಳೇಶ್ವರರ ಆಡಳಿತಕ್ಕೆ ಒಳಪಟ್ಟಿದ್ದವು. ವಿಕ್ರಮಾದಿತ್ಯನ ಕ್ರಿ.ಶ.೧೯೪೪ರ ಇಂಗಳಗಿ ಶಾಸನದಲ್ಲಿ ಈತನ ರಾಣಿ ಜಾಕಲದೇವಿಯ ಗುಣವನ್ನು ಈ ರೀತಿ ಶಾಸನದಲ್ಲಿ ವರ್ಣಿಸಿದೆ.

ಚಂ॥ ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವ್ವತಿಯಂತೆ ಜೀವಿತೇ-
ಶನೊಳವಿಕಳ್ಪಭಾವೆ ಧರೆಯಂತೆ ಧೃತಕ್ಷಮೆ ರಂಭೆಯಂತೆ ರೂ-
ಪಿನ ನೆಲೆ ಪೆಂಪುವೆತ್ತಮರಧೇನುವಿನಂತಮಿತ್ತದಾನಿ ಕಾ-
ಮನ ಸರಲಂತಿರಯ್ದೆ ಪರಿಭಾವಿಸಿ ಜಾಕಲದೇವಿ ಧಾತ್ರಿಯೊಳ್ ॥

ಸುರಪುರ ತಾಲೂಕಿನಲ್ಲಿ ಇಪ್ಪತ್ತೆಂಟು ಶಾಸನಗಳು ದೊರೆತಿವೆ. ಅವುಗಳಲ್ಲಿ ಏವೂರಿನ ಕ್ರಿ.ಶ.೧೧೭೮ರ ಶಾಸನವು ತಾಮ್ರ ಶಾಸನವಾಗಿದ್ದು ನಂತರದಲ್ಲಿ ಕಲ್ಲಿನ ಮೇಲೆ ಕೆತ್ತಲಾಗಿದೆ. (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೭೭;ಪು.೫೨) ಈ ಶಾಸನದಲ್ಲಿ ಈತನ ದಂಡನಾಯಕ ರವಿಯಣಭಟ್ಟನು ಸ್ವಯಂಭು ದೇವರಿಗೆ, ವಿದ್ಯಾರ್ಥಿ ತಪೋಧನರಿಗೆ ಭೂದತ್ತಿ ನೀಡಿದ ವಿಷಯ ತಿಳಿಸುತ್ತದೆ. ಈ ಶಾಸನದ ಉತ್ತರದ ಭಾಗದಲ್ಲಿ ವಿಕ್ರಮಾದಿತ್ಯನ ಆಳ್ವಿಕೆ ಬಗ್ಗೆ ವರ್ಣನೆಯನ್ನು ಉಲ್ಲೇಖಿಸುತ್ತದೆ. ಅಳಂದ ತಾಲೂಕಿನಲ್ಲಿ ದೊರೆತಿರುವ ಇನ್ನೊಂದು ಶಾಸನ ಕ್ರಿ.ಶ.೧೦೮೨ರ ಕಾಲದ್ದಾಗಿದೆ.

ಸುರಪುರ ತಾಲೂಕಿನ ಮುದನೂರಿನಲ್ಲಿ ಆರನೆಯ ವಿಕ್ರಮಾದಿತ್ಯನ ಕಾಲದ ಐದು ಶಾಸನಗಳು ಕಂಡುಬರುತ್ತವೆ. ಮುದನೂರು ಶ್ರೀರಾಮದತ್ತಿ ಅಗ್ರಹಾರವೆಂದು ಪ್ರಸಿದ್ಧವಾಗಿತ್ತು. ಸಿಂದವಂಶದ ಜೋಗಮರಸ, (ಕ್ರಿ.ಶ.೧೧೦೫)ಗೋವದೇವರಸ ಹಾಗೂ ಅಯ್ಯಣಾಮಾತ್ಯರು ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರರೆಂದು ಶಾಸನದಲ್ಲಿ ಉಲ್ಲೇಖಗೊಂಡಿದ್ದಾರೆ. ಈತನ ಕಾಲದ ಯಡ್ರಾಮಿ ಶಾಸನವು (ಕ್ರಿ.ಶ.೧೧೧೧)ದತ್ತಿ ಕೊಟ್ಟ ವಿಷಯ ತಿಳಿಸುತ್ತದೆ.

ವಿಕ್ರಮಾದಿತ್ಯನ ಆಳ್ವಿಕೆ ಕೇವಲ ಈ ಭಾಗದಲ್ಲಿ ಕಂಡು ಬರುವುದಷ್ಟೆ ಅಲ್ಲದೆ, ಚೋಳರನ್ನು ಸೋಲಿಸಿ ಕಂಚಿನಗರವನ್ನು ವಶಪಡಿಸಿಕೊಂಡನು. ತನ್ನ ರಾಜ್ಯವನ್ನು ಬಂಗಾಳದಿಂದ ಅಸ್ಸಾಂದವರೆಗೆ ವಿಸ್ತರಿಸಿದನು. ಕೇರಳದ ಮೇಲೆ ದಾಳಿ ಮಾಡಿ ಕಾಕತೀಯ ಅರಸರನ್ನು ತನ್ನ ಮಹಾಮಂಡಳೇಶ್ವರರನ್ನಾಗಿ ಮಾಡಿಕೊಂಡನು. ಆರನೆಯ ವಿಕ್ರಮಾದಿತ್ಯ ಚಕ್ರವರ್ತಿಯಾಗುವುದಕ್ಕಿಂತ ಮುಂಚೆ ಕ್ರಿ.ಶ. ೧೦೭೩ರಲ್ಲಿ ಗೊಂಡವಾಡಿಯ ನೆಲವೀಡಿನಲ್ಲಿ ಆಳುತ್ತಿದ್ದನೆಂದು ರಾಯದುರ್ಗ (ಆಂಧ್ರಪ್ರದೇಶ) ತಾಲೂಕಿನ ಶಾಸನ (ಗುಲಬರ್ಗಾಜಿಲ್ಲಾ ಗ್ಯಾಸೆಟಿಯರ್;೧೯೭೭;ಪು.೫೦) ತಿಳಿಸುತ್ತದೆ.

'ಮಿತಾಕ್ಷರ' ಕರ್ತೃ ವಿಜ್ಞಾನೇಶ್ವರ ಕರ್ನಾಟಕದ ಒಬ್ಬ ಗಣ್ಯ ಬುದ್ಧಿಜೀವಿ. ಯಾಜ್ಞವಲ್ಕ ಸ್ಮೃತಿಯ ಬಗ್ಗೆ ಅವನು ಬರೆದ ಟೀಕಾಗ್ರಂಥ ಮಿತಾಕ್ಷರ. ಬಂಗಾಲ ಮತ್ತು ಕೇರಳ ಅಷ್ಟೇ ಅಲ್ಲದೆ ಇಡೀ ಭಾರತದಲ್ಲಿ ಮಾನ್ಯತೆ ಪಡೆದ ಹಿಂದೂ ಕಾನೂನಿನ ಗ್ರಂಥ. ಇವನು ಕಲ್ಯಾಣದ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಇದ್ದವನು. ಮರತೂರಿನ ಶಾಸನದಿಂದ ವಿಜ್ಞಾನೇಶ್ವರನ ಅನೇಕ ಹೊಸ ಸಂಗತಿಗಳು

ತಿಳಿಯುತ್ತವೆ. ಇವನು ಕರ್ನಾಟಕವನ್ನಾಳಿದ ಸರ್ವಶ್ರೇಷ್ಠ ಆರಸರಲ್ಲ ಒಬ್ಬನಾದ ಕಲ್ಯಾಣ ಚಾಳುಕ್ಯ ವಿಕ್ರಮಾದಿತ್ಯನ ಆಸ್ಥಾನದ ವಿದ್ವಾಂಸ. ವಿಜ್ಞಾನೇಶ್ವರನು ಈ ವಿಕ್ರಮ ಯುಗದ ಪ್ರತಿನಿಧಿಕ (ವಿಜ್ಞಾನೇಶ್ವರ ಮಿತಾಕ್ಷರ;೨೦೦೫;ಪು.೧೦) ವಿದ್ವಾಂಸರಾಗಿ ಬಾಳಿ ಬೆಳಗಿದ್ದಾನೆ. ಕ್ರಿ.ಶ.೧೧೨೪ರ ಮರತೂರಿನ ಶಾಸನ ಕರ್ನಾಟಕದಲ್ಲಿ ದೊರೆತ ಪ್ರಾಚೀನ ಶಾಸನಗಳಲ್ಲಿ ಅತ್ಯಂತ ಪ್ರಮುಖವಾಗಿದೆ. ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಮಸ್ಕಿಯಲ್ಲಿ ದೊರೆತ ಅಶೋಕನ ಶಿಲಾಶಾಸನ ಹೇಗೆ ಭಾರತದ ಇತಿಹಾಸದ ಹೆಬ್ಬಾಗಿಲನ್ನು ತೆರೆಯಲು ಕಾರಣವಾಯಿತೋ, ಹಾಗೆ ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮರತೂರಿನ ಶಾಸನವು ಭಾರತೀಯ ನ್ಯಾಯಶಾಸ್ತ್ರ ಇತಿಹಾಸದ ಮಹಾದ್ವಾರವನ್ನು ತೆರೆಯಲು ಕಾರಣವಾಗಿದೆ. ಒಂಬೈನೂರು ವರ್ಷಗಳ ಹಿಂದೆ ಭಾರತೀಯರಿಗಾಗಿ ಮಿತಾಕ್ಷರ ಎಂಬ ಈ ಕಾನೂನು ಗ್ರಂಥ ಬರೆದ ವಿಜ್ಞಾನೇಶ್ವರನು ಕಲಬುರ್ಗಿ ಸಮೀಪದ ಸಣ್ಣ ಹಳ್ಳಿ ಮರತೂರಿನಲ್ಲಿದ್ದ ಅಚ್ಚಕನ್ನಡಿಗ, ಅವನ ಆರಂಭದ ಜೀವನ ಮತ್ತು ಕಾರ್ಯಕ್ಷೇತ್ರವನ್ನು ಬೆಳಕಿಗೆ ತಂದ ಕೀರ್ತಿ ಇತಿಹಾಸ ತಜ್ಞರಾದ ಡಾ.ಪಿ.ಬಿ.ದೇಸಾಯಿಯವರಿಗೆ ಸಲ್ಲುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ವಿಜ್ಞಾನೇಶ್ವರನು ಬರೆದ ಮಿತಾಕ್ಷರವು ನ್ಯಾಯಶಾಸ್ತ್ರದ ಮಹತ್ವದ ಗ್ರಂಥ ಎಂದು ಪರಿಗಣಿಸಲಾಗಿದೆ. ಇದರಲ್ಲಿ ವಿಧವಾ ವಿವಾಹ, ಉತ್ತರಾಧಿಕಾರ, ಸ್ತ್ರೀಯರ ಆಸ್ತಿ ಹಕ್ಕು, ವಾರಸುದಾರಿಕೆ, ಮಕ್ಕಳಿಗಿರುವ ಹಕ್ಕು, ಸ್ತ್ರೀಧನ, ಕಾರ್ಮಿಕ ಸಮಸ್ಯೆ ಹೀಗೆ ಅನೇಕ ಜಟಿಲ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಶಾಸ್ತ್ರ ಬದ್ಧ, ನ್ಯಾಯ ಮಿಮಾಂಸೆಯು ಶತಮಾನಗಳ ಹಿಂದೆಯೇ ಮಾನವ ಹಕ್ಕುಗಳ ಬಗ್ಗೆ ಸವಿಸ್ತಾರ ವಿಚಾರಗಳನ್ನೊಳಗೊಂಡಿದೆ ಅಲ್ಲದೆ, ವಿಜ್ಞಾನೇಶ್ವರನ (ವಿಜಯ ಕರ್ನಾಟಕ ಪತ್ರಿಕೆ;೨೦೦೬;ಪು.೩) ಇಂತಹ ಒಂದು ಶಾಸನ ಮರತೂರ ಎಂಬ ಕುಗ್ರಾಮದ ವಿಜ್ಞಾನೇಶ್ವರನ ಭವನದಲ್ಲಿ ವಿಜ್ಞಾನೇಶ್ವರನ ನೆನಪಿನ ಬುತ್ತಿ ಇದೆ. ಮಿತಾಕ್ಷರ ಎಂಬ ಹೆಸರೇ ಸೂಚಿಸುವಂತೆ ಅತಿ ಕಡಿಮೆ ಅಕ್ಷರಗಳಲ್ಲಿ ಕಾನೂನಿನ ಆಳ, ವಿಸ್ತಾರಗಳನ್ನು ಯಾವುದೇ ಸಂಶವಿಲ್ಲದೆ ನಿಖರವಾಗಿ ವಿವರಿಸುವ ಒಂದು ಶ್ರೇಷ್ಠ ಗ್ರಂಥ. ದೇಶ, ವಿದೇಶಗಳ ಪಂಡಿತರಿಂದ ಪ್ರಶಂಸೆಗೆ ಒಳಗಾದ ಕೃತಿಯಾಗಿದೆ. ಈ ಶಾಸನವು ವಿಜ್ಞಾನೇಶ್ವರನ ಗುಣ ಸ್ವಭಾವದ ಮೇಲೂ ಬೆಳಕು ಚೆಲ್ಲುತ್ತದೆ. ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನಾನುಷ್ಠಾನ, ಜಪ ಮತ್ತು ಸಮಾದಿ ಗುಣಗಳನ್ನು ಕರಗತಗೊಳಿಸಿಕೊಂಡಿದ್ದ ವಿಜ್ಞಾನೇಶ್ವರನು ಚರ್ಕವರ್ತಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪರಮಾರಾಧ್ಯ ವ್ಯಕ್ತಿಯಾಗಿದ್ದನು. ವಿಜ್ಞಾನೇಶ್ವರನ ಪ್ರಖರ ಪಾಂಡಿತ್ಯ, ಆತನ ಬಗ್ಗೆ ಚಕ್ರವರ್ತಿಗೆ ಇದ್ದ ಗೌರವ, ಆಧರಗಳನ್ನು ಮರತೂರಿನ ಶಾಸನದಲ್ಲಿ ಈ ಪಂಕ್ತಿಗಳು ಅತ್ಯಂತ ಪರಿಣಾಮಕಾರಿಯಾಗಿ ಸಾರುತ್ತವೆ.

ಅರಿರಾಯ ಮುಕುಟ ತಾಟಿತ
ಚರಣನೆನಲುನೆಗಟ್ಟ ವಿಕ್ರಮಾಂಕನ ರತ್ನೋ।
ತ್ಕರ ನಿಚಿತ ಮುಕುಟ ತಾಟಿತ
ಚರಣ ವಿಜ್ಞಾನದೇವರೇಂ ಕೇವಟಮೇ॥
ನೀರಜ ಭವನಿಭರುದಧಿಗ
ಭೀರ್ವಿಜ್ಞಾನ ದೇವರವರರಮನೆಯೊಳ್।
ಕಾರಣ ಪುರುಷ ನಾಲ್ವರು
ಮೋರನ್ನರೆ ವಿಪುಳ ಭಾಗ್ಯದೊಳು ಗುಣಗಣದೊಳ್॥

ವಿಕ್ರಮಾದಿತ್ಯನು ವಿಜ್ಞಾನೇಶ್ವರನ ಪಾದಗಳಿಗೆ ವಂದಿಸಿದಾಗ ಅವನ ಕಿರೀಟ ಪಾದಗಳನ್ನು ಸ್ಪರ್ಶಿಸುತ್ತಿತ್ತು. (ವಿಜ್ಞಾನೇಶ್ವರ ಮಿತಾಕ್ಷರ;೨೦೦೫;ಪು.೧೩) ಅತ್ಯಂತ ವೈಭವಯುತ ಸಾಮ್ರಾಜ್ಯದ ಚಕ್ರವರ್ತಿ ತನ್ನ ಶಿರವಿಟ್ಟು ವಿಜ್ಞಾನೇಶ್ವರನ ಪಾದಗಳಿಗೆ ನಮಸ್ಕರಿಸುತ್ತಿದ್ದನೆಂದರೆ ಅವನು ಅಸಾಮಾನ್ಯ ಪ್ರತಿಭೆ ಪಾಂಡಿತ್ಯದ ಗಣಿಯಾಗಿದ್ದನೆಂಬುವುದನ್ನು ತಿಳಿಸುತ್ತದೆ. ವಿಕ್ರಮಾದಿತ್ಯನು ಲೌಕಿಕ ಸಾಮ್ರಾಜ್ಯದ ಚಕ್ರವರ್ತಿಯಾದರೆ, ವಿಜ್ಞಾನೇಶ್ವರನು ಆಧ್ಯಾತ್ಮಿಕ ಜಗತ್ತಿನ ಚಕ್ರವರ್ತಿಯಾಗಿದ್ದನು. ಈ ಇಬ್ಬರು ಮಹಾ ವ್ಯಕ್ತಿಗಳ ಸಮಾಗಮ ಕರ್ನಾಟಕ ಇತಿಹಾಸಕಷ್ಟೇ ಏಕೆ? ಭಾರತೀಯ ಇತಿಹಾಸದಲ್ಲೇ ಒಂದು ಮಹತ್ವದ ಘಟನೆಯಾಗಿದೆ.

ಪ್ರಸ್ತುತ ಕಳಿಂಗೇಶ್ವರ ದೇವಾಲಯದ ಶಾಸನದಲ್ಲಿ ವಿಜ್ಞಾನೇಶ್ವರನ ತಂದೆ-ತಾಯಿ ಕುಲ, ಗೋತ್ರ ಮತ್ತು ಅವನ ಪ್ರತಿಭೆಯ ಬಗ್ಗೆ ಮಾಹಿತಿ ಸಿಗುತ್ತದೆ. ಅದರಂತೆ ವಿಜ್ಞಾನೇಶ್ವರನು ಕೌಶಿಕ ಗೋತ್ರದ ಶೈವ ದಂಪತಿಗಳಾದ ಸೋಮರಾಜ ಮತ್ತು ಭಾಗ್ಯ ವನಿತೆ ಎಂಬ ದಂಪತಿಗಳ ಉದರದಲ್ಲಿ, ಮಾಸೆಯಮಡುವಿನಲ್ಲಿ ಜನಿಸಿದನೆಂದು ತಿಳಿಸುತ್ತದೆ. ಅವನ ಮೂಲ ಹೆಸರು ಕಂಚ ನಂತರದಲ್ಲಿ ವಿಜ್ಞಾನೇಶ್ವರನೆಂದೇ ಪ್ರಖ್ಯಾತಿ ಹೊಂದಿದ್ದಾನೆ. ಎಂಬುವುದಾಗಿ ಶಾಸನವು ಅವನ ಪ್ರತಿಭೆ ಮತ್ತು ಪಾಂಡಿತ್ಯದ ಮೇಲೆ ಬೆಳಕು ಚೆಲ್ಲುತ್ತದೆ. ಇಂತಹ ಒಬ್ಬ ಮಹಾನ್ ವಿದ್ವಾಂಸನನ್ನು ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಅಲಂಕರಿಸಿದ್ದನೆಂದರೆ ಈತನ ಸಾಮ್ರಾಜ್ಯ ಘನ ಪಾಂಡಿತ್ಯದಿಂದ ಕೂಡಿತ್ತು ಎಂದು ತಿಳಿಸುತ್ತದೆ. ಇದಕ್ಕೆ ತಾನು ಏನು ಕಮ್ಮಿ ಇಲ್ಲ ಎನ್ನುವಂತಹ ರತ್ನ ಕವಚ ಹೊಂದಿದ ಆರನೆಯ ವಿಕ್ರಮಾದಿತ್ಯನ ಕೀರ್ತಿಯು ಎಲ್ಲೆಡೆ ಹರಡಿತ್ತು.

ಆರನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೫೫ರ ವೇಳೆಗೆ (ಸುಮಾರು ೨೦ವರ್ಷ) ಕುಮಾರ ವೃತ್ತಿಯಿಂದ ಮಹಾಮಂಡಳೇಶ್ವರನಾಗಿ ಆಳ್ವಿಕೆ ಮಾಡಿದನು. ಕ್ರಿ.ಶ.೧೦೭೬-೧೧೨೬ರ ವರೆಗೆ (೫೦ ವರ್ಷಗಳ ದೀರ್ಘಾವಧಿ) ಚಕ್ರವರ್ತಿಯಾಗಿ ಆಳಿದ ಅರಸನಿವನು. ಇವನ ಪೂರ್ವಜನಾದ ಪ್ರಸಿದ್ಧ ಇಮ್ಮಡಿ ಪುಲಕೇಶಿಯು ಇವನಿಗೆ ಸಮಬರಲಾರನೆಂದು ತೋರುತ್ತದೆ. (ಆರನೆ ವಿಕ್ರಮಾದಿತ್ಯ ಶಾಸನಗಳು ಒಂದು ಅಧ್ಯಯನ;೧೯೯೨;ಪು.೧೩) ವಿಕ್ರಮಾದಿತ್ಯ ಸಮರ್ಥ ಆಡಳಿತಗಾರನಾಗಿದ್ದನು. ಇವನ ಆಡಳಿತದಲ್ಲಿ ಶಾಂತಿ ನೆಲೆಸಿತ್ತು. ಜನರು ರಾತ್ರಿ ವೇಳೆಯಲ್ಲಿ ಮನೆಯ ಬಾಗಿಲುಗಳನ್ನು ಮುಚ್ಚುತ್ತಿರಲಿಲ್ಲ. ಏಕೆಂದರೆ ಅವರಿಗೆ ಕಳ್ಳರ ಭೀತೆಯೇ ಇರಲಿಲ್ಲ. "ಕಳ್ಳರ ಬದಲು ಚಂದ್ರನ ಕಿರಣಗಳು ಅವರ ಮನೆಗಳನ್ನು ಆವರಿಸಿದ್ದವು" ಎಂಬ ಬಿಲ್ಹಣನ ಮಾತು ಅರಸನ ಭೀತಿಯಿಂದ ನಿರ್ಭಿತಿ ವಾತಾವರಣ ನಿರ್ಮಾಣವಾದುದನ್ನು (ನರೆಗಲ್ ರೋಣ, ಧಾರವಾಡ) ಶಾಸನ ತಿಳಿಸುತ್ತದೆ. ಸಂಖ್ಯಾ ದೃಷ್ಟಿಯಿಂದ ಅಧಿಕ ಶಾಸನ ಬರೆಯಿಸಿದ ಚಕ್ರವರ್ತಿ, ಸಾವಿರಕ್ಕೂ ಮೇಲ್ಪಟ್ಟಿರುವ ಇವನ ಶಾಸನಗಳಲ್ಲಿ ಆ ಕಾಲದ ರಾಜಕೀಯ ಆಡಳಿತಾತ್ಮಕ, ಧಾರ್ಮಿಕ, ಆರ್ಥಿಕ, ಹಾಗೂ ಸಾಮಾಜಿಕ ಮೊದಲಾದ ವಿಷಯಗಳು ತಿಳಿಯುತ್ತವೆ.

ಆರನೆಯ ವಿಕ್ರಮಾದಿತ್ಯನಿಗೆ ಜಯಕರ್ಣ ಮತ್ತು ಸೋಮೇಶ್ವರ ಎಂಬ ಇಬ್ಬರು ಗಂಡು ಮಕ್ಕಳಿದ್ದರು. ಹಾಗೂ ಮೈಳಲಾದೇವಿ ಎಂಬ ಒಬ್ಬಳು ಹೆಣ್ಣು ಮಗಳಿದ್ದಳು. ಈಕೆಯನ್ನು ಇಮ್ಮಡಿ

ಜಯಕೇಶಿಗೆ ಕೊಟ್ಟು ವಿವಾಹ ಮಾಡಲಾಯಿತು. ಆರನೆಯ ವಿಕ್ರಮಾದಿತ್ಯ ಐವತ್ತು ವರ್ಷಗಳವರೆಗೆ ಸಮರ್ಥವಾಗಿ ಆಡಳಿತ ನಡೆಸಿ, ರಾಜ್ಯದಲ್ಲಿ ಸುಖ, ಶಾಂತಿ ನೆಲೆಸಿತು. ಈತ ಮರಣ ಹೊಂದಿದ ನಂತರ ಈತನ ಎರಡನೆಯ ಮಗನಾದ ಮುಮ್ಮಡಿ ಸೋಮೇಶ್ವರನು ಕ್ರಿ.ಶ.೧೧೨೬ರಲ್ಲಿ ಅಧಿಕಾರ ವಹಿಸಿಕೊಂಡನು. ಈತ ಸರ್ವಜ್ಞ ಚಕ್ರವರ್ತಿ, ಭೂಲೋಕಮಲ್ಲ ಎಂಬ ಬಿರುದು ಪಡೆದಿದ್ದನು. ಕರ್ನಾಟಕದಲ್ಲಿ ಈತನ ಆಳ್ವಿಕೆಯ ಕಾಲದಲ್ಲಿ ಹೆಚ್ಚಿನ ಶಾಸನಗಳು ದೊರೆತಿವೆ. ಈತನು ಸಹ ತನ್ನ ತಂದೆಯಂತೆ ಸಮರ್ಥ ಆಡಳಿತ ನಡೆಸಿ, ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಿದನು. ಈತನ ಕಾಲದಲ್ಲಿ ದೊರೆತ ಶಾಸನಗಳು ಸಾಂಸ್ಕೃತಿಕ ವಿಷಯವನ್ನು ತಿಳಿಸುತ್ತವೆ. ಈತನು ಆಳ್ವಿಕೆಯಲ್ಲಿ 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ' ಎಂಬ ಜ್ಞಾನಕೋಶ ರಚಿಸಿದನು. ಇವನು ದಕ್ಷಿಣದ ಭಾಗದಲ್ಲಿ ಯುದ್ಧ ಕೈಗೊಂಡಿದ್ದನ್ನು ಬಳ್ಳಿಗಾವೆಯ ಶಾಸನವೊಂದು (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೯೭;ಪು.೫೧) ಉಲ್ಲೇಖಿಸುತ್ತದೆ. ಕ್ರಿ.ಶ. ೧೧೩೮ರಲ್ಲಿ ನಿಧನ ಹೊಂದಿದ. ಈತನಿಗೆ ಇಬ್ಬರು ಮಕ್ಕಳು. ಪೆರ್ಮಾ ಅಥವಾ ಹೆಮ್ಮಾಡಿ ಹಾಗೂ ತೈಲಪ-III ಎಂಬುವವನು. ಈತನ ನಂತರ ಈತನ ಮಗನಾದ ಪೆರ್ಮಾ ಅಥವಾ ಹೆಮ್ಮಾಡಿ ಅಧಿಕಾರಕ್ಕೆ ಬಂದನು. ಈತ ಪ್ರತಾಪ ಚಕ್ರವರ್ತಿ ಎಂಬ ಬಿರುದನ್ನು ಧರಿಸಿದ್ದನು. ನಂತರ ಈತನ ತಮ್ಮನಾದ ಮುಮ್ಮಡಿ ತೈಲಪನು ಅಧಿಕಾರಕ್ಕೆ ಬಂದನು. (ಕ್ರಿ.ಶ.೧೧೪೯-೧೧೬೨) ಈತ ಹಾಗೂ ಹೆಮ್ಮಾಡಿಯ ಮಗನಾದ ನಾಲ್ಕನೆಯ ಸೋಮೇಶ್ವರ ಇಬ್ಬರು ಸೇರಿ ಕೆಲ ವರ್ಷಗಳವರೆಗೆ ಆಳ್ವಿಕೆ ಮಾಡಿದರು. ಇದೇ ವೇಳೆಗೆ ಕಳಚೂರಿ ವಂಶದ ಬಿಜ್ಜಳನು ಅಧಿಕಾರಕ್ಕೆ ಬಂದನು. ಕಲ್ಯಾಣ ಚಾಳುಕ್ಯ ಮೂರನೆಯ ತೈಲಪ ಕಳಚೂರಿ ವಂಶದೊಂದಿಗೆ ಕ್ರಿ.ಶ.೧೧೫೫ರವರೆಗೆ ರಾಜ್ಯಭಾರ ಮಾಡಿದನು. ಆದರೆ ನಂತರದ ಕಾಲಾವಧಿಯಲ್ಲಿ ಮೂರನೆಯ ತೈಲಪನ ಆಡಳಿತ ಕ್ಷೀಣಿಸುತ್ತಾ ಬಂದಿತು. ಈ ವೇಳೆಗೆ ತೈಲಪ ಮರಣ ಹೊಂದಿದ. ಇವರ ಸದುಪಯೋಗವನ್ನು ಕಳಚೂರಿ ವಂಶದ ಬಿಜ್ಜಳನು ಪಡೆದುಕೊಂಡು ಅಧಿಕಾರಕ್ಕೆ ಬಂದನು. ಕ್ರಮೇಣವಾಗಿ ಕಲ್ಯಾಣ ಚಾಳುಕ್ಯ ವಂಶ ಅವನತಿ ಹೊಂದಿತು. ಬಿಜ್ಜಳ ಮತ್ತು ಈತನ ಮಕ್ಕಳು ಕ್ರಿ.ಶ.೧೧೮೩ರಲ್ಲಿ ಸಂಪೂರ್ಣವಾಗಿ ಚಾಳುಕ್ಯರನ್ನು ಸೋಲಿಸಿ, ಅಧಿಕಾರವಹಿಸಿಕೊಂಡರು.

**ರಾಣಿಯರು**

'ರಾಜನ ಪದವಿ ದೇವನಿಂದ ನಿರೂಪಿಸಲ್ಪಟ್ಟಿದ್ದು, ರಾಜ ದೇವರ ಸಮಾನ' ಇದು ಪ್ರಾಚೀನ ಜನರಲ್ಲಿರುವ ನಂಬಿಕೆಯಾಗಿತ್ತು. ಅಂದಿನ ರಾಜಕೀಯ ಪರಿಸರದಲ್ಲಿ ಈ ರಾಜನ ಜೊತೆ ರಾಣಿಗೂ ಗೌರವ. ರಾಜನ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ (ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ;೧೯೯೦;ಪು.೧೮೧) ಅವಳು ಸಹ ಭಾಗಿನಿಯಾಗಿದ್ದಳು. ಪ್ರಜೆಗಳ ದೃಷ್ಟಿಯಲ್ಲಿ ಮಾತೃ ಸ್ವರೂಪಿಣಿಯಾಗಿದ್ದಳು. ಪ್ರಾಚೀನ ಕರ್ನಾಟಕದ ರಾಜಕೀಯ ಜೀವನದಲ್ಲಿ ಗಂಡನೊಂದಿಗೆ ದುಡಿದ ರಾಣಿಯರು ಕೆಲವರುಂಟು. ಇವರು ಕೇವಲ 'ಶಯನೇಷು ರಂಭಾ ಆಗಿರದೆ, 'ಕಾರ್ಯೇಷು ಮಂತ್ರಿ'ಯೂ ಆಗಿದ್ದರು. ಇವರು ರಾಜನಂತೆ ಬಾಲ್ಯಾವಸ್ಥೆಯಲ್ಲಿ ರಾಜಕೀಯ ತರಬೇತಿಯನ್ನು ಪಡೆದುಕೊಂಡಿದ್ದರು. ಸ್ತ್ರೀಯರಲ್ಲಿ ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ರಾಣಿ ಸಾಮ್ರಾಜ್ಯದ ವಿವಿಧ ಪ್ರದೇಶಗಳ ಆಡಳಿತವನ್ನು ನಡೆಸುತ್ತಿದ್ದಳೆಂದು ಕೆಲ ವಿದ್ವಾಂಸರು ತಿಳಿಸಿದ್ದಾರೆ. ಎಂ. ಚಿದಾನಂದ ಮೂರ್ತಿಯವರು ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಪ್ರದೇಶಗಳನ್ನಾಳಲು

ನೇಮಿಸುತ್ತಿದ್ದನು. ಎಂದು ಹೇಳಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ರಾಣಿ ಮಲೆಯುಮತಿದೇವಿಯು ಅಗ್ರಹಾರ ದಿಗ್ಗಾಂವಿ ಆಡಳಿತ ಮಾಡುತ್ತಿದ್ದಳು. ಈ ಶಾಸನವು (ಕ್ರಿ.ಶ.೧೧೦೭) ದಿಗ್ಗಾಂವಿಯ ಶಂಭುಲಿಂಗ ದೇವಾಲಯದಲ್ಲಿ ದೊರೆತಿದೆ. ಮಲೆಯಮತಿದೇವಿ ಕೇವಲ ಈ ತಾಲೂಕಿನಲ್ಲಿ ಅಷ್ಟೆ ಅಲ್ಲದೆ ಸುರಪುರ ಹಾಗೂ ಇತರ ಭಾಗದಲ್ಲಿನ ಇವಳ ಆಳ್ವಿಕೆ ಕಾಲದಲ್ಲಿ ದೊರೆತ ಶಾಸನ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್; ೧೯೯೧;ಪು.೫೩) ತಿಳಿಸುತ್ತದೆ. ಹುಣಸಗಿಯ ಕ್ರಿ.ಶ.೧೧೨೦ರ ಶಾಸನವು ಇವಳ ಸೌಂದರ್ಯ ಹಾಗೂ ದಾನ ಕೊಟ್ಟ ವಿಷಯ ತಿಳಿಸುತ್ತದೆ. ವಿಕ್ರಮಾದಿತ್ಯನ ಇನ್ನೊಬ್ಬ ರಾಣಿಯಾದ ಜಾಕಲದೇವಿ ಇಂಗುಣಿಗೆಯಲ್ಲಿ (ಕ್ರಿ.ಶ.೧೦೯೫) ಆಳ್ವಿಕೆ ಮಾಡುತ್ತಿದ್ದಳು. ಅರಳು-೩೦೦ರಿಂದಲೂ ಆಳ್ವಿಕೆ ಮಾಡಿದ್ದಳು. ಇಂಗಣಗಿ ಇವಳ ಆಳ್ವಿಕೆಗೆ ಒಳಪಟ್ಟಿದ್ದು ಇಲ್ಲಿ ಜಿನ ಬಸದಿಗಳನ್ನು ದೇವಾಲಯಗಳನ್ನು ಸ್ಥಾಪನೆ ಮಾಡಿದಳು. ಇಂಗಳಗಿ ಶಾಸನವು ಈಕೆಯ ಪ್ರಶಸ್ತಿಯನ್ನು ಉಲ್ಲೇಖಿಸುತ್ತದೆ. ಇಂಗಳಗಿಯ ಇನ್ನೊಂದು ಶಾಸನದಲ್ಲಿ ಸಿರಿಯಾದೇವಿ ದಾನ ಕೊಟ್ಟ ವಿಷಯ ತಿಳಿಸುತ್ತದೆ.

ವಿಕ್ರಮಾದಿತ್ಯನ ರಾಣಿಯರಲ್ಲಿ ಮೆಚ್ಚಿ ಆಯ್ಕೆ ಮಾಡಿಕೊಂಡು ಮದುವೆಯಾದ ರಾಣಿಯೆಂದರೆ ಚಂದಲದೇವಿ. ಈತನ ಪ್ರೀತಿಯ ರಾಣಿಯಾಗಿದ್ದಳು. ಈಕೆ ಬಗ್ಗೆ ಬಿಲ್ಹಣನ 'ವಿಕ್ರಮಾಂಕದೇವ ಚರಿತಂ' ಕಾವ್ಯದಲ್ಲಿ ಉಲ್ಲೇಖವಿದೆ. ಈಕೆಯ ಮದುವೆಯ ಪ್ರಸಂಗದ ಬಗ್ಗೆ ಶಾಸನಗಳು ಮೌನ ತಾಳಿದರೂ ಕವಿ ಬಿಲ್ಹಣನು ಆ ಪ್ರಸಂಗವನ್ನು ದೀರ್ಘವಾಗಿ ವರ್ಣನಾತ್ಮಕವಾಗಿ ವಿವರಿಸಿದ್ದಾನೆ. ಚಂದಲದೇವಿ ಅಲಂದೆ-೧೦೦೦ವನ್ನು ಆಳುತ್ತಿದ್ದಳೆಂದು ಹುಣಸೀಹಡಗಲಿ ಶಾಸನ ತಿಳಿಸುತ್ತದೆ. ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ಮೈಲಾಳದೇವಿಯು ಮನ್ನೆ-೩೦ರಲ್ಲಿದ್ದ ಸೊನ್ನಾಲ ಹಾಗೂ ಪಟ್ಟವಾಡೆ ಗ್ರಾಮಗಳನ್ನು ಆಳ್ವಿಕೆ ಮಾಡುತ್ತಿದ್ದಳೆಂದು ಕ್ರಿ.ಶ.೧೦೮೪ರ ತೆಂಗಳಿ ಶಾಸನ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್; ೧೯೯೭;ಪು.೭೨೬) ತಿಳಿಸುತ್ತದೆ. ಈ ಶಾಸನವು ತೆಂಗಳಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ದೊರೆತಿದೆ. ಬಹುಶಃ ಈ ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನ ಕೊಟ್ಟು ಅವರನ್ನು ತನ್ನ ಕಡೆ ವಾಲಿಸಿಕೊಂಡಿರಬಹುದೆಂದು ಶಾಸನ ತಿಳಿಸುತ್ತದೆ.

ರಾಜನ ಕೋಳೂರಿನ ಕ್ರಿ.ಶ.೧೦೯೧-೯೨ರ ಶಾಸನದಲ್ಲಿ ವಿಶಾಲವಕ್ಷಸ್ಥಳದ ನಿವಾಸಿನಿ ಎಂದು ಚಂದಲದೇವಿಯನ್ನು ಉಲ್ಲೇಖಿಸುತ್ತದೆ. ಈಕೆ ಕ್ರಿ.ಶ.೧೧೦೩ರ ಕಾಳಗಿಯಲ್ಲಿ ಆಳ್ವಿಕೆ ಮಾಡುತ್ತಿದ್ದಳು. ಈ ಭಾಗದಲ್ಲಿ ಶಾಸನಗಳಲ್ಲಿ ಉಲ್ಲೇಖಗೊಂಡ ಇತರ ರಾಣಿಯರೆಂದರೆ ತೆಂಗಳಿ ಶಾಸನದಲ್ಲಿ ದೇವಿಯಕ್ಕ, ಸಾವಿತ್ರಿಯಕ್ಕ ಹಾಗೂ ಮಲ್ಲಿಯಕ್ಕರು. ದೇವಿಯಕ್ಕ ಹಾಗೂ ಆಕೆಯ ಪತಿ ಇಬ್ಬರೂ ಸೇರಿ ಜಗನ್ನಾಥ ದೇವರನ್ನು ಪ್ರತಿಷ್ಠಾಪಿಸಿ ದತ್ತಿ ಕೊಟ್ಟರು. ಅವರ ಸೊಸೆಯಂದಿರಾದ ಸಾವಿತ್ರಿಯಕ್ಕ ಹಾಗೂ ಮಲ್ಲಿಯಕ್ಕರೂ ತಮ್ಮ ಗಂಡಂದಿರ ಜೊತೆಗೆ ದಾನ ಕೊಟ್ಟ ವಿಷಯ ತಿಳಿದುಬರುತ್ತದೆ. ಹುಣಸಗಿಯ ಶಾಸನದಲ್ಲಿ ಜೋಗಣಬ್ಬರಸಿ ಎಂಬುವಳು ಆಲನಕೇರಿಯಲ್ಲಿ ಸಹಸ್ರ ಲಿಂಗದೇವರನ್ನು ಪ್ರತಿಷ್ಠಾಪಿಸಿ ಶಿಕ್ಷಣಕ್ಕಾಗಿ ಭೂಮಿಯನ್ನು ದಾನ ಕೊಟ್ಟ ವಿಷಯ (ಕಲಬುರ್ಗಿ ಜಿಲ್ಲೆಯ ಶಾಸನ;೧೯೯೬;ಪು.೩೦) ತಿಳಿಸುತ್ತದೆ. ವಿಕ್ರಮಾದಿತ್ಯನ ರಾಣಿಯರ ಉಲ್ಲೇಖ ಕೇವಲ ಈ ಭಾಗಕ್ಕೆ ಅಷ್ಟೆ ಸೀಮಿತವಾಗಿಲ್ಲದೆ, ಇತರ ತಾಲೂಕಿನಲ್ಲಿ ಇವರ ಶಾಸನಗಳು ಕಂಡು ಬಂದಿವೆ. ಸುರಪುರ, ಅಳಂದ, ಶಾಹಪುರ, ಜೇವರ್ಗಿ ಮುಂತಾದ ತಾಲೂಕಿನಲ್ಲಿ ದೊರೆತ ಶಾಸನಗಳಿಂದ ಇವರು ಸಹ ಆಳ್ವಿಕೆ ಮಾಡುತ್ತಿದ್ದರೆಂದು ತಿಳಿಸುತ್ತವೆ.

ವಿಕ್ರಮಾದಿತ್ಯನ ರಾಣಿಯರಷ್ಟೆ ಅಲ್ಲದೆ ಮಹಾಮಂಡಳೇಶ್ವರರ ಪತ್ನಿಯರು ಸಹ ಆಳ್ವಿಕೆಯನ್ನು ಮಾಡುತ್ತಿದ್ದರು. ಈತನ ಮಹಾಮಂಡಳೇಶ್ವರ ಬಾಚರಸನು ಆಳ್ವಿಕೆ ಮಾಡುತ್ತಿದ್ದನು. ಪತ್ನಿ ಕಾಳಬ್ಬರಸಿ (ಕ್ರಿ.ಶ.೧೧೯೪) ಇಂಗಳಗಿಯ ಲೋಕೇಶ್ವರ ದೇವರಿಗೆ ದಾನ ಕೊಟ್ಟ ವಿಷಯ ತಿಳಿಸುತ್ತದೆ. ವಿಕ್ರಮಾದಿತ್ಯನ ಮಹಾಮಂಡಲೇಶ್ವರ ರೇವರಸನ ಪತ್ನಿ ಮಲಿಯಬ್ಬರಸಿ ದಾನ ಕೊಟ್ಟ ವಿಷಯ ತಿಳಿಸುತ್ತದೆ. ಈ ಎಲ್ಲ ಶಾಸನಗಳಲ್ಲಿ ಸ್ತ್ರೀಯರು ನೀಡಿದ ದತ್ತಿಗಳ ಉಲ್ಲೇಖಗಳಷ್ಟೇ ಅಲ್ಲದೆ, ದೊರೆತ ಇಂಗಳಗಿಯ ಇನ್ನೊಂದು ಶಾಸನವು ಬಲವ್ವೆ ಎಂಬುವವಳು ಅರಳು-೩೦೦ರ ಇಂಗಳಗಿಯಲ್ಲಿ ದಾನ ಕೊಟ್ಟ ವಿಷಯ ತಿಳಿಸುತ್ತದೆ. ಹಾಗೂ ಗುಡ್ಡವ್ವೆ ಇವರ ಸಮ್ಮುಖದಲ್ಲಿ ದಾನ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.

ಚೆನ್ನಕ್ಕ ಎಲಿಗಾರ ಅವರು ಹೇಳುವಂತೆ ವಿಕ್ರಮಾದಿತ್ಯನು ತನ್ನ ಬಹುಸಂಖ್ಯಾತ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟಿದ್ದಾನೆ ಎಂದಿದ್ದಾರೆ. ಸವತಿ ಮತ್ಸರ ತಪ್ಪಿಸಿ, ರಾಜಕೀಯದತ್ತ ಅವರ ಮನಸ್ಸನ್ನು ತೊಡಗಿಸಲು ಕಾರ್ಯನಿರತರನ್ನಾಗಿ ಮಾಡಿದನು. ಇದು ವಿಕ್ರಮಾದಿತ್ಯನ ರಾಜಕೀಯ ನಿಪುಣತೆಯನು (ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ;೧೯೯೨;ಪು.೨೯) ಎತ್ತಿ ತೋರಿಸುತ್ತದೆ. ಇದು ಒಂದು ಅರ್ಥದಲ್ಲಿ ಸಾಂಸಾರಿಕ ನೆಮ್ಮದಿ, ಇನ್ನೊಂದು ಅರ್ಥದಲ್ಲಿ ರಾಜಕೀಯ ಭದ್ರತೆಗೆ ಕಾರಣವಾಗಿತ್ತು.

ಕರ್ನಾಟಕದ ಇತಿಹಾಸದಲ್ಲಿ ವೀರ ಜೀವನ ನಡೆಸಿದ ಮಹಿಳೆಯರನ್ನು ಗಮನಿಸಿದಾಗ, ಚಕ್ರಾಧಿಪತಿಯ ಯುದ್ಧದ ವೇಳೆಗೆ ಭಾಗವಹಿಸಿದ ಅರಸರುಗಳ ದಂಡೆಯಾತ್ರೆಯ ಸಂದರ್ಭದಲ್ಲಿ ಹಿಂಬಾಲಿಸುವುದುಂಟು. ಈ ಚಕ್ರವರ್ತಿನಿಯರನ್ನು ಬಿಟ್ಟರೆ ಆಗಾಗ ಯುದ್ಧ ಜೀವನನ್ನು ನಿರ್ವಹಿಸಿದವರು ಸ್ವತಂತ್ರವಾಗಿ ಅಧಿಕಾರ ನಡೆಸುತ್ತಿದ್ದ ಕೆಲವು ರಾಣಿಯರು ಅಥವಾ ಮಹಾಮಂಡಳೇಶ್ವರರ ಪತ್ನಿಯರು. ಇದಕ್ಕೆ ಆಗಿನ ಕಾಲದಲ್ಲಿ ಸ್ತ್ರೀ ವಿಷಯವಾಗಿದ್ದ ಸಾಮಾಜಿಕ ಅಂತಸ್ತುಗಳೆ ಕಾರಣವೆನ್ನಬೇಕು.

**ಕಲ್ಯಾಣದ ಕಲಚೂರಿಗಳು**

ಕಳಚೂರಿ ವಂಶದವರು ಮೂಲತ: ಮಧ್ಯಭಾರತದಿಂದ ಬಂದವರಾಗಿದ್ದಾರೆ. ಯದು ಮತ್ತು ಸಹಸ್ರಚಿತ್ ಅವರ ವಂಶಜದವರೆಂದು ಕರೆದುಕೊಳ್ಳುತ್ತಾರೆ. ಇವರಿಗೆ ಕಲಚೂರಿ ಎಂದು ಕರೆದರೂ 'ಕಟಚೂರಿ, ಕಟ್‌ಚೂರಿ, ಕಲಿಚೂರಿ ಎಂಬ ಪದಗಳು ಕಂಡುಬಂದಿವೆ. ಇವರನ್ನು ಹೈಹೆಯ(ಚೇದಿ) ಕುಟುಂಬದವರೆಂದೂ ಕರೆಯಲಾಗುತ್ತದೆ. (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೬೭;ಪು.೫೩) ಇವರು ಮೊದಲು ಕಾಲಿಂಜರಾ (ಬುಂದೇಲ ಖಂಡದ ಬಂಡಾ ಜಿಲ್ಲೆಯಲ್ಲಿ)ದಿಂದ ಆಳುತ್ತಿದ್ದರು. ಮಾಳ್ವ, ಗುಜರಾತ, ಕೊಂಕಣ ಮತ್ತು ಮಹಾರಾಷ್ಟ್ರಗಳಲ್ಲಿ ಇವರ ಶಾಖೆಗಳಿದ್ದವೆಂದು ತಿಳಿಸುತ್ತವೆ. ಶಿವಮೊಗ್ಗ ಜಿಲ್ಲೆಯ ಬಂದಳಿಕೆಯ ಕ್ರಿ.ಶ.೧೧೭೪ರ ಶಾಸನವು ಕಲಚೂರಿ ಎಂಬ ಪದದ ಬಗ್ಗೆ ತಿಳಿಸುತ್ತದೆ. ದ್ರೋಣಾಚಾರ್ಯರ ಮಗ ಅಶ್ವತ್ಥಾಮನ ಅನುಯಾಯಿ ಅಥವಾ ಶಿಷ್ಯ ಸೋಮನೆಂಬಾತನು ಈ ವಂಶದ ಸ್ಥಾಪಕನೆಂದು ತಿಳಿಸುತ್ತವೆ. ರಾಯಮುರಾರಿ ಸೋವಿದೇವನ ಕ್ರಿ.ಶ.೧೧೭೦ರ ಶಾಸನದಲ್ಲಿ ಶಿವನಿಂದ ಈ ಸಂತತಿ ಉದ್ಭವಿಸಿತು ಎಂದು ತಿಳಿಸುತ್ತದೆ. ಕಲಚೂರಿಗಳು ಶಿವನಿಂದಲೇ (ಶಿವಾಂಶ ಸಂಭೂತ)

ಉದ್ಭವಿಸಿದರೆಂದು ಶಾಸನಗಳು (ಗುಲ್ಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೯೭;ಪು.೫೩) ಹೇಳುತ್ತವೆ. ಕರ್ನಾಟಕವನ್ನಾಳಿದ ಕಲಚೂರಿಗಳು ಕಾಲಿಂಜರಾ ಪುರವರಾಧೀಶ್ವರರೆಂದು ತಮ್ಮನ್ನು ತಾವು ಕರೆದುಕೊಂಡಿದ್ದಾರೆ. ಸುವರ್ಣ ವೃಷಭ ಇವರ ಲಾಂಛನವಾಗಿತ್ತು.

ಕಲ್ಯಾಣ ಚಾಳುಕ್ಯರ ಮಂಡಲಿಕರಾಗಿ ಕ್ರಿ.ಶ.೧೧೬೨ರಲ್ಲಿ ಅಧಿಕಾರಕ್ಕೆ ಬಂದರು. ಉಚ್ಚಿತ, ಬಿಜ್ಜಳ, ಕರ್ಣ, ಜೋಗಮ ಇವರು ಅನುಕ್ರಮವಾಗಿ ಆಳಿದ ಮಾಂಡಳಿಕರು. ಬಿಜ್ಜಳನು ಮಹಾರಾಧಿರಾಜ ಕಾಲಂಜರ ಪುರವರಾಧೀಶ್ವರ, ಸುವರ್ಣ ವೃಷಭ ಧ್ವಜ ಎಂಬ ಬಿರುದುಗಳನ್ನು ಧರಿಸಿದ್ದನು. ಇಮ್ಮಡಿ ಬಿಜ್ಜಳನು (ಕ್ರಿ.ಶ.೧೧೨೯–೧೧೬೮) ಸಮರ್ಥ ಅರಸನಾಗಿದ್ದು ತನ್ನ ಮಾಂಡಳಿಕರನ್ನು ತನ್ನ ಅಧೀನದಲ್ಲಿ ಇರಿಸಿಕೊಂಡಿದ್ದನು. ಮೂರನೆಯ ತೈಲಪ ಕ್ರಿ.ಶ.೧೧೬೨ರಲ್ಲಿ ನಿಧನ ಹೊಂದಿದಾಗ ಕಲ್ಯಾಣದ ಚಕ್ರವರ್ತಿಯಾಗಿ ಬಿಜ್ಜಳ ಅಧಿಕಾರವನ್ನೇರಿದನು. ನಂತರದಲ್ಲಿ ಸೇವುಣ, ಚೋಳ, ಆಂಧ್ರದವರನ್ನು ಸೋಲಿಸಿದನು. ಕ್ರಿ.ಶ.೧೧೫೭ರಲ್ಲಿ ಇಮ್ಮಡಿ ಬಿಜ್ಜಳನು ಸ್ವತಂತ್ರ ರಾಜನಾಗಿದ್ದನು. ಈತ ಶಕ್ತಿ ಸಾಮರ್ಥ್ಯ ಹೊಂದಿದ್ದರು. ಹೊರನೋಟದಲ್ಲಿ ಕಲ್ಯಾಣ ಚಾಳುಕ್ಯ ಚಕ್ರವರ್ತಿ ಮೂರನೆಯ ತೈಲನಿಗೆ ಅಧೀನನೆಂದು ತೋರಿಸಿಕೊಳ್ಳುತ್ತಿದ್ದನು. ಬಿಜ್ಜಳ ಜೀವಿತವಿರುವಾಗಲೆ ಕ್ರಿ.ಶ.೧೧೬೨ರಲ್ಲಿ ಆತನ ಹಿರಿಯ ಮಗ ರಾಯಮುರಾರಿ ಸೋವಿದೇವ ಅಧಿಕಾರಕ್ಕೆ ಬಂದನು. ಈತನ ಶಾಸನಗಳು ಕಲ್ಯಾಣದಿಂದ ಬಳ್ಳಾವಿವರೆಗೆ ದೊರೆತಿವೆ. ಈತ ಕ್ರಿ.ಶ.೧೧೭೩ರಲ್ಲಿ ಕಾಳಗಿಯಲ್ಲಿ ಆಳ್ವಿಕೆ ಮಾಡಿದ್ದನು. ಈತ ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಕಾಳಂಜಪುರವರಾಧೀಶ್ವರ, ಎಂದೆನಿಸಿಕೊಂಡಿದ್ದನು. ವೈರಿಗಳ ಸಮೂಹವನ್ನು ನಾಶ ಮಾಡುವ ಶಕ್ತಿ, ಸಾಮರ್ಥ್ಯ ಹೊಂದಿದ್ದನು. ಕಳಚೂರಿ ವಂಶಕ್ಕೆ ಕಮಲದಂತಿದ್ದನು. ಮಹಾಪ್ರಚಂಡನು, ವೈರಿ ಸಮೂಹಕ್ಕೆ ವಜ್ರ ಮುಷ್ಠಿಯಾಗಿದ್ದನು. ಕ್ರಿ.ಶ.೧೧೬೯ರ ಕೊಲ್ಲೂರು ಶಾಸನ ಕಳಚೂರಿ ವಂಶದ ರಾಯಮುರಾರಿ ಸೋವಿದೇವನ ಕಾಲದ್ದಾಗಿದೆ. ಚೇದಿವಂಶಕ್ಕೆ ಸೇರಿದ ಮಂಡಳೇಶ್ವರ ಅಲ್ಲಹುಲಿ ದೇವನು ಸಗರ–೫೦೦ನ್ನು ರಾಜಧಾನಿ ಕೊರಲೂರಿನ ಕೋಟೆಯಿಂದ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್:೧೯೯೭;ಪು.೨೦೪) ಆಳುತ್ತಿದ್ದನು.

ಮಂಡಲೇಶ್ವರ ಮತ್ತು ಸಾಮಂತರಿಗೂ ಪ್ರತ್ಯೇಕ ಧ್ವಜ ಲಾಂಛನಗಳಿದ್ದವು.(Epigraphia Carnatica Vol-XI; Halakere 68;1126 A.D.) ಅವರು ರಾಜರಂತೆ ತಮ್ಮ ಜನರ ಕಷ್ಟ ಸುಖಗಳನ್ನು ವಿಚಾರಿಸುತ್ತಿದ್ದರು. ಯುದ್ಧದ ಸಮಯದಲ್ಲಿ ರಾಜನಿಗೆ ಸಹಾಯ ಮಾಡಿ ಅನೇಕ ದೇಶಗಳನ್ನು ಗೆದ್ದುಕೊಂಡನು. ಮಹಾಮಂಡಳೇಶ್ವರ ಎನ್ನುವುದು ಮಂಡಳೇಶ್ವರ ಎನ್ನುವ ಪದವಿಗಿಂತ ದೊಡ್ಡದು ಎಂಬುದು ಸ್ಪಷ್ಟವಾಗಿದೆ. ಒಬ್ಬ ಮಹಾಮಂಡಳೇಶ್ವರನ ಅಧೀನದಲ್ಲಿ ಕೆಲ ಮಂಡಳೇಶ್ವರರು ಇರುತ್ತಿದದ್ದು ಶಾಸನದಿಂದ ತಿಳಿದುಬರುತ್ತದೆ.

**ಹೈಹಯ ವಂಶ**

ಹೈಹಯ ವಂಶದವರು ಮಧ್ಯ ಪ್ರದೇಶದ ನರ್ಮದಾ ನದಿ ತೀರದ ಈಗಿನ ಕಾಳಂಜಾಪುರ ದಿಂದ ಬಂದವರಾಗಿದ್ದರು. ಮಾಹಿಷ್ಮತಿ (ಮಾಹಿಷ್ಮತಿಪುರವಾಧೀಶ್ವರರು) ಎಂಬ ನಗರದ 'ರಾಜ'ರೆಂದು ವರ್ಣಿಸಲಾಗಿದೆ. ಆದರೆ ಈ ವಂಶದವರ ಮೂಲದ ವಿವರಣೆ ಎಲ್ಲಿಯೂ ಕಂಡುಬರುವುದಿಲ್ಲ. ಹೈಹಯ

ವಂಶದವರು ಅರಳು-೩೦೦ ವಿಭಾಗದ ಮಹಾಮಂಡಳೇಶ್ವರರಾಗಿ ಆಳ್ವಿಕೆ ಮಾಡಿದರು. ಇದರ ಉಪವಿಭಾಗವು ಈಗಿನ ಕಲಬುರ್ಗಿ ಜಿಲ್ಲೆಯ ಸೇಡಂ ತಾಲೂಕಿನ ಅರಲೂರು. ಅರಲೂರು ಗ್ರಾಮದ ಸುತ್ತಲಿನ ಪ್ರದೇಶವು ಇವರ ಆಳ್ವಿಕೆಗೆ ಒಳಪಟ್ಟಿತು. ಹೈಹಯ ವಂಶದ ಮೊದಲ ಅಧಿಕಾರಿ 'ರೇಚರಸ'ನು. ಈತ ತನ್ನನ್ನು ಕ್ರಿ. ಶ. ೧೦೩೮ರಲ್ಲಿದ್ದಂತಹ ಚಾಳುಕ್ಯ ಜಗದೇಕಮಲ್ಲ (ಇಮ್ಮಡಿ)ನ ಅಧೀನನೆಂದು ಹೇಳಿ ಕೊಂಡಿರುವನು. ಇವರ ಬಗ್ಗೆ ಇನ್ನೂ ಹೆಚ್ಚಾಗಿ ( ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨;ಪು.೩೨) ತಿಳಿಸುವ ಶಾಸನಗಳೆಂದರೆ ನಾಗಾಯಿ ಮತ್ತು ಹಂದರ್ಕಿ ಶಾಸನಗಳಾಗಿವೆ. ಹೈಹಯ ವಂಶದ ವಂಶಾವಳಿಯು ಈ ರೀತಿಯಾಗಿ ಕಂಡು ಬರುತ್ತದೆ.




ಐಚ I, ಲೋಕರಸ IV, ಐಚ II, ಆನೆಗ II, ಲೋಕರಸ V, ಇವರು ಚಾಳುಕ್ಯರ ಮಹಾಮಂಡಳೇಶ್ವರರಾಗಿದ್ದರು. IIನೆ ಎರಗನ ಮಗನಾದ ಚೌಟಿ ನಾಯಚ್ಚರಸನೇ ಮೂಲ ಪುರುಷನಾಗಿರಬೇಕು ಎಂದು ಊಹಿಸಲಾಗಿದೆ.

ಅರಳು-೩೦೦ರ ಆಳ್ವಿಕೆ ಜೊತೆಗೆ ಮೊರಟ-೩೦೦ರಲ್ಲಿಯೂ ಸಹ ಹೈಹಯ ವಂಶದವರು ಆಳ್ವಿಕೆ ಮಾಡುತ್ತಿದದ್ದು (ಕರ್ನಾಟಕ ಪರಂಪರೆ I;೧೯೭೦;ಪು.೨೩೦) ಕಂಡು ಬರುತ್ತದೆ. ರಾಜರು ಮೊರಟ-೩೦೦ ವಿಭಾಗದ ಮಹಾಮಂಡಳೇಶ್ವರರೆಂಬುದಾಗಿ ಪ್ರಾಮುಖ್ಯತೆ ಪಡೆದುಕೊಂಡಿದ್ದರು. (ಮೊರಟ ಎಂಬುದು ರಾಯಚೂರ ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿದೆ). ಮೊರಟ-೩೦೦ರಲ್ಲಿ ಆಳ್ವಿಕೆ ಮಾಡುತ್ತಿದ್ದವನು, ರೇವರಸನು 'ಮುಮ್ಮುನಿ ಕೊಂಗಣಿಗ ಜಲಧಿ ವಡವಾನಲ' (ಕೊಂಕಣದ ಮುಮ್ಮುನಿ ಎಂಬ ಸಾಗರಕ್ಕೆ ಒಡೆಯನು), 'ಪಾಂಡ್ಯ ಕುತೂಹಲ' (ಪಾಂಡ್ಯ ರಾಜ್ಯಾಡಳಿತಕ್ಕೆ ಅಧಿಕಾರಿಯಾಗಿದ್ದವನು), 'ಧಾರಾ ನಗರ ಭಯಂ ಕರಂ' (ಧಾರಾ ನಗರಕ್ಕೆ ಭಯಂಕರನಾಗಿರುವವನು) ಎಂಬ ಹೆಸರಿನಿಂದ ಈತನನ್ನು ಕರೆಯಲಾಗಿದೆ. 'ಮೂವಡಿ ಗಂಡ' ಎಂಬ ಬಿರುದನ್ನು ಪಡೆದಿದ್ದನು. ಕ್ರಿ. ಶ. ೧೦೫೨ರಲ್ಲಿ ಚಾಳುಕ್ಯ ಒಂದನೆಯ ಸೋಮೇಶ್ವರನ ಅಧೀನನಾಗಿ ಎಡೆತೊರೆ-೨೦೦೦ವನ್ನು ಆಳುತ್ತಿದ್ದನು. ಇತರ ಮಹಾಮಂಡಳೇಶ್ವರರು ಆಳ್ವಿಕೆ ಮಾಡಿದ್ದು ಶಾಸನಗಳಿಂದ ತಿಳಿದುಬರುತ್ತದೆ.

**ಬಾಣ ವಂಶ**

ಚರಿತ್ರೆಯ ಘಟ್ಟದಲ್ಲಿ ರಾಜರು ತಮ್ಮ ಸ್ಥಾನಮಾನದಿಂದ ರಾರಾಜಿಸುವಂತೆ ಬಾಣರು ಸಹ ಕ್ರಿ.ಶ. ಒಂದನೆಯ ಶತಮಾನದಿಂದ ಹತ್ತನೆಯ ಶತಮಾನದವರೆಗೆ ಬಲ ಪಡೆದುಕೊಂಡು ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಕಂಗೊಳಿಸುತ್ತಿದ್ದರು. ದಕ್ಷಿಣ ಭಾರತದಲ್ಲಿ ಚಿಕ್ಕ-ಪುಟ್ಟ ರಾಜ್ಯದ ಭಾಗಗಳನ್ನಾಗಿ ಮಾಡಿಕೊಂಡು ಸ್ವತಂತ್ರರಾಗಿದ್ದರು. 'ಶಿಲಪ್ಪದಿಕಾರಂ' 'ಮಣಿಮೇಖಲೈ' ಎಂಬ ತಮಿಳು ಕೃತಿಗಳಿಂದ (ಕರ್ನಾಟಕ ಪರಂಪರೆ I;೧೯೭೦;ಪು.೨೩೧) ಬಾಣರ ಬಗ್ಗೆ ತಿಳಿದು ಬರುತ್ತದೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕಿನಲ್ಲಿ ಹೆಚ್ಚಾಗಿ ಇವರ ಶಾಸನಗಳು ದೊರೆತಿವೆ. ಇವರ ರಾಜ್ಯ 'ಪಾಲಾರ'ವಾಗಿತ್ತು. ಇವರ ಬಗ್ಗೆ ತಿಳಿಯುವುದಾದರೆ ಪ್ರಥಮ ಪುರುಷ ಮಹಾಬಲಿ ವಿಷ್ಣುವಿನ ಅವತಾರವಾದ ವಾಮನ ಅವತಾರದಲ್ಲಿ, ವಾಮನಿಗೆ ಭೂಧಾನವನ್ನು ನೀಡಿದವನು ವಿರೋಚನನ ಪುತ್ರನಾದ ರಾಕ್ಷಸ ರಾಜ ಬಲಿಯಿಂದ ಬಂದಿರುವರೆಂದು ಹೇಳಬಹುದು. ಬಲಿಯ ಪುತ್ರನಾದ 'ಬಾಣ'ನು ಶಿವನ ಪರಮ ಭಕ್ತನಾಗಿದ್ದು, ಪೌರಾಣಿಕ ಹಿನ್ನೆಲೆಯಲ್ಲಿಯೂ ಬಲಿಯನ್ನು ಕಾಣಬಹುದು. ಪೂರ್ವ ಮೈಸೂರು ಮತ್ತು ಆಂಧ್ರ ಮಂಡಲ ಮಧ್ಯೆ ಏಳುವರೆ ಲಕ್ಷ ಪ್ರಾಂತ್ಯವನ್ನು ಆಳುತ್ತಿದ್ದನು. 'ಮಹಾವಲಿ' ಎಂದು ಇವರನ್ನು ಕರೆಯಲಾಗಿದೆ.

ಬಾಣರ ವಂಶದ ಬಗ್ಗೆ ಕೆಲ ಮೂಲಗಳಿಂದ ತಿಳಿದುಬರುವುದೇನೆಂದರೆ, ಕದಂಬ ವಂಶದ ಕಾಕುಸ್ಥವರ್ಮ (ಕ್ರಿ. ಶ. ೪೨೨ರಿಂದ ೪೭೭) ನ ತಾಳಗುಂದ ಶಾಸನದಿಂದ ಬಾಣರ ಬಗ್ಗೆ ತಿಳಿಸುತ್ತದೆ. ಹಾಗೂ 'ಬೃಹತ್ ಬಾಣ' ಎಂಬ ಶಬ್ದವು ತಮಿಳು ಶಾಸನಗಳಲ್ಲಿರುವ ಪೆರುಂಬಾಣನ ಬಗ್ಗೆ ತಿಳಿಸುತ್ತದೆ ಎಂದು ಕೇಲಿ ಹೋರ್ನರ್ (ಕರ್ನಾಟಕ ಪರಂಪರೆ I;೧೯೭೦;ಪು.೨೧೧)ಅವರ ಅಭಿಪ್ರಾಯವಾಗಿದೆ. ಐದನೆಯ ಶತಮಾನದ ಹಲ್ಮಿಡಿ ಶಾಸನವು ಬಾಣ ವಂಶದ ನಾಯಕರ ಬಗ್ಗೆ ತಿಳಿಸುತ್ತದೆ. ಕನ್ನಡ ಹಾಗೂ ತಮಿಳು ಶಾಸನಗಳು ಇವರ ಬಗ್ಗೆ ದಾಖಲಿಸುತ್ತವೆ ಆದರೂ,ಅಧಿಕೃತ ದಾಖಲೆಗಳು ಇನ್ನೂ ಲಭ್ಯವಾಗಿಲ್ಲ.

ಪ್ರಾರಂಭದಲ್ಲಿ ಬಾಣರು ಬನವಾಸಿ ಕದಂಬರಿಗೆ ಅಧೀನರಾಗಿದ್ದರು. ನಂತರದಲ್ಲಿ ಉಂಟಾದ ರಾಜಕೀಯ ಗಲಭೆಗಳಿಂದ ತಮ್ಮ ರಾಜರನ್ನು ಬದಲಿಸಿಕೊಂಡರು. ಬಾದಾಮಿ ಚಲುಕ್ಯರಿಗೆ, ಮಾನ್ಯಖೇಟದ ರಾಷ್ಟ್ರಕೂಟರಿಗೆ, ಕಂಚಿಯ ಪಲ್ಲವರಿಗೆ ಅಧೀನರಾಗುತ್ತಾ ಬಂದರು. ಇದೇ ವೇಳೆಗೆ ಪಲ್ಲವರು ಏಳಿಗೆಗೆ ಬಂದಿದ್ದರಿಂದ ಅವರ ಸಾಮಂತರಾದರು. ಹೀಗಾಗಿ ಇವರು ದಕ್ಷಿಣ ಭಾರತದಲ್ಲಿ ಆಳ್ವಿಕೆ ಮಾಡಿದ ಅರಸರ ಅಧೀನಕ್ಕೆ ಒಳಪಟ್ಟಿದ್ದರೇ ಹೊರತು, ಕರ್ನಾಟಕದಲ್ಲಿ ತಮ್ಮದೇ ಆದ ರಾಜ್ಯವನ್ನು ಕಟ್ಟಿ ಆಳ್ವಿಕೆ ಮಾಡಲಿಲ್ಲ. ಇನ್ನು ಕೆಲ ಶಾಸನಗಳ ಆಧಾರದಿಂದ ಬಾಣ ವಂಶದ ಬಗ್ಗೆ, ಅಳಂದೆ-೧೦೦೦ದ ಉಪವಿಭಾಗದ 'ಸೂರಿಪ್ಪತ್ತರವತ್ತ'ನ್ನು ಗೊಂಕ ನಾಡೆಂದು ಕರೆಯಲಾಗುತ್ತಿತ್ತು. ಇದೇ ನಾಡನ್ನು ಗೊಂಕರು ಆಳ್ವಿಕೆ ಮಾಡುತ್ತಿದ್ದರಿಂದ ಈ ಹೆಸರು ಬಂದಿರಬಹುದು. ಇವರು 'ಬಾಣ' ವಂಶಕ್ಕೆ.

ಸೇರುವವರಾಗಿದ್ದರಿಂದ ಕಲ್ಯಾಣ ಚಾಳುಕ್ಯರ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರರಾಗಿದ್ದರು. ಮರತೂರು ಹಾಗೂ ಕಾಳಗಿ ಶಾಸನಗಳಲ್ಲಿ (ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೭೨;ಪು.೧೦) ಬಾಣರ ವಂಶಾವಳಿಯನ್ನು ಕೆಳಗಿನಂತೆ ಉಲ್ಲೇಖಿಸಲಾಗಿದೆ.




ಇವರಿಂದ ಬಿಬ್ಬನೃಪನಿಗೆ ಇಬ್ಬರು ಮಕ್ಕಳಿರುವುದರಿಂದ ಎರಡು ಶಾಖೆಗಳ ವಂಶಗಳು ಬೆಳೆದು ಬಂದವು. ಆಂಧ್ರ, ಕನ್ನಡ, ತಮಿಳು ಶಾಸನಗಳ ಪ್ರಕಾರ 'ಮಹಾಬಲಿ' ಈ ವಂಶದ ಪ್ರಥಮ ಪುರುಷನಾದರೆ, ಮರತೂರು ಹಾಗೂ ಕಾಳಗಿ ಶಾಸನದಲ್ಲಿ ಬಿಬ್ಬನೃಪನೇ ಹೈಹಯ ವಂಶದ ಮೂಲ ಪುರುಷನೆಂದು (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು;೧೯೭೨;ಪು.೩೨) ತಿಳಿದು ಬಂದಿದೆ. ಇವರು ಕಲ್ಯಾಣ ಚಾಳುಕ್ಯರ ಮಹಾಮಂಡಳೇಶ್ವರರಾಗಿದ್ದರೆಂದು ಸ್ಪಷ್ಟವಾಗುತ್ತದೆ. ಮಹಾಮಂಡಳೇಶ್ವರನಾದ ವೀರಗೊಂಕರಸನು ಅಳಂದೆ - ೧೦೦೦ ಮಹಾಮಂಡಳೇಶ್ವರ ಬಿಬ್ಬರಸನಿಗೆ ಅಧೀನನಾಗಿದ್ದನೆಂದು ಕ್ರಿ. ಶ. ೧೧೯೭ರ ಹರಸೂರ ಶಾಸನ ತಿಳಿಸುತ್ತದೆ. ಇದರಿಂದ ಇವರ ಪ್ರಾಬಲ್ಯ ದಕ್ಷಿಣದವರೆಗೂ ಹರಡತ್ತೆಂಬುವುದು ತಿಳಿದುಬರುತ್ತದೆ.

**ಆಡಳಿತ ವ್ಯವಸ್ಥೆ**

ಕಲಬುರ್ಗಿ ಜಿಲ್ಲೆಯ ಅನೇಕ ರಾಜಮನೆತನಗಳು ಆಡಳಿತಕ್ಕೆ ಒಳಪಟ್ಟಿದ್ದರಿಂದ ರಾಜ್ಯಾಡಳಿತ ಕಾಲಕಾಲಕ್ಕೆ ಭಿನ್ನವಾಗಿದ್ದು ಕಂಡು ಬರುತ್ತದೆ. ರಾಷ್ಟ್ರಕೂಟರು ಕಲ್ಯಾಣ ಚಾಳುಕ್ಯರು ಕಳಚೂರರು ಈ ಎಲ್ಲ ವಂಶಾವಳಿಗಳ ಆಡಳಿತ ಪದ್ಧತಿ, ಒಂದೇರೀತಿಯಾಗಿ ಕಂಡುಬರುತ್ತವೆ. ಇಡೀ ಸಾಮ್ರಾಜ್ಯದ ಅಧಿಕಾರ ಸಾಮ್ರಾಟನದ್ದಾಗಿದ್ದರೆ, ಅವನ ನಂತರದ ಅಧಿಕಾರ ಮಹಾಮಂಡಳೇಶ್ವರ, ದಂಡನಾಯಕರ ಅಧಿನಕ್ಕೆ ಒಳಪಟ್ಟಿರುತ್ತಿತ್ತು.

ರಾಜಕೀಯ ವ್ಯವಸ್ಥೆಗೆ ಸಂಬಂಧ ಪಟ್ಟಂತೆ ಗ್ರಾಮಗಳನ್ನು ಆಳ್ವಿಕೆ ಮಾಡುತ್ತಿದ್ದರು. ಆಳಂದೆ - ೧೦೦೦, ಮಸ್ಸೆದಡಿ-೧೦೦೦, ಅರಲು-೩೦೦, ಮಿರಂತೆ-೩೦೦, ಗೊಂಕ-೧೨೦ (ಕಲಬರ್ಗಿ ಜಿಲ್ಲೆಯ ಶಾಸನಗಳು; ೧೯೬೬;ಪು.೨೫) ಮುಂತಾದ ವಿಭಾಗಗಳು ಕಂಡು ಬಂದಿವೆ. ಕೆಲವು ಕಂಪಣಗಳು ಸಹ ಕಂಡು ಬರುತ್ತವೆ. ಈ ಕಂಪಣಗಳನ್ನು ಹೆಚ್ಚಾಗಿ ರಾಜಪರಿವಾರದವರು, ಸಾಮಂತರು ಇಲ್ಲವೆ ಮಹಾಮಂಡಳೇಶ್ವರರು ಆಳುತ್ತಿದರು.

ರಾಜ್ಯದ ವಿಸ್ತಾರಕ್ಕೆ ಏಕೈಕ ಸಾರ್ವಭೌಮ ಅಧಿಪತಿಯಾಗಿದ್ದವರು ಅರಸರು. ಆಡಳಿತದ ಅನುಕೂಲಕ್ಕಾಗಿ ರಾಜ್ಯದ ವಿವಿಧ ಭಾಗಗಳಲ್ಲಿ ಅವನ ರಾಣಿಯರು ಅಲ್ಲದೆ ಯುವರಾಜರು ರಾಜ್ಯಭಾರಗೈದಿರುವುದುಂಟು. ಅವರ ಕೆಳಗೆ ಮಹಾಮಂಡಳೇಶ್ವರರು, ಮಹಾಸಾಮಂತರು, ದಂಡನಾಯಕರು, ಇವರಿಗೆ ಅಧೀನರಾಗಿ ನಾಡಪ್ರಭುಗಳು, ಮಹಾಜನರು, ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದರು. ಆಳ್ವಿಕೆಯಲ್ಲಿ ಅನೇಕ ಪ್ರಕಾರಗಳಿದ್ದವು. ಬೀಳಾನುವೃತ್ತಿ, ತ್ರಿಭೋಗ್ಯಾಭ್ಯಂತರ ಸಿದ್ಧಿ ಮೇಲಾಳಿಕೆ (ಹೈದ್ರಾಬಾದ್ ಭಾಗದ ಕನ್ನಡ ಶಿಲಾಶಾಸನಗಳು;೧೯೬೨;ಪು.೧೧) ಮುಂತಾದ ಪದಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ಅದರಲ್ಲೂ ಕಲ್ಯಾಣ ಚಾಳುಕ್ಯರ ಶಾಸನಗಳಲ್ಲಿ ಈ ಪದಗಳ ಬಳಕೆ ಹೆಚ್ಚಾಗಿ ಕಂಡು ಬರುತ್ತವೆ. ಅರಲು-೩೦೦ ಹಾಗೂ ಮಿರಂತೆ-೩೦೦ರ ಘಟಕಗಳನ್ನು ಲೋಕರಸನು, ಬೀಳಾನುವೃತ್ತಿಯಿಂದ ನಿರ್ವಹಿಸುತ್ತಿದ್ದನೆಂದು ನಾಗಾಯಿಯ ಶಾಸನ ತಿಳಿಸುತ್ತದೆ. ಕ್ರಿ.ಶ.೧೦೮೫ರಲ್ಲಿ ಸೋಮೇಶ್ವರನು ಬೀಳಾನುವೃತ್ತಿ (ಬಿ.ಕೆ.ಐ.; ಕ್ರಿ.ಶ.೧೦೪೯) ಯಿಂದ ಆಳುತ್ತಿದ್ದನು. ದಿಗ್ಗಾಂವಿಗೆಯ ಮೇಲಾಳಿಕೆ ಎಂದರೆ ಆಡಳಿತ ನೋಡಿಕೊಳ್ಳುವುದು ಎಂದರ್ಥ. ಶ್ರೀಜಾಕಲದೇವಿ ತ್ರಿಭೋಗಾಭ್ಯಂತರ ಸಿದ್ಧಿಯಿಂದಾಳುತ್ತಿದ್ದಳು.

**ಅಲಂದೆ ಸಾಸಿರ**

ಒಂದು ಕಾಲದ ಚರಿತ್ರೆ ಅಥವಾ ಇತಿಹಾಸವನ್ನು ಅಧ್ಯಯನ ಮಾಡಲು ಆಯಾ ಕಾಲದ ಘಟನೆಗಳೇ ಪ್ರಮುಖ ಆಧಾರಗಳು. ಅವುಗಳಲ್ಲಿ ಶಿಲ್ಪಕಲೆ, ಶಾಸನ, ನಾಣ್ಯ ಮತ್ತು ಅಳಿದುಳಿದ ಅವಶೇಷಗಳೆಲ್ಲವೂ ಇತಿಹಾಸಕ್ಕೆ ಪೂರಕವಾದ ಅಂಶಗಳಾಗಿವೆ. ಅಂಥಹ ಸಾಂದರ್ಭಿಕ ಅಂಶಗಳೆಲ್ಲ ಆಳಂದ ತಾಲೂಕಿನ ಇತಿಹಾಸವನ್ನು ಅರ್ಥೈಸಿಕೊಳ್ಳುವಲ್ಲಿ ಅಂದಿನ ಶಾಸನಗಳು ಇಂದಿಗೂ ಪ್ರಸ್ತುತವಾಗಿವೆ.

ಈಗಿನ ಕಲಬುರ್ಗಿ ಜಿಲ್ಲೆಯ ತಾಲೂಕಿನ ಮುಖ್ಯ ಸ್ಥಳವಾಗಿರುವ ಆಳಂದೆ ಗ್ರಾಮವೇ ಹಿಂದೆ ಅಲಂದೆ ಸಾಸಿರ (ಕಲ್ಲರಳಿ ಹೂವಾಗಿ;೨೦೦೦;ಪು.೬೩) ವಿಭಾಗದ ರಾಜಧಾನಿಯಾಗಿತ್ತು. ಈ ವಿಭಾಗವು ಕಲಬುರ್ಗಿಗೆ ಸಂಬಂಧಿಸಿದ ನಾಡಾಗಿದ್ದರಿಂದ, ಇಲ್ಲಿನ ಶಾಸನಗಳನ್ನು ಅವಲೋಕಿಸಿದಾಗ ಇತಿಹಾಸ ಕಾಲದಿಂದಲೇ ಅಲಂದೆ ಸಾಸಿರ ನಾಡೆಂದು ಗುರುತಿಸಲ್ಪಟ್ಟಿತ್ತು ಎಂಬುದು ಸುಸ್ಪಷ್ಟ. ಸಾಸಿರ ಎಂದರೆ ೧೦೦೦ ಹಳ್ಳಿಗಳಿಂದ ಕೂಡಿದ ಭಾಗ ಎಂದರ್ಥ. ಇದು ಆಳಂದ, ಅಫಜಲಪುರ, ಚಿಂಚೋಳಿ ಹಾಗೂ ಚಿತ್ತಾಪುರ ತಾಲೂಕಿನ ಕೆಲ ಭಾಗಗಳನ್ನು ಒಳಗೊಂಡಿತ್ತು. ಕಲ್ಯಾಣ ಚಾಳುಕ್ಯರ ಪ್ರಮುಖ ಆಡಳಿತ ವಿಭಾಗಗಳಲ್ಲಿ ಇದು ಮಹತ್ವದ ಆಡಳಿತ ಕೇಂದ್ರವಾಗಿತ್ತು. ಆರನೆಯ ವಿಕ್ರಮಾದಿತ್ಯನ ಮಗನಾದ ಯುವರಾಜ ಮಲ್ಲಿಕಾರ್ಜುನನು ಈ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದನು. ಅದರಂತೆ ಈ ನಾಡಿಗೆ ಸೇರಿದ ತೆಂಗಳಿ ಸುತ್ತಲಿನ ಪ್ರದೇಶವು "ಖಾಂಡವ ಮಂಡಲವೆಂದು" ಹೆಸರಾಗಿತ್ತು. ಪುರಾಣ ಪ್ರಸಿದ್ಧ ಬಾಣರಸರು ಇಲ್ಲಿ ಆಳಿದ ವಿಷಯವನ್ನು (ಕ್ರಿ.ಶ.೧೧೬೨) ತೆಂಗಳಿ ಶಾಸನ ತಿಳಿಸುತ್ತದೆ. ಕಲ್ಯಾಣ ಚಾಳುಕ್ಯರ ನಂತರ ಕಲ್ಯಾಣದಲ್ಲಿ ಅಧಿಕಾರಕ್ಕೆ ಬಂದ ಕಲಚೂರಿಗಳ ಕಾಲಕ್ಕೂ ಈ ಪ್ರದೇಶ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿತ್ತು.

**ಅರಲು-೩೦೦**

ಅಲ್ಲೂರು ಎಂಬ ಈಗಿನ ಗ್ರಾಮವೇ ಹಿಂದಿನ ಅರಲು ಪ್ರಸಿದ್ಧ ಘಟಿಕಾಸ್ಥಾನವಾದ ನಾಗಾಯಿ (ಎ.ಪಿ.ಜಿ.ಎ.ಎಸ್.-೩.೧೦೫೮;ನಾಗಾಯಿ) ಅಲ್ಲದೆ ಹುಂದರ್ಕಿ, ಇಂಗಳಗಿ, ಪಲ್ಲಕರಂಟೆಗೆ ಪ್ರಸಿದ್ಧ

ಅಗ್ರಹಾರವಾಗಿದ್ದವು. ಈ ಗ್ರಾಮಗಳು ಅರಲು ೩೦೦ದಲ್ಲಿದ್ದವು. ಇಲ್ಲಿ ಹೈಹಯ ವಂಶದ ಸಾಮಂತರು ರಾಜ್ಯವಾಳಿದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಇಂಗಳಿಗಿಯ ಶಾಸನಗಳಲ್ಲಿ (ಜೆ.ಎಸ್.ಐ.ಎಸ್.ಜೆ.ಇ.;೧೯೯೧; ಇಂಗಳಗಿ) 'ಅಲ್ಮೂಂನೂಱಜಱೊಳಗಣಿಂ' ಎಂದಿದೆ. ಕಮರಡಗಿ ಶಾಸನದಲ್ಲಿ (ಹೆಚ್ &ಸಿ;೩೭;೧೧೦೪; ಕಮರಡಗಿ) ಅರಲು ಮುನ್ನೂರು ಬಳಿಯ ಕಮರಡಿಗಿ, ಹೀಗೆ ಚಿತ್ತಾಪುರ ತಾಲೂಕಿನ ಇಂಗಳಗಿ, ಕಮರಡಗಿ, ಗ್ರಾಮಗಳು ಅರಲು ೩೦೦ರ ವಿಭಾಗದಲ್ಲಿದ್ದವು.



**ಮನ್ನೆದಡಿ ಸಾಸಿರ ನಾಡು**

ಬೆಣ್ಣೆಯ ತೊರೆಯ ಉತ್ತರದ ಸಿಮಾವರ್ತಿಯಾದ ಈ ಪ್ರದೇಶದ ರಾಜಧಾನಿ ಕಾಳುಗೆ ಮುಖ್ಯ ಪಟ್ಟಣವಾಗಿತ್ತೆಂದು ಡಾ.ವಿ.ಎಸ್.ಕುಲಕರ್ಣಿ (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨; ಪು.೧೧೪)ಅವರು ಅಭಿಪ್ರಾಯ ಪಟ್ಟಿದ್ದಾರೆ. ಬಾಣ ವಂಶಜರಲ್ಲಿ ವೀರ ಗೊಂಕನೆಂಬುವನು ಹಾಗೂ ಅವನ ವಂಶಜರು ಚಾಳುಕ್ಯ ದೊರೆಗಳ ಸಾಮಂತರಾಗಿ ಈ ಪ್ರದೇಶವನ್ನಾಳಿದ ಉಲ್ಲೇಖ ಶಾಸನಗಳಲ್ಲಿದೆ. ಕ್ರಿ.ಶ.೧೧೦೮ರ ತೆಂಗಳಿ ಶಾಸನದಲ್ಲಿ ತ್ರಿಭುವನಮಲ್ಲನ ರಾಣಿ ಮೈಳಾಲದೇವಿ ಮನ್ನದಡಿ ೩೦೦ನ್ನು ಆಳುತ್ತಿದ್ದಳೆಂದಿದೆ. ಇದು ಅಳಂದೆ ಸಾಸಿರದ ಉಪವಿಭಾಗವಾದ ಗೊಂಕನಾಡುನೂರಿಪ್ಪತ್ತ (ಆರನೆ ವಿಕ್ರಮಾದಿತ್ಯನ ಶಾಸನಗಳು;೧೯೯೨; ಪು.೯೫) ಗ್ರಾಮವಾಗಿದೆ. ಕಲಬುರ್ಗಿ ಜಿಲ್ಲೆಯ ಚಿತ್ತಾಪುರ, ಚಿಂಚೋಳಿ ತಾಲೂಕುಗಳ ಕೆಲವು ಗ್ರಾಮಗಳಾದ ತೆಂಗಳಿ, ಕೊರವಾರ ಇವು ಮನ್ನೆದಡಿ ಸಾಸಿರ ವಿಭಾಗದಲ್ಲಿದ್ದವು. ಗೊಂಕನಾಡು ಬಾಣ ವಂಶದವರು ಆಳುತ್ತಿದ್ದರು. ತೆಂಗಳಿ, ಕಾಳಗಿಗಳು ಈ ನಾಡಿನ ಪ್ರಮುಖ ಅಗ್ರಹಾರಗಳೆನ್ನಿಸಿದ್ದವು. ತೆಂಗಳಿ ೭೦, ಮನ್ನೆದಡಿ೧೦೦೦ದ ಉಪವಿಭಾಗವಾಗಿದ್ದು ಇದರ ಉಲ್ಲೇಖ ಕಾಳಗಿ (ಹೆಚ್&ಸಿ,೬೩,೧೧೭೦;ಕಾಳಗಿ) ಶಾಸನದಲ್ಲಿ ತೆಂಗುಳಿಯಪ್ಪತ್ತರ ಬಳಿಯವಾಡxxx ಎಂದು ಉಲ್ಲೇಖಿಸುತ್ತದೆ.



**ಅಟ್ಟಳೆನಾಡು**

ಪಶ್ಚಿಮ ಚಾಳುಕ್ಯರ ರಾಜಧಾನಿ ಕಲ್ಯಾಣ ಐತಿಹಾಸಿಕ ಒಂದು ಸ್ಥಳವಾಗಿತ್ತು. ಶಿವಶರಣರ ಆಂದೋಲನದ ಪ್ರಮುಖ ಕಾರ್ಯಕ್ಷೇತ್ರ ಕಲ್ಯಾಣ ಅಥವಾ ಜಯನ್ತಿಪುರದ ನೆಲೆವೀಡು ಇಂದಿನ ಬೀದರ. ಜಿಲ್ಲೆಯಲ್ಲಿದೆ. ಈ ಜಿಲ್ಲೆಯು ಅಂದಿನ ಮುಖ್ಯ ಐತಿಹಾಸಿಕ ಘಟಕಗಳಲ್ಲಿ ಅಟ್ಟಳೆನಾಡು ಒಂದು.

ಚಾಳುಕ್ಯ ವಿಕ್ರಮಾಂಕದೇವನಿಂದ ಸನ್ಮಾನಿತನಾದ ವಿಜ್ಞಾನೇಶ್ವರನು ಅಟ್ಟಳೆನಾಡಿನ ಮಾಸೆಯಮಡು ಸ್ಥಳದವನೆಂಬ ಸಂಗತಿಯನ್ನು ಮರತೂರ ಶಾಸನ ತಿಳಿಸುತ್ತದೆ. ವಿಜ್ಞಾನೇಶ್ವರನ ಮಕ್ಕಳಲ್ಲಿ ಕೆಲವರು ಪೆರ್ಗ್ಗಡೆಗಳಾಗಿ ಗೊಂಕನಾಡಿನ ಮರತೂರದಲ್ಲಿ (ಹೈದ್ರಾಬಾದ್ ಭಾಗದ ಕನ್ನಡ ಶಿಲಾಶಾಸನಗಳು;೧೯೯೨; ಪು.೧೫) ಬಂದು ನೆಲೆಸಿದ್ದರು. ರಾಜಪರಿವಾರದಲ್ಲಿ ಪಿರಿಯರಸಿ, ಇತರೆ ರಾಣಿಯರು ಇಲ್ಲವೆ ರಾಜಕುಮಾರರು ಆಳ್ವಿಕೆ ಮಾಡಿದ್ದು ಕಾಣುತ್ತೇವೆ. ಉದಾ–ಅಳಂದೆ–೧೦೦೦ನ್ನು ವಿಕ್ರಮಾದಿತ್ಯ ರಾಣಿ ಚಂದಲದೇವಿ ಅಳುತ್ತಿದ್ದಳು. ಅಗ್ರಹಾರಗಳ ಆಳ್ವಿಕೆ ಮಹಾಜನರಿಂದ ನಡೆಯುತ್ತಿತ್ತು. ಉದಾಹರಣೆಗೆ ಇಂಗುಣಿಗೆ ಅಗ್ರಹಾರವನ್ನು ವಿಕ್ರಮಾದಿತ್ಯನ ರಾಣಿ ಜಾಕಲದೇವಿ ಆಳಿದರೆ, ದಿಗ್ಗಾವಿಗೆ ಅಗ್ರಹಾರವನ್ನು ವಿಕ್ರಮಾದಿತ್ಯನ ರಾಣಿ ಮಲೆಯಮತಿದೇವಿ ಆಳಿದ್ದನ್ನು ಇಲ್ಲಿಯ ಶಾಸನಗಳು ತಿಳಿಸುತ್ತವೆ. ಈ ಭಾಗದಲ್ಲಿನ ಶಾಸನಗಳ ಬಗ್ಗೆ ಇನ್ನು ಹೆಚ್ಚಿನ ರೀತಿಯಲ್ಲಿ ಅಧ್ಯಯನ ಕಾರ್ಯ ನಡೆದರೆ ರಾಜಕೀಯ ವಿಭಾಗಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

* * * * *

# ಅಧ್ಯಾಯ – ೪
# ಸಾಮಾಜಿಕ ವ್ಯವಸ್ಥೆ

೪.೧ ಸ್ತ್ರೀಯರ ಸ್ಥಾನಮಾನ
೪.೨ ವರ್ಣಗಳು
೪.೩ ಇತರ ವರ್ಗಗಳು : ಜಾತಿಗಳು

ಕುಟುಂಬವು ಸಮಾಜದ ಒಂದು ಅವಿಭಾಜ್ಯ ಅಂಗ. ಇಂತಹ ಹಲವು ಕುಟುಂಬಗಳು ಸೇರಿ ಒಂದು ಸಮಾಜವಾಗಿರುವುದರಿಂದ ಸಮಾಜವೆನ್ನುವುದು ಕುಟುಂಬದ ದೊಡ್ಡ ರೂಪ. ಕುಟುಂಬ ಸಮಾಜದ ಚಿಕ್ಕ ಘಟಕ. ಆದರೆ ಕುಟುಂಬ ಮತ್ತು ಸಮಾಜಗಳಲ್ಲಿರುವುದು ಗಾತ್ರ ವ್ಯತ್ಯಾಸವೆ ಹೊರತು ಗುಣವ್ಯತ್ಯಾಸವಲ್ಲ. (ಇತಿಹಾಸ ದರ್ಶನ-೮;೧೯೯೩;ಪು.೧೪) ಈ ಹಿನ್ನಲೆಯಲ್ಲಿ ಕುಟುಂಬದ ಪ್ರಾಮುಖ್ಯತೆ ಪರಸ್ಪರ ಪ್ರೀತಿ, ಪ್ರೇಮದಿಂದ ಕೂಡಿ ಬಾಳುವುದು. ಇಂತಹ ಬದುಕಿಗೆ ಮಹಿಳೆ ಸಿದ್ಧಳಾಗಬೇಕಾಗುತ್ತದೆ. ಆದರೆ ಕೌಟುಂಬಿಕ ವಿಷಯವನ್ನು ಬಿಟ್ಟರೆ ಸಾಮಾಜಿಕ ಕ್ಷೇತ್ರಗಳಲ್ಲಿ ಅವಕಾಶಗಳು ತೀರ ವಿರಳ. ಹೀಗಿರುವಾಗಲೂ ಉನ್ನತ ವರ್ಗದ ಮಹಿಳೆಯರು ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದುಂಟು. ಆದರೂ ಮಹಿಳೆ ಈ ಸೀಮಿತ ಪರಿಸರವನ್ನು ಮೀರಿ ಜೀವನದಲ್ಲಿ ಹೆಚ್ಚಿನದನ್ನು ಸಾಧಿಸಬೇಕೆಂಬ ಛಲ ಹೊಂದಿದ್ದಾಳೆ.

ಪುರಾತನ ಕಾಲದಿಂದಲೂ ಕಲಬುರ್ಗಿ ಜಿಲ್ಲೆ ಸಾಂಸ್ಕೃತಿಕ ಪರಂಪರೆಯ ಕೇಂದ್ರವಾಗಿದೆ. ಸಾಮಾಜಿಕ ಜೀವನ ಅರಿಯಬೇಕಾದರೆ ಅಲ್ಲಿನ ಕೌಟುಂಬಿಕ ವೈವಾಹಿಕ, ಜೀವನದ ಚಿಂತನೆ ಮಾಡಬೇಕಾಗುತ್ತದೆ. ಸಾಮಾಜಿಕ ಜನಜೀವನ ಅವಿಭಕ್ತ ಕುಟುಂಬದಿಂದ ಕಂಡು ಬರುತ್ತದೆ. ಸಾಂಸ್ಕೃತಿಕ ಸಂಪ್ರದಾಯ ಮುಂದುವರೆಸಿಕೊಂಡು ಹೋಗುವುದರಲ್ಲಿ ಅವಿಭಕ್ತ ಕುಟುಂಬಗಳು ಮಹತ್ವದ ಪಾತ್ರ ವಹಿಸುತ್ತವೆ. ಆದರೆ ಇಂತಹ ಕುಟುಂಬಗಳು ಪ್ರಸ್ತುತ ದಿನದಲ್ಲಿ ಮರೆಯಾಗುತ್ತಲಿರುವುದು ಶೋಚನೀಯ ಸಂಗತಿ.

ಪುರುಷ ಮತ್ತು ಸ್ತ್ರೀ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ವಿರುದ್ಧವಾಗಿದ್ದರೂ, ಪರಸ್ಪರ ಪೂರಕವಾಗಿವೆ. ಸ್ತ್ರೀ ತನ್ನ ಪಾತ್ರವನ್ನು ವಿವಿಧ ರೀತಿಯಲ್ಲಿ ನಿರ್ವಹಿಸುತ್ತಾಳೆ. ತಂದೆಗೆ ಮಗಳಾಗಿ, ಗಂಡನಿಗೆ ಹೆಂಡತಿಯಾಗಿ, ಮಗುವಿಗೆ ತಾಯಿಯಾಗಿ, ಸಮಾಜದಲ್ಲಿ ಒಬ್ಬ ಉನ್ನತ ಗೃಹಿಣಿ ಎನಿಸಿಕೊಳ್ಳುತ್ತಾಳೆ. ಅನಾದಿ ಕಾಲದಲ್ಲಿ ಸ್ತ್ರೀಗೆ ಸಮಾಜದಲ್ಲಿ ದೊರೆತ ಅವಕಾಶಗಳು ತೀರ ವಿರಳ. ಅವರಿಗೆ ಉನ್ನತ ಸ್ಥಾನ ದೊರಕದೆ ಇದ್ದರು, ಸಮಾಜದಲ್ಲಿ ಅವರನ್ನು ತ್ಯಾಜ್ಯವಾಗಿ ಕಂಡ ಯಾವ ಉದಾಹರಣೆಗಳು ನಮ್ಮ ಶಾಸನಗಳಲ್ಲಿ ಕಂಡುಬರುವುದಿಲ್ಲ. ಭಾರತದ ಹಿನ್ನಲೆಯಲ್ಲಿ ಸ್ತ್ರೀ ಸಮಾಜದ ಮೇಲೆ ಬೆಳಕನ್ನು ಚೆಲ್ಲುವ ಗ್ರಂಥಗಳು ಮೂಡಿ ಬಂದಿವೆ, ಹೊರತು ಕರ್ನಾಟಕ ಕೇಂದ್ರವಾಗಿಟ್ಟುಕೊಂಡು ಬರೆದ ಸಮಗ್ರ ಗ್ರಂಥ ಒಂದೂ ಈವರೆಗೆ ಮೂಡಿ ಬಂದಿಲ್ಲವೆಂದೇ ಹೇಳಬಹುದು. ಕೆಲ ಮಹಿಳೆಯರನ್ನು ಕುರಿತು ಬರೆದ ಕೃತಿಗಳು ಹುಟ್ಟಿಕೊಂಡಿದ್ದರೂ ಇವು ಇತಿಹಾಸದ ಹಿನ್ನಲೆಯಲ್ಲಿ ಬರೆದ ಸಾಹಿತ್ಯ ಕೃತಿಗಳಾಗಿವೆ. ಹೀಗಾಗಿ ಚಿದಾನಂದ ಮೂರ್ತಿ ಅವರ ಗ್ರಂಥ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ಸ್ತ್ರೀಯರನ್ನು ಕುರಿತು ಚರ್ಚಿಸಿದ್ದಾರೆ.

**ವಿದ್ಯಾಭ್ಯಾಸ**

ಕಳೆದ ಶತಮಾನಗಳಿಂದ ಮಹಿಳೆಯರ ಅಸಾಧಾರಣ ಸಚ್ಚಾರಿತ್ರ್ಯ ಮತ್ತು ಕಲಿತನಗಳ ಬಗ್ಗೆ ಸಾಕಷ್ಟು ಉದಾಹರಣೆಗಳಿವೆ. ಇದು ಕರ್ನಾಟಕದ ಸಂಸ್ಕೃತಿಯ ಶ್ರೀಮಂತ ಪರಂಪರೆಗೆ ಸಾಕ್ಷಿಯಾಗಿದೆ. ಅನಾದಿ ಕಾಲದಿಂದಲೂ ಸ್ತ್ರೀ ಉನ್ನತ ಸ್ಥಾನ ಹೊಂದಿದ್ದಳು. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತ್ತಿತ್ತು. ಪ್ರಾಚೀನ ಕರ್ನಾಟಕ ಅನೇಕ ಸುಶಿಕ್ಷಿತ ಮತ್ತು ಸುಸಂಸ್ಕೃತ ಮಹಿಳೆಯರು ಲೌಕಿಕ ಸುಖ ಸಂತಸಗಳನ್ನು ತೊರೆದು ತಮ್ಮ ದೈವಕುಲಗಳಿಗೆ ಶರಣು ಹೋಗಿ, ಮುಕ್ತಿ ಸಾಧಿಸಿದ್ದರು. ಉನ್ನತ ವರ್ಗದ ಮಹಿಳೆಯರಲ್ಲಿ ಶಿಕ್ಷಣ ಸಾಮಾನ್ಯ ಸಂಗತಿಯಾಗಿತ್ತು. ಅವರಿಗೆ ಗಣಿತ, ವ್ಯಾಕರಣ, ಕಾವ್ಯ, ಛಂದಸ್ಸು, ಮತ್ತು ಕುಶಲ ಕಲೆಗಳಲ್ಲಿ ಶಿಕ್ಷಣ ಕೊಡಲಾಗುತ್ತಿತ್ತು. ರಾಣಿಯರು ಹಾಗೂ ರಾಜಕುಮಾರಿಯರನ್ನು ಶಾಸನಗಳಲ್ಲಿ ಮಹಾ ವಿದುಷಿಯರು, ಕವಿಗಳ ಮತ್ತು ವಿದ್ವಾಂಸರ ಆಶ್ರಯ ದಾತಯರೆಂದು ವರ್ಣಿಸಲಾಗಿದೆ. (Economic conditions in south India;P.410) ಮಹಿಳೆಯರ ವಿದ್ಯಾಭ್ಯಾಸವು ಶಾಸ್ತ್ರಗಳನ್ನೊಳಗೊಂಡಿದ್ದರೂ ಮುಖ್ಯವಾಗಿ ಕಲೆಗಳ ಕಡೆ ಹೆಚ್ಚು ಒಲವು ಇದ್ದಿತು. ಇತರ ಸಾಮಾನ್ಯ ವರ್ಗದ ಸ್ತ್ರೀಯರು ಅವಿದ್ಯಾವಂತರಾಗಿದ್ದರು. ಈ ಸ್ತ್ರೀಯರಲ್ಲಿ ಕೆಲವರು ದೇವದಾಸಿಯರು, ಗೀತೆ, ನರ್ತನ ಮುಂತಾದ ಕಲೆಗಳಲ್ಲಿ ಪರಿಣಿತರಾಗಿದ್ದರು. ಕ್ರಮೇಣ ಸ್ತ್ರೀಯರು ವಿದ್ಯಾಭ್ಯಾಸಕ್ಕೆ ಅನರ್ಹರೆಂದೂ ಅವರು ತಮ್ಮ ಜೀವನದುದ್ದಕ್ಕೂ ಪೋಷಕರಾಗಿಯೇ ಬಾಳಬೇಕಾಯಿತು.

ಸಾಮಾನ್ಯ ಮಹಿಳೆಯ ಜೀವನ ಗಂಡ, ಮಕ್ಕಳು, ಮನೆಯವರ ಸುಖವೇ ಅವಳ ಮುಖ್ಯ ಗುರಿಯಾಗಿತ್ತು. ಅವಳು ಸ್ವತಂತ್ರವಾಗಿರಲು ಅವಕಾಶ ಇರಲಿಲ್ಲ. ಶ್ರೀಮಂತರು, ರಾಜರ ಹೆಂಡಂದಿರು, ಅವರ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಆದರೆ ಸಾಮಾನ್ಯವಾಗಿ ಪ್ರಾಚೀನ ಕರ್ನಾಟಕ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಸ್ತ್ರೀಯರು ಕೂಡ ದೊಡ್ಡ ವಿದ್ವಾಂಸರು ಆಗಿದ್ದರು ಎನ್ನುವುದಕ್ಕೆ ಆಧಾರಗಳಿಲ್ಲ. ವಿದ್ಯಾಭ್ಯಾಸ, ನರ್ತನ, ಸಂಗೀತ ಮುಂತಾದ ಕಲೆಗಳಿಗೆ ಹೆಚ್ಚು ಪ್ರಾಧಾನ್ಯವಿದ್ದಂತೆ ಸ್ತ್ರೀಯರು ಮುಖ್ಯವಾಗಿ ರಾಣಿ ವಾಸದವರು. ಆಡಳಿತದಲ್ಲಿ ಭಾಗವಹಿಸುತ್ತಿದ್ದರಲ್ಲದೆ, ದಾನ ಧತ್ತಿಗಳನ್ನು ನೀಡುತ್ತಿದ್ದರು. ಕಲಬುರ್ಗಿ ಜಿಲ್ಲೆಯ ಶಾಸನಗಳಲ್ಲಿ ಕಂಡು ಬರುವ ಸ್ತ್ರೀಯರು ಸಮಾಜದಲ್ಲಿ ತಮ್ಮದೇ ಆದ ಸ್ಥಾನವನ್ನು ಹೊಂದಿದ್ದರು. ಹನ್ನೆರಡನೆಯ ಶತಮಾನದಲ್ಲಿ ವಿದ್ಯಾವಂತರಾದ ಪುರುಷರು ಮೂವತ್ತರಷ್ಟಾದರೆ, ಸ್ತ್ರೀಯರು ಹತ್ತರಷ್ಟಿತ್ತೆಂದು ಡಾ॥ಅಳ್ತೇಕರರು ಊಹಿಸುತ್ತಾರೆ. (ರಾಷ್ಟ್ರಕೂಟರು ಮತ್ತು ಅವರ ಕಾಲ;ಪು.೨೨೦) ಒಟ್ಟಿನಲ್ಲಿ ಅಕ್ಷರ ವಿದ್ಯೆಯಲ್ಲಿ ಸಿಗಲಾರದ ಸ್ಥಾನವನ್ನು ಕೆಲವರು ಕಲೆಯಲ್ಲಿ ತುಂಬಿಕೊಂಡಿದ್ದರು.

**ಬಹು ಪತ್ನಿತ್ವ**

ಬಹು ಪತ್ನಿತ್ವ ಪದ್ಧತಿ ಅನಾದಿ ಕಾಲದಿಂದಲೂ, ಅದರಲ್ಲೂ ರಾಜ ಮನೆತನದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಇದಕ್ಕೆ ಸಮಾಜದಲ್ಲಿ ಮನ್ನಣೆ ಇತ್ತು. ಜನ ಸಾಮಾನ್ಯರಲ್ಲಿ ವಿರಳವಾಗಿತ್ತು. ರಾಜನ ಪತ್ನಿಯರಲ್ಲಿ ಹಿರಿಯವಳೇ 'ಅಗ್ರಮಹಿಷಿ' ಅಥವಾ 'ಪಿರಿಯರಸಿ' ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನಿಗೆ ೧೬ ಜನ ರಾಣಿಯರು. ಅವರಲ್ಲಿ 'ಮಲಯಮತಿ' ಮಹಾದೇವಿಯನ್ನು 'ಪಿರಿಯರಸಿ' ಪಟ್ಟಮಹಾದೇವಿ ಎಂದು ಕರೆಯಲಾಗಿದೆ. (S.I.I.,IX;88;1034 A.D.)ರಾಜನೊಂದಿಗೆ ಸುಖದಿಂದ

ಇರುತ್ತಿದ್ದ ಇವರಲ್ಲಿ ಪಿರಿಯರಸಿ ಪಟ್ಟ ಮಹಾದೇವಿ. ಇವಳು ರಾಜನ ಜೊತೆಯಲ್ಲಿ ಅರಮನೆಯಲ್ಲಿಯೂ ಇರುತ್ತಿದ್ದಳು. ಇನ್ನುಳಿದ ರಾಣಿಯರನ್ನು ರಾಜಕೀಯದಲ್ಲಿ ತೊಡಗುವಂತೆ ಮಾಡಿ ಅವರಿಗೆ ಕೆಲ. ಪ್ರದೇಶಗಳನ್ನು ಆಳ್ವಿಕೆಮಾಡಲು ಬಿಟ್ಟು ಕೊಡುತ್ತಿದ್ದನು. ಉದಾಹರಣೆಯಾಗಿ ಹೇಳುವುದಾದರೆ ಪಟ್ಟ ಮಹಾದೇವಿ ಮಲಯಮತಿ ದೇವಿ ಅಗ್ರಹಾರ ದಿಗ್ಗಾಂವಿಯ ಮೇಲಾಳ್ವಿಕೆಯನ್ನು (ಕ್ರಿ.ಶ.೧೧೦೭ ರ ಶಾಸನ) ಮಾಡುತ್ತಿದ್ದಳು ಹಾಗೂ ಜಾಕಲದೇವಿ ಇಂಗುಣಿಗೆಯ ಮೇಲಾಳ್ವಿಕೆ ಮಾಡುತ್ತಿದ್ದು, ಅರಲು೩೦೦ ಈಕೆಯ ಆಡಳಿತಕ್ಕೆ ಒಳಪಟ್ಟಿತು. (ಕ್ರಿ.ಶ.೧೦೯೪) ಅಗ್ರಹಾರ ಮತ್ತು ಭತ್ತ ಗ್ರಾಮಗಳನ್ನು ಅವರು ನೋಡಿಕೊಳ್ಳುತ್ತಿದ್ದಳು. ಆದರೆ ವಾಸ್ತವವಾಗಿ ರಾಣಿಯರು ವಿಭಾಗಗಳನ್ನು ಆಳುತ್ತಿರಲಿಲ್ಲ. ಇವುಗಳನ್ನು ಮಹಾಮಂಡಳೇಶ್ವರರು ನೋಡಿಕೊಳ್ಳುತ್ತಿದ್ದರು.

**ಸ್ತ್ರೀಯರ ಸ್ಥಾನಮಾನ**

ಕಲಬುರ್ಗಿ ಜಿಲ್ಲೆಯ ಶಾಸನಗಳಲ್ಲಿ ಸ್ತ್ರೀಯರ ಬಗ್ಗೆ ಹೆಚ್ಚಿನ ವಿವರಣೆಗಳು ಕಂಡುಬರುವುದಿಲ್ಲವಾದರೂ, ಶಾತವಾಹನರ ಕಾಲದಿಂದಲೂ ಸ್ತ್ರೀಯರ ಸ್ಥಾನವನ್ನು ಪರಿಗಣಿಸಿದರೆ ಅರಸರ ಹಿಂದಿನ ಹೆಸರಿನಲ್ಲಿ ತಾಯಿ ಹೆಸರು ಇದೆ. ಗೌತಮಿ ಪುತ್ರ ಶಾತಕರ್ಣಿ ಎಂಬ ಹೆಸರಿನ ಉಲ್ಲೇಖ ನಾಸಿಕ ಶಾಸನ ತಿಳಿಸುತ್ತುದೆ. ಅಂದರೆ ಇದರಿಂದ ಸ್ತ್ರೀ ಸಮಾಜದಲ್ಲಿ ಉನ್ನತ ಸ್ಥಾನ ಪಡೆದಿದ್ದಳು. ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿ ಅಲಂದೆ ೧೦೦೦ವನ್ನು ಆಳುತ್ತಿದ್ದಳೆಂದು ಹುಣಸಿಹಡಗಲಿ ಕ್ರಿ.ಶ.೧೦೯೯ರ ಶಾಸನ ತಿಳಿಸುತ್ತದೆ. ಪಿರಿಯರಸಿ ಎಂದರೆ ಹಿರಿಯ ರಾಣಿ ಎಂದರ್ಥ. ಇವಳು ಮೊದಲು ವರಸಿದ ಹೆಂಡತಿಯಾಗಿದ್ದು, ಪಿರಿಯರಸಿ ಪಟ್ಟ ಮಹಾದೇವಿಯೆನಿಸುತ್ತಿದ್ದಳು.

ಇದುವರೆಗೂ ಸಂಶೋಧಕರು ಆರನೆಯ ವಿಕ್ರಮಾದಿತ್ಯನ ೨೨ ಜನ ರಾಣಿಯರನ್ನು ಗುರುತಿಸಿದ್ದಾರೆ. ಹಾಗೂ ಡಾ॥ ಚನ್ನಕ್ಕ ಎಲಿಗಾರರು 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಎಂಬ ಗ್ರಂಥದಲ್ಲಿ ಹದಿನಾರು ಜನ ರಾಣಿಯರೆಂದು ಹೇಳಿ ಹನ್ನೊಂದು ಜನ ರಾಣಿಯರನ್ನು ಹೆಸರಿಸಿದ್ದಾರೆ. ಆದರೆ ತದನಂತರ ಇಪ್ಪತ್ತು ಜನ ರಾಣಿಯರ ಹೆಸರನ್ನು ಹೇಳಿದ್ದಾರೆ. ನಂತರ ಇದೇ ಸಂಶೋಧನಾ ಕಾರ್ಯಕ್ಕೆ ಕೈ ಹಾಕಿದ ಡಾ॥ ಜೆ.ಎಂ.ನಾಗಯ್ಯನವರು 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಎಂಬ ಗ್ರಂಥದಲ್ಲಿ ಹತ್ತೊಂಬತ್ತು ಜನ ರಾಣಿಯರನ್ನು ಹೆಸರಿಸಿದ್ದಾರೆ.

**ಚಂದಲದೇವಿ**

ಡಾ. ಚನ್ನಕ್ಕ ಎಲಿಗಾರ ಅವರು ತಮ್ಮ ಕೃತಿಯಲ್ಲಿ ವಿಕ್ರಮಾದಿತ್ಯ ತನ್ನ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿ ಮತ್ಸರ ತಪ್ಪಿಸುತ್ತಿದ್ದನು ಎಂದಿದ್ದಾರೆ. ಆದರೂ ಕೆಲ ರಾಣಿಯರಲ್ಲಿ ಚಂದಲದೇವಿ ಸವತಿ ಶಿರೋವಜ್ರ ಮುಷ್ಠಿ ಎಂಬ ಪ್ರಶಸ್ತಿಯನ್ನು ಹೊಂದಿದ್ದಳು ಎಂಬುವುದು ಸವತಿಯರ ವಿಷಯವಾಗಿ ಇವಳಿಗಿದ್ದ ದರ್ಪ ಸೂಚಿಸುತ್ತದೆ. ರಾಜಕೀಯದತ್ತ ಅವರ ಮನಸ್ಸು ಕೇಂದ್ರಿಕರಿಸಲು ಕೆಲ ಪ್ರದೇಶಗಳನ್ನು ಆಳ್ವಿಕೆಮಾಡಲು ನೇಮಿಸಿದ್ದನು. ಇದು ಈತನ ರಾಜಕೀಯ ನಿಪುಣತೆ ಎತ್ತಿ ತೋರಿಸುತ್ತದೆ. ಒಂದರ್ಥದಲ್ಲಿ ಸಾಂಸಾರಿಕ ನೆಮ್ಮದಿ ಹಾಗೂ ರಾಜಕೀಯ ಭದ್ರತೆಗೆ ಕಾರಣವಾಗಿತ್ತು. ರಾಜ ಅಗ್ರಹಾರಗಳಲ್ಲಿ ನೇಮಿಸಲು ಕಾರಣ ರಾಜಕೀಯ ಭದ್ರತೆಗಿಂತ, ರಾಣಿಯ ಭದ್ರತೆ ಪ್ರಮುಖ

ಕಾರಣವಾಗಿದ್ದಿತ್ತು. ಅಗ್ರಹಾರ ಧಾರ್ಮಿಕ ಹಾಗೂ ರಕ್ಷಣೆಯ ಪ್ರಾಚೀನ ಕೇಂದ್ರಗಳಾಗಿದ್ದವು. ಇಂತಹ ಸ್ಥಳಗಳಲ್ಲಿ ರಾಣಿಯರನ್ನು ಇಡಲಾಗುತ್ತಿತ್ತು. ಇದರಿಂದ ಅರಿಷ್ಟಡ್ವರ್ಗಗಳನ್ನು ನಿಯಂತ್ರಿಸುವ ಶಕ್ತಿ ಅಗ್ರಹಾರಗಳದ್ದಾಗಿತ್ತು. ಇಲ್ಲಿ ಯಾರೇ ಬಂದರೂ ದಾನ ದತ್ತಿಗಳನ್ನು ನೀಡುತ್ತಿದ್ದರು. ಇದರಿಂದ ಇವರ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಭಾಗವಹಿಸಿ ಅಲೌಕಿಕದ ಕಡೆಗೆ ಹೆಚ್ಚು ಚಿಂತಿಸುತ್ತಿದ್ದರು. ಈ ಕಾರಣಗಳಿಗಾಗಿ ರಾಣಿಯರು ಅಗ್ರಹಾರದ ಆಡಳಿತ ನೋಡಿಕೊಳ್ಳುತ್ತಿದ್ದರೇ ವಿನಃ ರಾಜಕೀಯದತ್ತ ಮನಸ್ಸು ತೊಡಗಿಸಿ ಕಾರ್ಯೋನ್ಮುಖರಾಗಿ ಮಾಡುವುದಕ್ಕಲ್ಲ.

ಹುಣಸಿಹಡಗಲಿ ಕ್ರಿ.ಶ.೧೧೪೯ರ ಶಾಸನದಲ್ಲಿ ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ। ದ್ವಿತೀಯಲಕ್ಷ್ಮೀ ಸಮಾನೆ। ಕಲಹಂಸಯಾನೆ। ರಾಯರ್ಝುಳಪ್ಪಕವ್ವಿ ಕುಜಸಮಾಲಿಂಗಿತ ಕಲ್ಪಲತೆ। ಸಾಮಂತ ಸೀಮಂತಿನೀ ಪರಿವ್ರಿತೆ। ದುಷ್ಟದರ್ಪ್ಪಿಷ್ಠ ಸವತೀ ಶಿರೋವಜ್ರಮುಷ್ಠಿ। ದೀನಾನಾಥಕಥಕ ವೈತಾಳಿಕ ಸುವರ್ಣ್ನವ್ರಿಷ್ಠಿ। ವಂದಿ ಚಿಂತಾಮಣಿ। ಅಂತಃಪುರ ಚೂಡಾಮಣಿ। ಮಲಪವಿದ್ಯಾಧರಿ। ಸಕಳಕಳಾಧರಿ। ರಾಯಮನೋಜರಾಜರತಿ। ಅಡಬಳಸರಸ್ವತಿ। ನೃತ್ಯವಿದ್ಯಾಧರಿ। ಸವತೀ ಗಜಕೇಸರಿ। ಕಲಿಕಾಲಸರಸ್ವತಿ। ಶ್ರೀಮತ್ರಿಭುವನಮಲ್ಲದೇವ ವಿಶಾಳವಕ್ಷಸ್ಥಳ ನಿವಾಸಿಯರಪ್ಪ ಶ್ರೀಮತ್ಪಿರಿಯರಸಿ ಚಂದಲದೇವಿಯರು ಎಂದು ಕ್ರಿ.ಶ.೧೧೪೯ರ ಹುಣಸಿಹಡಗಲಿ ಶಾಸನದಿಂದ ಈಕೆಯ ಪ್ರಶಸ್ತಿಗಳು ತಿಳಿದು ಬರುತ್ತದೆ. ಕರಹಾಡ ಶಿಲಾಹಾರ ರಾಜಕುಮಾರಿ ಚಂದಲದೇವಿ ಯಾವ ದಾಖಲೆಗಳಲ್ಲಿಯೂ ಪಟ್ಟ ಮಹಾದೇವಿ ಎಂದು ಕರೆಯಿಸಿಕೊಳ್ಳುವುದಿಲ್ಲ. ಚಂದಲದೇವಿ ದತ್ತಿಯನ್ನು ಕೊಡುವುದರ ಮೂಲಕ ವಿದ್ಯಾಭ್ಯಾಸಕ್ಕೆ ನೆರವಾಗಿದ್ದಾಳೆ.

ಚಂದಲದೇವಿ ಕೆಲವು ಭತ್ತ ಗ್ರಾಮಗಳನ್ನು ಆಳುತ್ತಿದ್ದಳು. ದುಷ್ಟರ ನಿಗ್ರಹ, ಶಿಷ್ಟರ ರಕ್ಷಣೆ ಮಾಡುತ್ತಿದ್ದಳು. ಅಳಂದೆ ಸಾಸಿರದಲ್ಲಿ ತನ್ನ ಉಪಜೀವನಕ್ಕಾಗಿ ಕೊಟ್ಟ ಭತ್ತ ಗ್ರಾಮಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಳು. ಕೆಲ ಅಧಿಕಾರಿಗಳು ಈಕೆಯ ಪಾದಪದ್ಮೋಪ ಜೀವಿಗಳಾಗಿದ್ದರು. ಮಹಾಮಂಡಳೇಶ್ವರ ಬಿಬ್ಬರಸನು ಈಕೆಯ ಪಾದಪದ್ಮೋಪ ಜೀವಿಯಾಗಿದ್ದನು.

**ರಾಣಿ ಜಾಲಕದೇವಿ**

ಆರನೆಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿ ಇವಳು ವಿದ್ಯೆಯ ವಿವಿಧ ಕ್ಷೇತ್ರಗಳಲ್ಲದೆ ಆಡಳಿತ ಮತ್ತು ಯುದ್ಧ ವಿದ್ಯೆಗಳಲ್ಲಿ ಪರಿಣಿತಿಗಳಿಸಿದ್ದಳು. ಕ್ರಿ.ಶ.೧೦೯೪ರ ಇಂಗಳಗಿ ಗ್ರಾಮದ ತ್ರಿಭೋಗಾಭ್ಯಂತರ ಸಿದ್ದಿಯಿಂದ ಅರಲು-೩೦೦ರೊಳಗಿನ ಇಂಗಳಿಗಿಯಲ್ಲಿ ಆಳುತ್ತಿದ್ದಳು. ಇವಳು ಟಿಕ್ಕಾ ಎಂಬುವನ ಮಗಳಾಗಿದ್ದಳು. ಮೂಲತಃ ಜೈನ ಧರ್ಮದ ಅನುಯಾಯಿಯಾಗಿದ್ದಳು. ಈಕೆಯ ಗುಣ ವರ್ಣನೆ (ಕ್ರಿ.ಶ.೧೦೯೪) ಶಾಸನದಲ್ಲಿ

ಜನಕಜೆಯಂತೆ ಸಜ್ಜನ ಜನಸ್ತುತೆ ಪಾರ್ವ್ವತಿಯಂತೆ
ಜೀವಿತೇಶನೊಳವಿಕಳ್ಪ ಭಾವೆ ಧರೆಯಂತೆ ಧ್ರಿತಕ್ಷಮೆ
ರಂಭೆಯಂತೆ ರೂಪಿನ ನೆಲೆ, ಪೆಂಪುವೆತ್ತ
ಮರದೇನುವಿನಂತ ದಾನಿ ಕಾಮನಲಂತಿರಯ
ಪರಿಭಾವಿಸೆ ಜಾಕಲದೇವಿ ಧಾತ್ರಿಯೊಳ್॥

ಉಲ್ಲೇಖಿಸುತ್ತದೆ. ಶಾಸನದ ಕೆಲ ಸಾಲಿನ ಗದ್ಯಭಾಗದಲ್ಲಿ ಜಾಕಲದೇವಿಯ ಬಗ್ಗೆ ಅಲ್ಲಿ 'ಸಮಸ್ತ ನಿಪುರ ನಿತಾಂಬಿನಿ ಕದಂಬ ಚುಡಾಮಣಿ' ಎಂಬ ವಾಕ್ಯ ಇದೆ. ಅಂದರೆ ಸ್ತ್ರೀಯರಲ್ಲಿ ಸುಂದರ ಸ್ತ್ರೀಯರ ಮಧ್ಯ ರತ್ನವಿದ್ದ ಹಾಗೆ ಇದ್ದಳು. ಚಕ್ರವರ್ತಿ ತನ್ನ ಇನಿಯಳ ಪ್ರತಿಷ್ಠೆಯನ್ನು ಪ್ರೀತಿಯ ಈರ್ಷೆಯಿಂದ ಪಣ ತೊಟ್ಟು ಕೆಣಕಿ ಕೆಡಿಸಲಾಗದೆ, ಸೋತ ಸ್ವಾರಸ್ಯಕರವಾದ ಪ್ರಸಂಗವನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ಈಕೆ ಯುದ್ಧಕ್ಕೆ ಹೊರಟ ತನ್ನ ಪತಿ ವಿಕ್ರಮಾದಿತ್ಯನ ಜೊತೆಗೆ ಹೋಗುತ್ತಿರಬೇಕು. ಅದಕ್ಕಾಗಿಯೇ ಈಕೆಯನ್ನು

ಚಾಳುಕ್ಯ ಚಕ್ರೇಶ್ವರನ ದಿಗ್ವಿಜಯ ಸಮಯದೊಳ್

ಕೀರ್ತಿ ಲಕ್ಷ್ಮೀಯುಂ ಮದವದರಿರಾಯ ಮದಮರ್ದ್ದನ ಸಮಯದೊಳ್

ವಿಜಯಲಕ್ಷ್ಮೀಯುಮೆನಿಸಿದ್ದಳು ಎಂದು ಹೇಳಲಾಗಿದೆ.

ಜಾಕಲದೇವಿ ಕಲೆಗಳಲ್ಲಿ ಪರಿಣಿತಿ ಹೊಂದಿದವಳಾಗಿದ್ದಳು. ಈಕೆಯನ್ನು ಶಾಸನದಲ್ಲಿ ಜಕ್ಕವ್ವ ಅಥವಾ ವೈಜಕ್ಕವ್ವ ಎಂದು ಕರೆಯಲಾಗಿದೆ. ಇವಳ ಬುದ್ಧಿ ಚಾತುರ್ಯ ಮೆಚ್ಚಿದ ಗ್ರಾಮದ ಜನತೆ ಅವಳ ಪ್ರತ್ಯಕ್ಷ ದರ್ಶನಕ್ಕೆ ಬಂದವರು ಇಂಗಳಗಿಯ ಗ್ರಾಮದಲ್ಲಿಯೇ ನೆಲೆಸಿದ್ದರು. ಇದೇ ಮುಂದೆ ಇಂಗಳಗಿ ಗ್ರಾಮ ಈ ಸ್ತ್ರೀಯರಿಂದ ಪ್ರಸಿದ್ಧಿ ಪಡೆದುಕೊಂಡಿತು. ವೈಜಕ್ಕವ್ವನ ಪ್ರಭಾವ ಇಂದಿನ ಇಂಗಳಗಿ ಗ್ರಾಮಸ್ಥರಲ್ಲಿ ಕಾಣಬಹುದಾಗಿದೆ. ಇಂಗಳಗಿ ಗ್ರಾಮದ ಮಹಿಳೆಯರು ರಣಧೀರೆಯರಾಗಿದ್ದು ಧೈರ್ಯವಂತರಾಗಿದ್ದರೆಂಬುದು ಜನರ ಅಭಿಪ್ರಾಯ. ಈ ಗ್ರಾಮವನ್ನು ಆಳಿದ ಜಾಕಲದೇವಿ ದೇವರ ಸ್ವಯಂಭುದೇವನಿಗೆ ಕಾಣಿಕೆಯಾಗಿ ಕೊಟ್ಟಿದ್ದಳು..

ನೃತ್ಯ ಕಲಾಧಾರಿಯಾಗಿದ್ದಳು. ಈಕೆ ನೃತ್ಯ ವಿದ್ಯಾಧರಿ ಎಂಬ ಪ್ರಶಸ್ತಿಯನ್ನು ಹೊಂದಿದ್ದಳು. ಈಕೆಗೆ 'ಅಭಿನವ ಸರಸ್ವತಿ' ಎಂಬ ಬಿರುದು ಇತ್ತು. ಇವಳು ದತ್ತಿಗಳನ್ನು ಕೊಡುವುದರ ಮೂಲಕ ವೈದಿಕ . (EC,IV,982 A.D;P.206) ವಿದ್ಯಾಭ್ಯಾಸಕ್ಕೆ ನೆರವಾಗಿದ್ದಳು. ಕ್ರಿ.ಶ.೧೧೧೦ರ ಕಾಳಗಿಯ ಶಾಸನದಲ್ಲಿ ಪಿರಿಯರಸಿ ಎಂದು ಹೇಳಲಾಗಿದೆ. 'ಶ್ರೀ ತ್ರಿಭುವನಮಲ್ಲ ಭೂಪತಿ ದೇವಾನುಗ್ರಹ ಮಹಾಮಹಿಷಿ ಪದ್ಮದಿಂದ ಅಭಿನವರೂಪವಿಭ್ರಮ ಸಮನ್ವಿತ ಚಂದಲದೇವಿ' ಎಂದು ಉಲ್ಲೇಖವಿದೆ. ಕೆಲ ಅಧಿಕಾರಿಗಳು ಚಂದಲದೇವಿಯ ಪಾದ ಪದ್ಮೋಪ ಜೀವಿಗಳಾಗಿದ್ದರು.

**ಮೈಲಾಳದೇವಿ**

ಆರನೆಯ ವಿಕ್ರಮಾದಿತ್ಯನ ರಾಣಿ ಮೈಲಾಳಮಹಾದೇವಿ ಕ್ರಿ.ಶ.೧೦೮೪ರಲ್ಲಿ ತೆಂಗಳಿ ಗ್ರಾಮದಲ್ಲಿ ಆಳ್ವಿಕೆ ಮಾಡುತ್ತಿದ್ದಳು. ಮನ್ನೆ೩೦ರಲ್ಲಿದ್ದ ಸೊನ್ನ ಹಾಗೂ ಪಟ್ಟೆವಾಡ ಗ್ರಾಮದಿಂದ ಆಳುತ್ತಿದ್ದಳು. ಕ್ರಿ.ಶ.೧೦೮೭ರ ಇನ್ನೊಂದು ಶಾಸನ ಈಕೆ ಐದು ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನ, ದತ್ತಿ ಕೊಟ್ಟ ವಿಷಯ ಉಲ್ಲೇಖಿಸುತ್ತದೆ. ಕಾಳಗಿ ಶಾಸನ ಬಾಣ ವೀರಗೊಂಕರಸ ಆತನ ರಾಣಿ ಮೈಳಾಲದೇವಿಯು ದಾನ ಕೊಟ್ಟಿದ್ದನ್ನು ತಿಳಿಸುತ್ತದೆ. ಈಕೆಯು ಆರನೆಯ ವಿಕ್ರಮಾದಿತ್ಯನ ಪ್ರಥಮ ಪಟ್ಟದ ರಾಣಿಯಾಗಿದ್ದಳು. ಮಲ್ಲಿಕಾರ್ಜುನನೇ ಈಕೆಯ ಮಗನಾಗಿದ್ದನು.

**ಮಲಯಮತಿ ದೇವಿ:**

ಕಲ್ಯಾಣ ಚಾಳುಕ್ಯ ವಂಶದವರು ಎಲ್ಲ ಧರ್ಮಗಳಂತೆ ವೈದಿಕ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದರು. ಆರನೆಯ ವಿಕ್ರಮಾದಿತ್ಯನು ಇತರ ಧರ್ಮದ ಮಹಿಳೆಯರನ್ನು ವಿವಾಹವಾದ್ದರಿಂದ ಮತವನ್ನು ಅಪ್ರತ್ಯಕ್ಷವಾಗಿ ಪೋಷಿಸಬೇಕಾಯಿತು. ಎಲ್ಲ ರಾಣಿಯರ ಮತ ಅರಿತುಕೊಳ್ಳದಿದ್ದರೂ, ಕೆಲ ರಾಣಿಯರ ಧರ್ಮವನ್ನು ಅರಿತಿದ್ದನು. ಅವರು ವೈದಿಕ ಧರ್ಮಕ್ಕೆ ಸೇವೆಯನ್ನು ಸಲ್ಲಿಸಿದ್ದರು. ವಿಕ್ರಮಾದಿತ್ಯನ ಪಿರಿಯರಸಿ ಪಟ್ಟ ಮಹಾದೇವಿ ಸ್ಥಾನವನ್ನು ಅಲಂಕರಿಸುವದರಲ್ಲಿ ಮಲಯಮತಿದೇವಿಯು ಒಬ್ಬಳು. ದಿಗ್ಗಾಂವಿಯ (ಹೈದ್ರಾಬಾದ ಭಾಗದ ಕನ್ನಡ ಶಿಲಾಶಾಸನಗಳು;೧೯೬೨;ಪು.೩೮) ಶಾಸನದಲ್ಲಿ ಈಕೆಯನ್ನು ಆರನೆಯ ವಿಕ್ರಮಾದಿತ್ಯನ 'ಶ್ರೀ ಮದ್ರಾಯ ಸರ್ವಜ್ಞನರ್ದ್ಧಾಂಗಿ ಶ್ರೀಮತ್ಪಿರಿಯರಸಿ ಪಟ್ಟ. ಮಹಾದೇವಿ ಶ್ರೀಮದಭಿನವ ಸರಸ್ವತಿ ಮಲಯ ಮತಿ ದೇವಿ' ಎಂದು ಕರೆಯಲಾಗಿದೆ. ಈಕೆ ದಿಗ್ಗಾಂವಿಯ ಸೋಮೇಶ್ವರ ದೇವಾಲಯಕ್ಕೆ (ಕ್ರಿ.ಶ.೧೧೦೭) ದಾನ ಕೊಟ್ಟಿದ್ದಳು.

ದಿಗ್ಗಾಂವಿಯ ಅಗ್ರಹಾರದಲ್ಲಿ ೩೦೦ ಮಹಾಜನರು ಸರ್ವಾನುಮತದಿಂದ ನೆರೆಯ ಅಗ್ರಹಾರ ನಾಗಾಯಿಯ ४೦೦ ಮಹಾಜನರು ಕೂಡಿ ಈ ದೇವರ ಸೇವೆಗೆಂದು ಗದ್ದೆ ದಾನ ಕೊಟ್ಟ ಅಂಶ ತಿಳಿಸುತ್ತದೆ. ಅಗ್ರಹಾರದಲ್ಲಿ ರಾಣಿಯರು ಸುರಕ್ಷಿತವಾಗಿದ್ದರು. ಜೊತೆಗೆ ಇತರ ಸ್ತ್ರೀಯರು ಸಹ ಸುರಕ್ಷಿತವಾಗಿ ಇರಲು ಸಾಧ್ಯವಾಗಿದ್ದಿತು. ಅಲ್ಲದೆ ಸಮಾಜದಲ್ಲಿ ರಾಣಿಯರು ಉನ್ನತ ಸ್ಥಾನ ಪಡೆದಿದ್ದರು.

**ಸಿರಿಯಾದೇವಿ**

ಯಾದವ ಸಿಂಗಣನ ಕಾಲಕ್ಕೆ ಸೇರಿದ ಕ್ರಿ.ಶ.೧೨೭೯ರ ಶಾಸನವು ಮಹಾಮಂಡಳೇಶ್ವರ ಬಿಬ್ಬರಸ ಅವನ ರಾಣಿ ಸಿರಿಯಾದೇವಿಯು ಇಂಗಳಗಿ ಗ್ರಾಮದ ಲೋಕೇಶ್ವರ ಆಚಾರ್ಯ ಕರ್ತರ ಜೀಯರಿಗೆ ವಿವಿಧ ಸುಂಕಗಳನ್ನು ದಾನ ಕೊಟ್ಟ ವಿಷಯ ತಿಳಿಸುತ್ತದೆ.

**ಗುಡ್ಡವ್ವೆ**

ಷೋಡಶ ಗಣದಲ್ಲಿ ಗುಡ್ಡವ್ವೆಯದು ಸುಪ್ರಸಿದ್ಧ ಹೆಸರು. ವೈಷ್ಣವರು ಕಿತ್ತೊಗೆದ ಅಣಂಪುರ ಬಾಲಬ್ರಹ್ಮೇಶ್ವರ ಲಿಂಗವನ್ನು ತನ್ನ ಷೋಡಶಗಣದ ಬೆಂಬಲದಿಂದ ಪುನಃ ಸ್ಥಾಪಿಸಿದ ಈ ವೀರಮಹಿಳೆಯ ವಿಷಯ ಕೆಲ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ.೧೨೭೯ರ ಇಂಗಳಗಿ ಶಾಸನವು ಗುಡ್ಡವ್ವೆ ಉಲ್ಲೇಖ ಪರೋಕ್ಷವಾಗಿ ಬಂದಿದ್ದು ಈಕೆ ಗುಡ್ಡಾಪುರದ ದಾನಮ್ಮದೇವಿಯೇ ಆಗಿರಬೇಕೆಂದು ಊಹೆ. ಕ್ಷೇತ್ರ ಸನ್ಯಾಸಿನಿಯಾದ ಅಚಲವ್ವೆಯ ಕಾಲನ್ನುತೊಳೆದು ಸಪ್ತಲಿಂಗೇಶ್ವರ ಹಾಗೂ ಗಣಮಠಕ್ಕೆ ಗುಡ್ಡವ್ವೆಯ ನಾಲ್ಕು ಮನೆಯ ನಿವೇಶನ, ಹೊಲ, ತೋಟ ಹಾಗೂ ಗಾಣಗಳನ್ನು ದಾನ ಕೊಟ್ಟ ಸಂದರ್ಭದಲ್ಲಿ ದೇವರಿಗೆ ದಾನ, ದತ್ತಿ ಕೊಟ್ಟ ವಿಷಯ ತಿಳಿಸುತ್ತದೆ.

ರಾಣಿಯರಲ್ಲಿ ಜಾಕಲದೇವಿಯು ಜೈನ ಧರ್ಮದವಳಾಗಿದ್ದಳು. ಅನೇಕ ಜೈನ ಬಸದಿಯನ್ನು ಇಂಗಳಗಿಯಲ್ಲಿ ನಿರ್ಮಿಸಿದ್ದಳು. ವೀರ ಶೈವ ಸ್ತ್ರೀಯರಲ್ಲಿ ಅಚಲವ್ವೆ ಎಂಬ ಕ್ಷೇತ್ರ ಸನ್ಯಾಸಿನಿಯ ಹೆಸರು ಹಾಗೂ ಗುಡ್ಡವ್ವೆ ಮುಂತಾದ ಧಾರ್ಮಿಕ ವೀರ ಮಹಿಳೆಯರ ಬಗೆಗೆ ಇಂಗಳಗಿ ಶಾಸನವು ಉಲ್ಲೇಖಿಸುತ್ತವೆ. ಈ ಎಲ್ಲ ಶಾಸನಗಳಲ್ಲಿ ಸ್ತ್ರೀಯರು ನೀಡಿದ ದತ್ತಿಯ ಉಲ್ಲೇಖ ದೊರೆತರು,

ಇಂಗಳಗಿಯ ಇನ್ನೊಂದು ಶಾಸನದಲ್ಲಿ ಬಲವ್ವೆ ಎಂಬುವವಳು ಆರಲು-೩೦೦ರ ಇಂಗುಳಿಗೆಯ ಪಂಚಮಠ, ಪ್ರಭು, ಹೆಗ್ಗಡೆ ಹಾಗೂ ಗಡ್ಡವ್ವೆ ಇವರ ಸಮ್ಮುಖದಲ್ಲಿ ದತ್ತಿ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.

**ಶ್ರೀದೇವಿಯಕ್ಕ**

ಕ್ರಿ.ಶ.೧೧೦೬ರ ಕಾಳಗಿಯ ಶಾಸನ ಆದಿತ್ಯ ಭಟ್ಟೋಪಾಧ್ಯಾಯನ ಮಗಳು ಶ್ರೀದೇವಿಯಕ್ಕ ತೆಂಗಳಿ ಜಗನ್ನಾಥ ಕೇಶವ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿ, ದೇವಾಲಯ ಕಟ್ಟಿಸಿದಳು. ಸಾವಿತ್ರಿಯಕ್ಕ, ಮಲ್ಲಿಯಕ್ಕರು ಈ ದೇವಾಲಯಕ್ಕೆ ದಾನ ಕೊಟ್ಟ ವಿಷಯ ತಿಳಿಸುತ್ತದೆ.

**ಕಾಳಬ್ಬರಸಿ**

ಇಂಗಳಗಿ ಗ್ರಾಮದ ಮಹಾಮಂಡಳೇಶ್ವರ ಹೈಹಯ ವಂಶದ ಬಾಚರಸ ಮತ್ತು ಆತನ ಪತ್ನಿ ಕಾಳಬ್ಬರಸಿಯ ವರ್ಣನೆ ಈ ಶಾಸನದಲ್ಲಿ ಉಲ್ಲೇಖಗೊಂಡಿದೆ.

ಮನೋವಲ್ಲಭೆ, ಭೂಮಿ ದಾನ ಮಹೋನ್ನತಿಯನ್ತೆನೆ
ಸ್ವಸ್ತೀನವರತ ಪರಮಕಲ್ಯಾಣಾಭ್ಯುದಯ ಸತಸಹಸ್ರ ಪರಮ
ಗಂಭೀರಭೋಗ ಭಾಗಿನಿಯರಂ ದ್ವಿತೀಯ ಲಕ್ಷ್ಮೀ ಸಮಾನೆಯರುಮಪ್ಪ
ಬಾಚ ಮಹಾರಾಜನರ್ಧಾಂಗನೆ ಶ್ರೀಕಾಳಬ್ಬರಸಿ॥

ಎಂದು ಶಾಸನವು ದಾನ ದತ್ತಿ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ. ರಾಣಿಯರಷ್ಟೇ ಅಲ್ಲದೆ, ಮಹಾಮಂಡಳೇಶ್ವರರ ಪತ್ನಿಯರು ಸಹ ಆಡಳಿತದಲ್ಲಿ ಭಾಗವಹಿಸಿದ್ದರು ಎನ್ನುವುದಕ್ಕೆ ಇದು ನಿದರ್ಶನವಾಗಿದೆ. ಇದರಿಂದ ಸ್ತ್ರೀ ಸಮುದಾಯ ಶಾಸನಗಳಲ್ಲಿ ಕಂಡುಬರುವುದನ್ನು ಗುರುತಿಸಬಹುದು.

ಹಿಂದೂ ಸಮಾಜದಲ್ಲಿ ಸ್ತ್ರೀಗೆ ಉನ್ನತ ಸ್ಥಾನವಿತ್ತು. ಸಾಮಾಜಿಕವಾಗಿ ಮುಂದುವರೆದ ಜನಾಂಗ ಜಾತಿಗಳಲ್ಲಿ ಸ್ತ್ರೀಯರು ಉನ್ನತ ಮಟ್ಟದವರಾಗಿದ್ದರು. ಸಾಮಾಜಿಕ ನೆಲೆಯಲ್ಲಿ ಹೆಣ್ಣಿಗೆ ಆದರದ ಗೌರವದ ಸ್ಥಾನವಿತ್ತು. ಆದರೂ ಯಾವುದೇ ರೀತಿಯ ಆರ್ಥಿಕ ಸ್ವಾತಂತ್ರ್ಯವಿರಲಿಲ್ಲ. ಮಿತಾಕ್ಷರದ ಕರ್ತೃ ವಿಜ್ಞಾನೇಶ್ವರನು ಕ್ರಿ.ಶ.೧೧೨೩ರ ಮರತೂರ ಶಾಸನದಲ್ಲಿ ಸ್ತ್ರೀಯರಿಗೂ ಆಸ್ತಿಯ ಹಕ್ಕು ದೊರಕಬೇಕೆಂದು ಪ್ರತಿಪಾದಿಸಿದನು. ಅವರ ಪ್ರಕಾರ ಗಂಡು ಸಂತಾನವಿಲ್ಲದವರ ಆಸ್ತಿಯು ಆತನ ಪತ್ನಿಗೆ ಸೇರಬೇಕು. ಅವಿಭಕ್ತ ಕುಟುಂಬದಲ್ಲಿ ಗಂಡು ಮಕ್ಕಳೊಂದಿಗೆ ಹೆಂಡತಿ ಹಾಗೂ ತಾಯಿಗೂ ಪಾಲು ದೊರೆಯಬೇಕು. ಸ್ತ್ರೀ ಧನದ ಬಗ್ಗೆಯೂ ಉಲ್ಲೇಖವಿದೆ. ಒಂದು ಹೆಣ್ಣಿಗೆ ಮದುವೆ ಅಥವಾ ಇತರ ಸಂದರ್ಭದಲ್ಲಿ ತಂದೆ, ತಾಯಿ, ಸಂಬಂಧಿಕರು ಅಥವಾ ಬೇರೆ ಯಾರೋ ಕೊಟ್ಟ ಉಡುಗೊರೆ ಆಸ್ತಿ ಹಾಗೂ ಅವಳ ಸ್ವಂತ ಬಂದ ಧನವು ಸ್ತ್ರೀ ಧನವಾಗುತ್ತದೆ. ಇಂತಹ ಸ್ತ್ರೀ ಧನಕ್ಕೆ ಆಕೆಯ ಅಧಿಕಾರವಿರುತ್ತದೆ. ಆದರೆ ಪತಿಗೆ ಅದರಲ್ಲಿ ಅಧಿಕಾರವಿರುವುದಿಲ್ಲ. ನಂತರ ಈ ಸ್ತ್ರೀ ಧನವು ಆಕೆಯ ಹೆಣ್ಣು ಮಕ್ಕಳಿಗೆ ಸೇರಬೇಕು. ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಿಗೂ ಹೆಣ್ಣು ಮಕ್ಕಳಿಗೂ ಪಾಲು ದೊರೆಯಬೇಕೆಂದು ಸ್ಮೃತಿಗಳು ಹಾಗೂ ಅವುಗಳ ವ್ಯಾಖ್ಯಾನಕಾರರು ಪ್ರತಿಪಾದಿಸಿದರು. ಸ್ವತಃ ಯಾಜ್ಞವಲ್ಕ್ಯ ಕೂಡ ಸನ್ಯಾಸ ಸ್ವೀಕರಿಸುವ ಮುಂಚೆ ತನ್ನ ಸಂಪತ್ತನ್ನೆಲ್ಲಾ ಇಬ್ಬರು ಹೆಂಡತಿಯರಾದ ಕಾತ್ಯಾಯಿನಿ ಮತ್ತು ಮೈತ್ರೇಯಿಗೆ ಸಮನಾಗಿ

ಹಂಚುತ್ತಾನೆ. ಮೈತ್ರೇಯ ತನಗೆ ಆಸ್ತಿ ಬೇಡವೆಂದು ಜ್ಞಾನ ಪಡೆದು ಮೋಕ್ಷ ಹೊಂದಲು ಬಯಸುತ್ತಾಳೆ. ಯಾಜ್ಞವಲ್ಕ್ಯರು ಆಸ್ತಿ ಹಕ್ಕು ಇಲ್ಲದ ಕಾಲದಲ್ಲೆ ತಮ್ಮ ಆಸ್ತಿಯನ್ನು ಪತ್ನಿಯರಿಗೆ ಹಂಚಿ ಸ್ತ್ರೀಯರ ಆಸ್ತಿ. ಹಕ್ಕನ್ನು ತಮ್ಮ ಸ್ವಂತ ನಡುವಳಿಕೆ ಮೂಲಕ ಜಗತ್ತಿಗೆ ತಿಳಿಸಿದ್ದಾನೆ. ಹಾಗು ಸ್ತ್ರೀಯರಿಗೆ ವೇದಾಧ್ಯಯನಕ್ಕೆ ಅವಕಾಶವಿಲ್ಲದಿದ್ದ ಕಾಲದಲ್ಲೆ ಪತ್ನಿಗೆ ಅಂತಹ ಅವಕಾಶ ಕಲ್ಪಿಸಿಕೊಟ್ಟಿದ್ದರು ಎಂಬುದು ಗಮನಾರ್ಹ.

**ವರ್ಣಾಶ್ರಮ ಪದ್ಧತಿ**

ವರ್ಣಗಳುಂಟಾಗಲು ಆರ್ಥಿಕ ಪರಿಸ್ಥಿತಿಯೇ ಕಾರಣ. ವರ್ಗ ಮತ್ತು ವರ್ಣ ಎರಡೂ ಒಂದೇ ಅರ್ಥದಲ್ಲಿ ಬಳಕೆಯಾಗಿದೆ. ವೃತ್ತಿಗಳು ಅಥವಾ ಜನರು ಮಾಡುವ ಕೆಲಸದ ಆಧಾರದ ಮೇಲೆ ವರ್ಣಗಳು ತಲೆಯೆತ್ತಿದವೆನ್ನಬಹುದು. ನಾಲ್ಕು ವರ್ಣಗಳನ್ನು ಪ್ರಮುಖವಾಗಿ ಉಲ್ಲೇಖಿಸಲಾಗುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ, ವೇದಗಳ ಕಾಲದಲ್ಲಿ ಮೊದಲ ಮೂವರನ್ನು ದ್ವಿಜರೆಂದು ಕರೆದಿದ್ದಾರೆ. ವರ್ಣಗಳಲ್ಲಿ ನಾಲ್ಕನೆಯದು ಶೂದ್ರರು ಇವರಲ್ಲಿ ಅನೇಕ ಜಾತಿಗಳಿರುತ್ತವೆ. ವರ್ಣವ್ಯವಸ್ಥೆಯನ್ನು ಸಿದ್ಧಾಂತಗಳ ಆಧಾರದಿಂದ ಸರಳವಾಗಿದೆ ಎಂದು ಹೇಳಬಹುದು. ವರ್ಣ ಮತ್ತು ಜಾತಿ ಸಮಾನ ಅರ್ಥವನ್ನು ಕೊಡುವುದಿಲ್ಲ. ವರ್ಣಗಳು ನಾಲ್ಕೆ ಆದರೆ ಜಾತಿಗಳು ನೂರಾರು. ವರ್ಣ ಸಂಕರಗಳಾಗಿದ್ದುದರಿಂದ ಜಾತಿಗಳು ಹುಟ್ಟಿಕೊಂಡವು. ವೃತ್ತಿಕಾರರನ್ನು ಯಾವ ಜಾತಿಗೆ ಸೇರಿಸುವುದೆಂದು ತಿಳಿಯದು. ಕಾಲಕ್ರಮೇಣ ವೃತ್ತಿಯ ಆಧಾರದಿಂದ ಜಾತಿಯನ್ನು ಗುರುತಿಸಲು ಪ್ರಾರಂಭಿಸಿದರು.

ಕರ್ನಾಟಕ ಶಾಸನಗಳಲ್ಲಿ ಒಂದೆರಡು ಕಡೆ ವರ್ಣಗಳ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ) ಹೆಸರು ಬಂದಿದೆ. ರಾಜನು ವರ್ಣಾಶ್ರಮ ಧರ್ಮವನ್ನು ಸಂರಕ್ಷಿಸುವುದು ಅವನ ಪವಿತ್ರ ಕರ್ತವ್ಯಗಳಲ್ಲೊಂದು ಎಂದೂ ಶಾಸನಗಳಲ್ಲಿ ಉಲ್ಲೇಖವಾಗಿದೆ. ಈ ವರ್ಣ ವಿಭಜನೆಯು ಜನ್ಮಕ್ಕಿಂತ ಹೆಚ್ಚಾಗಿ ವೃತ್ತಿಯನ್ನವಲಂಬಿಸಿದೆ. ವರ್ಣ ವ್ಯವಸ್ಥೆಯನ್ನು ಅದರ ಶುದ್ಧ ರೂಪದಲ್ಲಿ ಉಳಿಸುವುದು ಕ್ರಮೇಣ ಕಡಿಮೆಯಾಯಿತು. ಬೇರೆ ಬೇರೆ ವರ್ಣದವರು ಬೇರೆ ಬೇರೆ ವೃತ್ತಿಯನ್ನು ಅವಲಂಬಿಸಿದರು. ಇತರ ವರ್ಣಗಳ ಸ್ತ್ರೀಯರ ಸಂಪರ್ಕವನ್ನು ಪಡೆದರು. ಇದರಿಂದ ವರ್ಣ ಸೌಕರ್ಯವುಂಟಾಯಿತು. ಇದರ ಫಲವಾಗಿ ವಿವಿಧ ಜಾತಿಗಳು ಹುಟ್ಟಿದವು ಎಂದು ಮನುವು (ಗುಲಬರ್ಗಾ ಜಿಲ್ಲಾ. ಗ್ಯಾಸೆಟಿಯರ್;೧೯೬೭;ಪು.೩೦೯) ಅಭಿಪ್ರಾಯ ಪಡುತ್ತಾನೆ.

**ಬ್ರಾಹ್ಮಣರು**

ಋಗ್ವೇದ ಕಾಲದಿಂದಲೂ ಈ ವರ್ಣಗಳು ಕಂಡು ಬರುತ್ತವೆ. ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ ಬ್ರಾಹ್ಮಣರು ಯಜನ, ಯಾಜನೆ, ಅಧ್ಯಯನ, ಅಧ್ಯಾಪನ, ಪೌರಾಹಿತ್ಯ ಮಾಡುತ್ತಿದ್ದರು. ಇದರಿಂದಾಗಿ ಬ್ರಾಹ್ಮಣರು ಶ್ರೇಷ್ಠರೆಂದು ಭಾವಿಸಲಾಗಿತ್ತು. ಕಲ್ಯಾಣ ಚಾಳುಕ್ಯರ ಅನೇಕ ಶಾಸನಗಳು ಬ್ರಾಹ್ಮಣರಿಗೆ ನೀಡಿದ ದಾನದ ಶಾಸನಗಳಾಗಿವೆ. ಬ್ರಾಹ್ಮಣರಿಗೆ ದಾನ ಮಾಡಿದರೆ ಪುಣ್ಯ ಲಭಿಸುತ್ತದೆ ಎಂಬ ನಂಬಿಕೆಯಿಂದ ಹಿಂದಿನ ಕಾಲದಿಂದಲೂ ಈ ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಊರುಗಳನ್ನು, ಅಗ್ರಹಾರಗಳನ್ನು ದಾನ ಮಾಡಿದ್ದಾರೆ ಅವರಿಗೆ ದಾನ ಮಾಡಿದ ಭೂಮಿ ನಿವೇಶನಗಳ ಮೇಲೆ ಕರಿಗೆ ವಿಧಿಸುತ್ತಿರಲಿಲ್ಲ. ಈ ಭಾಗದಲ್ಲಿ ದೊರೆತ ಶಾಸನಗಳಲ್ಲಿ ಬ್ರಾಹ್ಮಣರಿಗೆ ದಾನ ಕೊಟ್ಟಿದ್ದು

ಕಂಡು ಬರುತ್ತದೆ. ಇಂಗಳಗಿ, ದಿಗ್ಗಾಂವಿ, ಕಾಳಗಿ, ತೆಂಗಳಿ ಶಾಸನಗಳಲ್ಲಿ ಬ್ರಾಹ್ಮಣರಿಗೆ ದಾನ ಕೊಟ್ಟ ಉಲ್ಲೇಖವಿದೆ. ಇವರು ತೆರಿಗೆ ಕಟ್ಟುತ್ತಿರಲಿಲ್ಲ. ದಾನ ಪಡೆದ ಭೂಮಿಯಲ್ಲಿ ತಮ್ಮ ಜೀವನ ನಡೆಸುತ್ತಿದ್ದರು. ಇದರಿಂದ ಬ್ರಾಹ್ಮಣರು ಆರ್ಥಿಕವಾಗಿ ಶ್ರೀಮಂತರಾಗಿದ್ದರು.

**ಕ್ಷತ್ರಿಯರು**

ಬ್ರಾಹ್ಮಣರ ನಂತರದ ಸ್ಥಾನವೇ ಕ್ಷತ್ರಿಯರದು. ಇವರು ಅರಸರಿಗೆ ಯುದ್ಧದಲ್ಲಿ ಸಹಾಯ ಮಾಡುತ್ತಿದ್ದರು. ಇವರಿಗೆ ಗೋತ್ರಗಳಿರಲಿಲ್ಲ. ಕ್ಷತ್ರಿಯರೆಂದೇ ಗುರುತಿಸಿಕೊಂಡಿದ್ದಾರೆ. ಅಳ್ತೇಕರರ ಪ್ರಕಾರ "ಕ್ಷತ್ರಿಯ ಅರಸರು ವೈದಿಕ ಪರಿಸರದಿಂದ ತಮ್ಮನ್ನು ತಾವು ಬೇರ್ಪಡಿಸಿಕೊಂಡಿದ್ದರು". (Rashtrakutas and their times;P.332) ಆದರೆ ಪೌರಾಣಿಕ ದೇವತೆಗಳನ್ನು ವೈಭವಿಕರಿಸುವ ಪ್ರಕ್ರಿಯೆ ನಡೆದಿತ್ತೆನ್ನಬಹುದು. ಮಹಾಮಂಡಳೇಶ್ವರರು ಅರಸರಿಗೆ ಯುದ್ಧದಲ್ಲಿ ಸಹಕರಿಸುತ್ತಿದ್ದರು. ಇದರಿಂದ ಅನೇಕ ಮಂಡಳೇಶ್ವರರು, ಸಾಮಂತರು ಕ್ಷತ್ರಿಯರಾಗಿದ್ದರು.

**ವೈಶ್ಯರು**

ಕ್ಷತ್ರಿಯರ ನಂತರದ ಸ್ಥಾನ ವೈಶ್ಯರದು. ಇವರು ವ್ಯಾಪಾರ ಮಾಡುತ್ತಿದ್ದರು. ಇವರು ತಮ್ಮನ್ನು ಒಂದೇ ಹೆಸರಿನಿಂದ ಗುರುತಿಸಿಕೊಂಡಿಲ್ಲ. ಅನೇಕ ಹೆಸರುಗಳು, ಒಳಪಂಗಡಗಳನ್ನು ಮಾಡಿಕೊಂಡಿದ್ದಾರೆ. ಕಾಲ ಕ್ರಮೇಣ ತಮ್ಮ ಗೋತ್ರವೇ ಮರೆತರು ಮತ್ತು ವೈದಿಕ ಸಂಪ್ರದಾಯಗಳ ಅಭ್ಯಾಸವು ತಪ್ಪಿಹೋಯಿತು. ವೈಶ್ಯರ ಕರ್ತವ್ಯ ಏನೆಂದರೆ ವ್ಯವಸಾಯ, ಪಶುಸಂಗೋಪನೆ, ಬ್ರಾಹ್ಮಣರ ಸೇವೆಗಾಗಿ ಸಿದ್ಧರಾಗಿದ್ದು, ಅವರ ಅವಶ್ಯಕತೆಗಳನ್ನು ಪೂರೈಸುವುದು ಮುಂತಾದವಾಗಿತ್ತು ಎಂದು ಅಲ್ಬೂರನಿ ವರದಿ ನೀಡಿದ್ದಾನೆ. (Alberuni's India, Vol II, P.136 Sachau) ಕಾಲಕ್ರಮೇಣ ವೈಶ್ಯರು ಜೈನ ಧರ್ಮದ ಪ್ರಭಾವದಿಂದ ವ್ಯವಸಾಯ ಮಾಡುವುದನ್ನು ನಿಲ್ಲಿಸಿದರು. ಭೂಮಿ ಉಳುವಾಗ, ಬೆಳೆಯನ್ನು ಕತ್ತರಿಸುವಾಗ, ಅನೇಕ ಜೀವಿಗಳಿಗೆ ಹಿಂಸೆಯಾಗುತ್ತದೆ ಎನ್ನುವ ಅಭಿಪ್ರಾಯವೇ ಇದಕ್ಕೆ ಕಾರಣ. ಆದರೆ ನಂತರದಲ್ಲಿ ಜೀವನ ನಡೆಸುವುದು ಕಷ್ಟವಾಯಿತು. ಆಗ ಅವರು ಜೈನ ಧರ್ಮವನ್ನು ಬಿಟ್ಟು ಬೌದ್ಧ ಧರ್ಮವನ್ನು ಸ್ವೀಕರಿಸಿ, ಭೂಮಿಯಲ್ಲಿ ವ್ಯವಸಾಯ ಮಾಡಲು ಪ್ರಾರಂಭಿಸಿದರು.

**ಶೂದ್ರರು**

ಕೊನೆ ಸ್ಥಾನ ಹೊಂದಿದ ಶೂದ್ರರು ಮೇಲಿನ ಮೂರು ವರ್ಗದವರ ಸೇವೆ ಮಾಡಬೇಕಿತ್ತು. ಆದರೆ ಮೂಲತಃ ಈ ವರ್ಣಗಳು ತಾವಾಗಿಯೇ ಮಾಡಿಕೊಂಡಿದ್ದು, ಜನ್ಮತಃ ಯಾರೂ ಮೇಲಲ್ಲ, ಕೀಳಲ್ಲ. ವ್ಯಕ್ತಿ ತಾನು ಸೃಷ್ಟಿಸಿಕೊಂಡಿದ್ದ ಈ ಸಮಾಜದಲ್ಲಿ ಜಾತಿಯ ಬೀಜಗಳನ್ನು ಬಿತ್ತಿದನು. ಬ್ರಾಹ್ಮಣರು ಬ್ರಹ್ಮನ ಬಾಯಿಂದ ಜನಿಸಿರುವರು ಎಂದು ಋಗ್ವೇದ ತಿಳಿಸುತ್ತದೆ. ಇದರಿಂದ ಇವರು ಪವಿತ್ರರು, ತಾವೇ ಶ್ರೇಷ್ಠರು, ತಮಗೆ ವಿದ್ಯೆ ಮೀಸಲು ಎಂಬ ಚೌಕಟ್ಟನ್ನು ಹಾಕಿಕೊಂಡರು. ಅದೇ ರೀತಿ ಶೂದ್ರರು ಬ್ರಹ್ಮನ ಪಾದದಿಂದ ಜನಿಸಿದ್ದರಿಂದ ಸಮಾಜದಲ್ಲಿ ಕೊನೆ ಸ್ಥಾನವಿತ್ತು. ಇತರರ ಸೇವೆ ಮಾಡಬೇಕೆಂದು ಅವರ ಮೇಲೆ ಶೋಷಣೆ ಮಾಡಲಾರಂಭಿಸಿದರು. ಹೀಗಾಗಿ ಚತುರ್ವರ್ಣಗಳು ಹುಟ್ಟಿಕೊಂಡವು.

ವರ್ಣಾಶ್ರಮ ವ್ಯವಸ್ಥೆಯಿಂದ ಕೂಡಿದ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಉಚ್ಚ ಸ್ಥಾನವಿತ್ತು. ಆನಂತರ ಗೌಡ, ಒಕ್ಕಲಿಗ, ಸೆಟ್ಟಿ, ತಂಬುಲಿಗ, ಜೇಡ, ಗಾಣಿಗ, ಅಗಸ, ಕಂಚಿ, ಗೋರವ, ಕಂಚಗಾರ, ಕುಂಬಾರ, ಕಮ್ಮಾರ, ಬಡಿಗ ಮುಂತಾದ ಸವರ್ಣೀಯರಾದ ಹಿಂದೂಗಳು ತಮ್ಮ ವೃತ್ತಿ ಗೌರವಕ್ಕನುಸರಿಸಿ ಸಮಾಜದ ವಿವಿಧ ವರ್ಣಗಳಲ್ಲಿ ಸ್ಥಾನ ಪಡೆದಿದ್ದರು. ಊರುಗಳಲ್ಲಿ ಆಯಾ ವೃತ್ತಿಯವರಿಗೆ ಪ್ರತ್ಯೇಕ ಕೇರಿಗಳಿದ್ದದ್ದೂ ತಿಳಿಸುತ್ತದೆ. ಇವರೆಲ್ಲರೂ ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡಿದ್ದರು. ಈ ಸಂಘಗಳ ಉಲ್ಲೇಖ ನಾಗಾಯಿ, ದಿಗ್ಗಾಂವಿ, ಕಾಳಗಿ, ತೆಂಗಳಿ ಮುಂತಾದ ಶಾಸನಗಳಲ್ಲಿ ಕಂಡು ಬರುತ್ತದೆ.

**ಜಾತಿ**

ಜಾತಿ ಹುಟ್ಟಿನಿಂದಲೇ ಬರುವಂತಹದ್ದು. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಶುದ್ಧ ಅಶುದ್ಧ ಎನ್ನುವ ಪರಿಕಲ್ಪನೆಗಳು ಜಾತಿಗಳ ನಡುವಿನ ಗೋಡೆಯಾಗಿ ನಿಲ್ಲುತ್ತವೆ. ಪ್ರತಿಯೊಂದು ಜಾತಿಗೂ ಅವರದೇ ಆದ ಸಾಂಸ್ಕೃತಿಕ ಲಕ್ಷಣಗಳಿವೆ. ಆಚಾರ ವಿಚಾರಗಳು ತಮ್ಮದೇ ಆದ ನಿಬಂಧನೆಗಳನ್ನು ಹೊಂದಿವೆ. ಆಹಾರ ಸೇವನೆಗೂ ಇದು ಅನೇಕ ನಿಯಮಗಳನ್ನು ವಿಧಿಸುತ್ತದೆ. ಪ್ರತಿಯೊಂದು ಜಾತಿಯವರು ತಮ್ಮದೇ ಶ್ರೇಷ್ಠ ಜಾತಿಯೆಂದು ಭಾವಿಸುತ್ತಾರೆ. ಜಾತಿ ಪದ್ಧತಿ ಅಂದಿನ ಕಾಲದಲ್ಲಿಯೂ ಅಸ್ತಿತ್ವದಲ್ಲಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರಿಗಿದ್ದಷ್ಟು ಸ್ಥಾನ ಮಾನ ಸಮಾಜದಲ್ಲಿ ಇತರ ಜನರಿಗೆ ಇರಲಿಲ್ಲ. ಅಶೋಕ ತನ್ನ ಕಾಲವಧಿಯಲ್ಲಿ ಎಲ್ಲರಿಗೂ ಸಮಾನತೆ ನೀಡಿದ. ಹೀಗಾಗಿ ಸನ್ನತಿಯಲ್ಲಿ ಬಹುಜನ ಸಮಾಜದವರು ನೆಲೆಗೊಂಡಿದ್ದಾರೆ. ಶಾತವಾಹನರ ಕಾಲದ ಗ್ರಾಮದಲ್ಲಿ ಮನೆಗಳಿಗಿಂತ ಗುಡಿಸಲುಗಳೇ ಹೆಚ್ಚಾಗಿದ್ದವು. ಒಕ್ಕಲಿಗರು (ಕೃಷಿಕರು) ಗ್ರಾಮದೊಳಗೆ ವಾಸವಾಗಿದ್ದರು. ಬೇಟೆಗಾರರು ಗ್ರಾಮದ ಹೊರ ವಲಯದಲ್ಲಿ ವಾಸವಾಗಿದ್ದರು ಎಂದು ಶಾಸನಗಳು ತಿಳಿಸುತ್ತವೆ.

**ವೇಶ್ಯೆಯರು**

ಇವರ ಉಲ್ಲೇಖ ವೇದ, ಪುರಾಣ, ಧರ್ಮ ಶಾಸ್ತ್ರದಲ್ಲಿ ಬರುತ್ತದೆ. ತಮ್ಮ ಕಲೆಯನ್ನು ದೇವರ ಮುಂದೆ ಅರ್ಪಿಸುವುದು ರಂಗಭೋಗದ ಉದ್ದೇಶವಾಗಿದೆ. ಇಂತಹ ಕೈಂಕರ್ಯಗಳನ್ನು ಮಾಡುವವರನ್ನು ವೇಶ್ಯೆಯರೆಂದು ಕರೆದಿದ್ದಾರೆ. ಹಾಗೆಯೇ ಪಾತ್ರದವರನ್ನು ವೇಶ್ಯೆಯರೆಂದು ಕರೆಯಲುಬಹುದು. ಪಾತ್ರದವರ ಉಲ್ಲೇಖ ಕ್ರಿ.ಶ.೧೧೯೪ರ ಶಾಸನ ತಿಳಿಸುತ್ತದೆ.

**ಸೂಳೆಯರು**

ಸೂಳೆಯರು ವೇಶ್ಯೆಯರಾಗಿರಬೇಕೆಂಬ ನಿಯಮವೇನಿಲ್ಲ. ಶಾಸನದಲ್ಲಿ ಕ್ರಿ.ಶ.೧೧೯೪ರ ನಾಗಾಯಿ ಕಂಬದ ಸೂಳೆಯರನ್ನು ಉಲ್ಲೇಖಿಸುತ್ತದೆ. ಇವರು ದೇವರ ಪೂಜೆಗೆ ಸಹಾಯ ಮಾಡುವವರು. ಅರ್ಥಾತ್ ಪೂಜೆಯ ಸಮಯದಲ್ಲಿ ಪೂಜಾ ಸಾಮಗ್ರಿಗಳನ್ನು ಹೊತ್ತು ಕಂಬದ ಬಳಿ ನಿಂತಿರುತ್ತಿದ್ದರು. ಆದ್ದರಿಂದ ಅದೇ ಹೆಸರಿನಿಂದಲೇ ಗುರುತಿಸಲು ಪ್ರಾರಂಭಿಸಿರಬಹುದು. ಸಾಮಾನ್ಯವಾಗಿ ವೇಶ್ಯೆಯರಿಗಿಂತ ಭಿನ್ನವಾಗಿರುವರು ಸೂಳೆಯರು. ಕ್ರಿ.ಶ.೧೧೮೫ರ ನಾಗಾಯಿ ಶಾಸನದಲ್ಲಿ ಸೂಳೆಯರ ಉಲ್ಲೇಖವಿದೆ. ಇದರಿಂದ ದೇವಾಲಯದ ಸೂಳೆಯರು ಕೂಡ ದಾನಗಳನ್ನು ನೀಡುತ್ತಿದ್ದರೆಂದು (ಪಟ್ಟದ ಕಲ್ಲಿನ) ಶಾಸನ ತಿಳಿಸುತ್ತದೆ.

ಕ್ರಿ.ಶ.೬-೯ನೆಯ ಶತಮಾನದಲ್ಲಿ ಇವರು ಆರ್ಥಿಕವಾಗಿ, ಸಾಮಾಜಿಕವಾಗಿ ಗೌರವ ಸ್ಥಾನವನ್ನು ಪಡೆದಿದ್ದರು. ಸೂಳೆಯರಿಗೂ-ವೇಶ್ಯೆಯರಿಗೂ ವ್ಯತ್ಯಾಸವಿದೆ. ದೇವಾಲಯದಲ್ಲಿ ಸೇವೆಯನ್ನು ಮಾಡುತ್ತಿದ್ದ ಸ್ತ್ರೀಯರನ್ನು ಶಾಸನಗಳು ಸೂಳೆಯರೆಂದೇ ಕರೆದಿದೆ. ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದವರು ವೇಶ್ಯೆಯರು. ದೇವಾಲಯದಲ್ಲಿ ಅಂಗಭೋಗ, ರಂಗಭೋಗಗಳು ಹೆಚ್ಚಿದಂತೆ ಇವರ ಸಂಖ್ಯೆಯೂ ಹೆಚ್ಚತ್ತೆನ್ನಬಹುದು. ಕಾಲಕ್ರಮದಲ್ಲಿ ವೇಶ್ಯೆಯರಿಗೂ, ಸೂಳೆಯರಿಗೂ ಇದ್ದ ಅರ್ಥ ವ್ಯತ್ಯಾಸವು ಹೊರಟುಹೋಯಿತು. ವೇಶ್ಯಾವೃತ್ತಿಯಲ್ಲಿದ್ದ ಸೂಳೆಯರು ಸೂಳೆಗೇರಿಗಳಲ್ಲಿ ವಾಸ ಮಾಡುತ್ತಿದ್ದರು. ಸೂಳೆಗೇರಿಗಳು ದೇವಾಲಯಗಳಿಗೆ ಹೊಂದಿಕೊಂಡು ವಾಸವಾಗಿದ್ದರು ಎಂಬುವುದಕ್ಕೆ ಅಂದಿನ ಸಮಾಜದಲ್ಲಿ ನಿದರ್ಶನಗಳಿವೆ. ಅವರಿಗೆ ಯಾವುದೇ ನಿರ್ಬಂಧವಿರಲಿಲ್ಲ. ನಿವೇಶನಗಳನ್ನು ಕೊಟ್ಟು ದಂಡದೋಷದಿಂದ ಮುಕ್ತಿಗೊಳಿಸಿ, ಸಮಾಜದ ವಿವಿಧ ವೃತ್ತಿಯವರು ಮಾನ್ಯ ಮಾಡಿರುವ ಉಲ್ಲೇಖ ಮಾಡಿಹಾಳ ಕ್ರಿ.ಶ.೧೧೮೫ರ ಶಾಸನ ಕೋಟೆ ಶಂಕರ ದೇವಸ್ಥಾನದಲ್ಲಿದೆ.

ದೇವಾಲಯದ ಸೂಳೆಯರು ಭೋಗ ಜೀವನದಲ್ಲಿಯೆ ಮಗ್ನರಾಗದೆ ಸಾಮಾಜಿಕ, ಧಾರ್ಮಿಕವಾಗಿ ಕೂಡ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ದಾನ ಧರ್ಮಗಳನ್ನು ಮಾಡುವುದರಲ್ಲಿ ಕೂಡ ಇವರು ಹಿಂದೆ ಬಿದ್ದಿರಲಿಲ್ಲವೆಂಬ ಅಂಶ ನಮಗೆ ಶಾಸನಗಳು ತಿಳಿಸುತ್ತವೆ. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಇಂತಹ ಶಾಸನಗಳು ಕಂಡು ಬರುತ್ತವೆ.

**ಸ್ತ್ರೀಯರ ವಿದ್ಯಾಭ್ಯಾಸ**

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಕುಂಟಿತವಾಯಿತು. ವೈದಿಕ ಪರಂಪರೆಯಲ್ಲಿ ಸ್ತ್ರೀಗೆ ವಿದ್ಯಾಭ್ಯಾಸದಲ್ಲಿ ಹೆಚ್ಚಿನ ಪ್ರಾಶಸ್ತ್ಯ ಇಲ್ಲದಾಗಿತ್ತು. ಜೈನ, ಬೌದ್ಧ ಧರ್ಮದಲ್ಲಿ ಸ್ವಲ್ಪ ಮಟ್ಟಿಗೆ ಅವಕಾಶ ಸಿಕ್ಕಿದ್ದರಿಂದ ಕೆಲವು ಸ್ತ್ರೀಯರಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲವಾಗಿತ್ತು. ಪ್ರಾಚೀನ ಕಾಲದಿಂದ ಸ್ತ್ರೀಗೆ ಸಿಕ್ಕಿದ ವಿದ್ಯಾಭ್ಯಾಸ ಕಡಿಮೆ. ವೇದಗಳನ್ನು ಅಧ್ಯಯನ ಮಾಡಿದ್ದ ಗಾರ್ಗಿ, ಮೈತ್ರೇಯಿಯರನ್ನು ಬಿಟ್ಟು ಬೇರೆ ಸ್ತ್ರೀಯ ಉಲ್ಲೇಖಗಳು ಬಹಳ ಅಪರೂಪವಾಗಿ ಸಿಗುತ್ತವೆ. ಇನ್ನು ಧರ್ಮಶಾಸ್ತ್ರಗಳ ಕಾಲದಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸ ಮಾಡುವ ಅವಕಾಶವೇ ತಪ್ಪಿಹೋಗಿರುವುದು ಕಂಡು ಬರುತ್ತದೆ. "ನ ಸ್ತ್ರೀ ಸ್ವಾತಂತ್ರ ಮರ್ಹತಿ" ಎಂಬ ಮಾತಿನಿಂದ ಅವಳು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಳೆಂದು ವಿದಿತವಾಗುತ್ತದೆ. ಪುರುಷ ಪ್ರಧಾನ್ಯತೆಯ ಪರಾಕಾಷ್ಠೆಯಲ್ಲಿ ಸ್ತ್ರೀ ತನ್ನ ಅಸ್ತಿತ್ವವನ್ನು ಕಳೆದುಕೊಂಡದ್ದೊಂದು ವಿಪರ್ಯಾಸ.

ಶಾಸನಗಳಲ್ಲಿ ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ಸಿಗುವ ಉಲ್ಲೇಖಗಳು ಕಡಿಮೆ. ರಾಜವಂಶದ ಸ್ತ್ರೀಯರು ವಿದ್ಯಾವಂತೆಯಾಗಿರುತ್ತಿದ್ದರು. ಸ್ತ್ರೀಯರು ಸಾಮಾನ್ಯವಾಗಿ ಶಾಸ್ತ್ರ ವಿದ್ಯೆಗಳಿಗಿಂತ ಇತರ ಕಲೆಗಳನ್ನು ಕಲಿಯುವುದರಲ್ಲಿ ಆಸಕ್ತರಾಗಿದ್ದರು. ಅರಮನೆಯ ಸ್ತ್ರೀಯರನ್ನು ಬಿಟ್ಟರೆ ದೇವಾಲಯದ ಸೂಳೆಯರು, ವೇಶ್ಯೆಯರು, ಸಂಗೀತದವರು, ಪಾತ್ರದವರು, ಸಂಗೀತ ನೃತ್ಯಗಳಂತಹ ಕಲೆಗಳನ್ನು ಕಲಿಯುತ್ತಿದ್ದರು. ಇನ್ನು ಜನ ಸಾಮಾನ್ಯರ ಶಿಕ್ಷಣದ ಬಗ್ಗೆ ಶಾಸನ ಉಲ್ಲೇಖಗಳು ಇಲ್ಲವೆಂದೇ ಹೇಳಬೇಕು.

**ಇತರ ವರ್ಗಗಳು**

ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿ ಹುಟ್ಟಿಕೊಂಡ ಬೇರೆ ಬೇರೆ ಜಾತಿಗಳು ಕಂಡು ಬರುತ್ತವೆ. ಗಾಣದಿಂದ ಎಣ್ಣೆಯನ್ನು ತೆಗೆಯುತ್ತಿದ್ದವರು ತೈಲಿಗರು ಅಥವಾ ತೆಲ್ಲಿಗರು, ತೆಲ್ಲಿಗ, ನಖರ ಅಥವಾ ತೈಲಿಗರ ಶ್ರೇಣಿಯ ಹೆಸರು ಕ್ರಿ.ಶ.೧೧೮೪ರ ನಾಗಾಯಿಯ ಶಾಸನದಲ್ಲಿದೆ. ವಿಳೆಯ ದೆಲೆಗಳನ್ನು ಮಾರಾಟ ಮಾಡುತ್ತಿದ್ದ ಒಂದು ಶ್ರೇಣಿಯು ಇದೇ ಶಾಸನದಲ್ಲಿ ಕಂಡುಬರುತ್ತದೆ. ತಂಬುಲಿಗರು ಇವರ ಕಾಲದಲ್ಲಿ ನಡೆದ ಒಂದು ಘಟನೆ ಹೀಗಿದೆ. "ಬಾಳ್ಗುಗೆ ಎಂಬ ಊರಿನ ತಂಬುಲಿಗರು ಒಂದು ಹೇರು ಎಲೆಗೆ ಎರಡು ಪಣ ಮತ್ತು ಒಂದು ಅಡ್ಡದಂತೆ ಸುಂಕವನ್ನು ಕೊಡಬೇಕೆಂದು ರಾಷ್ಟ್ರಕೂಟ ಚಕ್ರವರ್ತಿ ಕನ್ನರ (ಕೃಷ್ಣ)ನು ವಿಧಿಸಿದನು. ಇದು ನ್ಯಾಯಯುತವಾದ ಸುಂಕವಾಗಿದ್ದಿತು. ನಂತರ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಜನತೆ ಮೇಲೆ ತೆರಿಗೆ ಹೆಚ್ಚಿಗೆ ವಿಧಿಸಿದರು. ಆಗ ಗ್ರಾಮದ ತಂಬುಲಿಗರೂ ಹಾಗೂ ಇತರ ವರ್ಗದವರು ಜನತೆ ಎಲ್ಲ ಸೇರಿ ಬಂದು ತಮ್ಮ ಕರ ಹೆಚ್ಚಳವಾಗಿದೆ ಎಂದು ರಾಜನಾದ ವಿಕ್ರಮಾದಿತ್ಯನಲ್ಲಿ ಅರುಹಿಕೊಂಡರು. ಜನರ ಸಮಸ್ಯೆಗಳಿಗೆ ಸ್ಪಂದಿಸಿದ ರಾಜ ಹಿಂದೆ ಇದ್ದ ರಾಷ್ಟ್ರಕೂಟರ ಕನ್ನರನ ಕಾಲದಲ್ಲಿದ್ದ ಸುಂಕ ಪದ್ಧತಿಯನ್ನೇ ಮತ್ತೆ ಜಾರಿಗೆ ತಂದನು. ಹೀಗಾಗಿ ಸಮಾಜದಲ್ಲಿ ಇತರೆ ವರ್ಗ, ಜಾತಿಗಳು ಕಂಡು ಬರುತ್ತವೆ. ಅರಸರು ಯಾವುದೇ ವರ್ಣ, ಜಾತಿಯನ್ನು ಭೇದ-ಭಾವ ಮಾಡದೆ ಎಲ್ಲ ಪ್ರಜಾಹಿತಕ್ಕಾಗಿ, ಜನಹಿತಕ್ಕಾಗಿ ಶ್ರಮಿಸುತ್ತಿದ್ದರು. ಕರ್ನಾಟಕದಲ್ಲಿ ಆಳಿದ ಅರಸರು, ಮಂತ್ರಿಗಳು, ದಂಡನಾಯಕರು, ನಾಡಪ್ರಭುಗಳು, ನಾಡಗಾವುಂಡರು, ಮಹಾಜನರು ಅಷ್ಟೇ ಅಲ್ಲದೆ, ಜನ ಸಾಮಾನ್ಯರು ಸಹ ಅನೇಕ ಲೋಕೋಪಯೋಗಿ ಕಾರ್ಯಗಳನ್ನು ಮಾಡಿದ್ದಾರೆ. ಕೆರೆ, ಬಾವಿ ನಿರ್ಮಾಣ, ಅನ್ನಸತ್ರ, ಹೂದೋಟ, ವಸ್ತ್ರದಾನ, ದೇವಾಲಯ ನಿರ್ಮಾಣ, ಅವುಗಳ ಜೀರ್ಣೋದ್ಧಾರ ಮುಂತಾದ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದರು. ಸಮಾಜದ ಏಳಿಗೆಗಾಗಿ ಶ್ರಮಿಸಿದ್ದಾರೆ. ಸಮಾಜದಲ್ಲಿ ಕೆರೆ, ಬಾವಿಗಳ ನಿರ್ಮಾಣ ಪುಣ್ಯ ಕಾರ್ಯವೆಂದು ತಿಳಿದಿದ್ದರು. ಹಾಗಾಗಿ ಜನವಸತಿ ಇರುವ ಸ್ಥಳದಲ್ಲಿ, ಅನ್ನ ಸಮಸ್ಯೆ ವಿದ್ಯಾಭ್ಯಾಸದ ಕೊರತೆ ಇದ್ದಲ್ಲಿ ಇವುಗಳ ಕಾರ್ಯ ಮಾಡಿದರು. ಈ ಕಾರ್ಯಕ್ಕೆ ಜನ ಸಾಮಾನ್ಯರು ಸಹ ಸಹಕರಿಸಿದ್ದು ಮಹತ್ವದ್ದಾಗಿದೆ. ನಾಗಾಯಿಯ ಅಗ್ರಹಾರದಲ್ಲಿ ಶಿಕ್ಷಣ ಕೇಂದ್ರ ಸ್ಥಾಪಿಸಿದ ಮಧುಸೂದನನ ಕಾರ್ಯವನ್ನು ವರ್ಣಿಸುವ ಒಂದು ಕಂದ ಪದ್ಯ ನಾಗಾಯಿಯ (ಕ್ರಿ.ಶ.೧೦೫೮) ಶಾಸನದಲ್ಲಿ ಕಂಡುಬರುತ್ತದೆ. ಇಂದಿಗೂ ಆತನ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ.

ಪೊಡವಿಯೊಳಗೆಲ್ಲಿ ।
ನೊಪ್ಪುಡಮಿಡದಾರಮೆ ಕುಡದ ದಾನಮಿಕ್ಕುದ ಸತ್ರಂ।
ಪಡೆ (ಡಿ)ಸಲಿಸದ ದೇವಾಲಯ।
ಮಿಡದಜವಂಟಿಗೆ (ಗೋ)ಗಳೊಳವೆ ಮಧುಸೂದನನಂ॥

ಅಧಿಕಾರ, ಸಂಪತ್ತು ಇವು ಕೇವಲ ಬಾಹ್ಯ ಸುಖಕ್ಕೆ ಹೊರತು, ಆಂತರಿಕ ಸುಖಕ್ಕಿಲ್ಲ. ಆದ್ದರಿಂದ ಒಳ್ಳೆಯ ಕಾರ್ಯ, ದಾನ, ಧರ್ಮ, ಜಪ-ತಪ, ಉಪಕಾರ ಮಾಡುವ ಒಳ್ಳೆಯ ಮನಸ್ಸು ವ್ಯಕ್ತಿಯಲ್ಲಿ ಮೂಡಬೇಕು. ಇದರಿಂದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಶಾಸನಗಳು ಅಂದಿನ ಸಮಾಜಕ್ಕೂ ಹಾಗೂ ಇಂದಿನ ಸಮಾಜಕ್ಕೂ ಬಾಳಿನ ಮೌಲ್ಯವನ್ನು ಎತ್ತಿ ತೋರಿಸಿವೆ.

* * * * *

# ಅಧ್ಯಾಯ – ೫

# ಆರ್ಥಿಕ ವ್ಯವಸ್ಥೆ

೫.೧ ಅಳತೆ/ಮಾಪಕಗಳು

೫.೨ ವ್ಯಾಪಾರಿ ಸಂಘಗಳು

೫.೩ ತೆರಿಗೆ ಪದ್ಧತಿ

ಪ್ರಾಚೀನ ಕರ್ನಾಟಕ ಆರ್ಥಿಕ ವ್ಯವಸ್ಥೆಯನ್ನರಿಯಲು ಶಾಸನಗಳು ಹೆಚ್ಚಿನ ರೀತಿಯಲ್ಲಿ ಸಹಾಯಕವಾಗಿವೆ. ಪ್ರಾಚೀನ ಕಾಲದಿಂದಲೂ ಹಣಕ್ಕೆ ಬಹಳ ಪ್ರಾಮುಖ್ಯತೆ ಇದೆ. ಆರ್ಥಿಕವಾಗಿ ಆ ನಾಡು ಸಂಪತ್ ಬರಿತವಾಗಿದ್ದರಿಂದಲೇ ಅಲ್ಲಿ ಹಣಕ್ಕೆ ಬೆಲೆ ಇತ್ತು. ಆರ್ಥಿಕವಾಗಿ ಮುನ್ನಡೆ ಸಾಧಿಸಬೇಕಾದರೆ ಧರ್ಮದ ಮಾರ್ಗದಲ್ಲಿ ನಡೆಯಬೇಕೆಂಬ ನೀತಿ ಮುಂಚಿನಿಂದಲೇ ಇತ್ತು. ಜನರು ಸಮೃದ್ಧವಾಗಿದ್ದಾರೆ ಎಂದರೆ ಅಲ್ಲಿನ ಭೂಮಿ ಹಾಗೂ ಕೃಷಿ ಚಟುವಟಿಕೆಯಲ್ಲಿ ಕಾರ್ಯ ಸಾಧನೆ ಆಗಿರಬೇಕು. ಅಲ್ಲದೆ ಜನತೆಯು ಸಮೃದ್ಧಿಯಿಂದ, ಸಂತೃಪ್ತಿಯಿಂದ ಜೀವನ ಸುಖಕರವಾಗಿರಬೇಕು ಎಂಬುದು ತಿಳಿದು ಬರುತ್ತದೆ. ಫಲವತ್ತಾದ ಭೂಮಿಯಲ್ಲಿ ರೈತರು ವ್ಯವಸಾಯ ಮಾಡಿಕೊಂಡು ಜೀವನ ನಡೆಸುತ್ತಿದ್ದದ್ದು ಕಂಡುಬರುತ್ತದೆ. ಅಂದರೆ ಮೊದಲು ಜೀವನಕ್ಕೆ ಸಾಕಾಗುವಷ್ಟು ಆರ್ಥಿಕವಾಗಿದ್ದಾಗ ಆ ಜೀವನದ ಸಂಸಾರ ಸುಖ, ಶಾಂತಿ ನೆಮ್ಮದಿಯಿಂದ ಕೂಡಿದ್ದು ಕಂಡುಬರುತ್ತದೆ. ವ್ಯಕ್ತಿ ತಾನು ತೃಪ್ತನಾದಾಗ ವ್ಯವಹಾರ, ವ್ಯಾಪಾರದಲ್ಲಿ ತೊಡಗಿಸಿಕೊಳ್ಳುತ್ತಾನೆ.

**ಆರ್ಥಿಕ ವ್ಯವಸ್ಥೆ:**

ಚತುರ್ವಿಧ ಪುರುಷಾರ್ಥಗಳಲ್ಲಿ ಅರ್ಥಕ್ಕೆ ಎರಡನೆಯ ಸ್ಥಾನವಿದ್ದರೂ ಸಮಾಜದಲ್ಲಿ ಅದಕ್ಕೆ ಮೊದಲನೆಯ ಸ್ಥಾನವೆ ಸಲ್ಲುತ್ತಾ ಬಂದಿದೆ. ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಶಾಸನಗಳು ವಿಪುಲವಾದ ಸಾಮಗ್ರಿಯನ್ನು ಒದಗಿಸುತ್ತವೆ. ಪ್ರಾಚೀನ ಕಾಲದಿಂದಲೂ ವ್ಯವಸಾಯ ಜನತೆಯ ಪ್ರಮುಖವಾದ ಕಸುಬಾಗಿತ್ತು. ಹೆಚ್ಚಿನ ಶಾಸನಗಳು ದೇವಸ್ಥಾನಗಳಿಗೆ ಕೊಟ್ಟ ಭೂ ದಾನಗಳೇ ಆಗಿರುವುದರಿಂದ ವ್ಯವಸಾಯವೇ ಪ್ರಮುಖ ಉದ್ಯೋಗವಾಗಿತ್ತು. ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತರನ್ನು ಭೂಮಿ ದೇವಿಯ ಮಕ್ಕಳೆಂದೂ ಶಾಸನವೊಂದು ಕರೆದಿದೆ. (ಅನ್ನದಾನ ಸಂಪೂರ್ಣರಂ ಭೂಮಿ ಪುತ್ರಕರುಮಪ್ಪ ಚಂದಗೌಡ ಎಂಬ ಉಲ್ಲೇಖವಿದೆ) ರೈತರನ್ನು ಒಕ್ಕಲ ಮಕ್ಕಳೆಂದು ಕರೆಯುತ್ತಾರೆ. ದಾನವನ್ನು ಕೆಡಸಿದವನಿಗೆ ಬರುವ ಮಹಾ ಪಾತಕಗಳಲ್ಲಿ ಅವನ ಭೂಮಿಯು ಒಂದು. ದಾನವನ್ನು ಕೊಡುವ ವಸ್ತುಗಳಲ್ಲಿ ಭೂಮಿಯು ಬಹು ಶ್ರೇಷ್ಠವಾದ ವಸ್ತುವೆಂದು ಭಾವಿಸಿದ್ದರು. ಗದ್ದೆಗಳಲ್ಲಿ ಮುಖ್ಯವಾಗಿ ಭತ್ತ ಮತ್ತು ಕಬ್ಬುಗಳನ್ನು ಬೆಳೆಯುತ್ತಿದ್ದರು. ದೇವಸ್ಥಾನಗಳ ಪಕ್ಕದಲ್ಲಿ ಅವುಗಳಿಗೆ ಮೀಸಲಾದ ಹೂದೋಟಗಳಿರುತ್ತಿದ್ದವು. ಹೂದೋಟಗಳನ್ನು ಮಾಡುವರು ದೇವಸ್ಥಾನಕ್ಕೆ ಇಂತಿಷ್ಟು ಹೂಗಳನ್ನು ಕೊಡಬೇಕೆಂಬ ನಿಯಮವಿರುತ್ತಿತ್ತು. ದಕ್ಷಿಣ ದಿಕ್ಕಿನಲ್ಲಿರುವ ಭೂಮಿಯ ಹೂಗಳನ್ನು ಬಾಚರಸ ಸ್ವಯಂ ಭೂ ಸೋಮೇಶ್ವರ ದೇವರಿಗೆ ದಾನ ಕೊಟ್ಟ ವಿಷಯ ಕ್ರಿ.ಶ.೧೦೫೪ರ ದಿಗ್ಗಾಂವಿಯ ಶಾಸನದಿಂದ ತಿಳಿದು ಬರುತ್ತದೆ. ಮಹಾಮಂಡಳೇಶ್ವರ ಲೋಕರಸನು ಅರಲು-೩೦೦, ಮೀರಂತೆ-೩೦೦ನ್ನು ಜೀಳಾನುವೃತ್ತಿಯಿಂದ ರಾಜ್ಯವಾಳುತ್ತಿದ್ದನು. ಉತ್ತರ ದಿಕ್ಕಿನ ಹೂದೋಟ ಮತ್ತರು ಮೂರು ಧಾರಾಪೂರ್ವಕವಾಗಿ ದಾನ ಕೊಟ್ಟ ವಿಷಯ ಕ್ರಿ.ಶ.೧೦೮೭ರ ನಾಗಾಯಿಯ ಶಾಸನದಿಂದ ತಿಳಿದು ಬರುತ್ತದೆ.

ವ್ಯವಸಾಯದ ಅನುಕೂಲಕ್ಕಾಗಿ ನೀರಾವರಿ ವ್ಯವಸ್ಥೆ ಮಾಡಿದ್ದರು. ರಾಜರು, ಅಧಿಕಾರಿಗಳು, ಅಧಿಕಾರೇತರ ವರ್ಗಗಳು, ವ್ಯಾಪಾರಿಗಳು ಕೃಷಿ ಅಭಿವೃದ್ಧಿಗಾಗಿ ವಿವಿಧ ರೀತಿಯ ನೀರಾವರಿ ಪದ್ಧತಿ ಜಾರಿಗೆ ತಂದರು. ಮೂರನೆಯ ಸೋಮೇಶ್ವರನು ಅನೇಕ ಕೆರೆ, ಬಾವಿ, ಸರೋವರ, ಕೊಳ, ಕಾಲುವೆ ಮುಂತಾದ ನೀರಾವರಿ ಚಟುವಟಿಕೆಗಳ ಕಾರ್ಯವನ್ನು ಮಾಡಿದ್ದನು.

**ಕೃಷಿ ಅಥವಾ ವ್ಯವಸಾಯ**

ಶಾಸನಗಳಷ್ಟೇ ಅಲ್ಲದೆ ಇತರೆ ಕೃತಿಗಳೂ ಸಹ ಕಲ್ಯಾಣ ಚಾಳುಕ್ಯರ ಆರ್ಥಿಕ ಜೀವನದ ಮೇಲೆ ಬೆಳಕನ್ನು ಚೆಲ್ಲುತ್ತವೆ. ಭೂಮಿಯಲ್ಲಿ ವ್ಯವಸಾಯ ಮಾಡುವಾಗ ಅಲ್ಲಲ್ಲಿ ಅನೇಕ ರೀತಿಯ ಶಾಸನಗಳು ದೊರೆತಿವೆ. ಬೆಣ್ಣೆಯ ದಂಡೆ, ಕಂಗಣ್ಣಿಗೆಯ ಗುಡ್ಡೆಮಾನ್ಯ (ನಾಗಾಯಿ ಕ್ರಿ.ಶ.೧೦೮೫ರ ಶಾಸನ) ಸೌಳ (ನಾಗಾಯಿ ಕ್ರಿ.ಶ.೧೦೯೩ರ ಶಾಸನ) ಗದ್ದೆಯಲ್ಲಿ ಕೆಯ್ಗರ್ದೆ, ಕೋಡಿಯ, ಕೆಳಗಣಕೆಯ್, ಕೆಮ್ಮರಡಿ, ಮಸಂಬು, ಬೆಂಚೆ (ಹಂದರ್ಕಿ ಕ್ರಿ.ಶ.೧೧೧೯ರ ಶಾಸನ) ಮುಂತಾದ ಪದಗಳು ಆಯಾ ಪ್ರಕಾರದ ಭೂಮಿಯನ್ನು ಸೂಚಿಸುತ್ತವೆ.

ನೀರಾವರಿ ಆಶ್ರಿತ ಭೂಮಿಯನ್ನು ಗದ್ದೆ ಮತ್ತು ತೋಟಗಳಲ್ಲಿ ಹಂಚಲಾಗಿದೆ. ಶಾಸನಗಳಲ್ಲಿ ಶ್ರೀಮನ್ಮಹಾಮಂಡಳೇಶ್ವರ ಮನ್ನೆಯ ಚಂದಿಬ್ಬರಸಿಯ ಮಗ ಯರಗರಸ ಸೋಮೇಶ್ವರ ದೇವರಿಗೆ ಚಿಕ್ಕ ಮೊಗಲಿ ರಾಮೇಶ್ವರ ದೇವರಿಗೆ ಗದ್ದೆ ದಾನ ಕೊಟ್ಟ ಉಲ್ಲೇಖ ಕ್ರಿ.ಶ.೧೦೫೪ರ ದಿಗ್ಗಾಂವಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ. ಬಾಚರಸನು ಪಶ್ಚಿಮ ದಿಕ್ಕಿಗಿರುವ ಊರನ್ನು ಕೊಟ್ಟ ಕೋಲ ಮತ್ತರ ಮುನ್ನೂರು, ದಕ್ಷಿಣ ದಿಕ್ಕಿಗಿರುವ ಹೂದೋಟ ಮತ್ತರಾರು, ಮನೆಯ ನಿವೇಶನಗಳನ್ನು ಸೋಮೇಶ್ವರ ದೇವರಿಗೆ ಇಟ್ಟಿಗೆ ಊರು ಕೊಟ್ಟ ವಿಷಯ, ಹಾಗೂ ಮಹಾಮಂಡಳೇಶ್ವರ ಚಂದಿಬರಸ ಸೋಮೇಶ್ವರ ದೇವರಿಗೆ ಕಾಂಚಿಯ ಮತ್ತರೆರಡು, ನಂತರ ಲೋಕರಸ ಉತ್ತರ ದಿಕ್ಕಿನ ಗದ್ದೆಯನ್ನು ಕಾಲಡಿಯ ಮತ್ತರೆರಡು ದಾನವಾಗಿ ಕೊಟ್ಟ ಉಲ್ಲೇಖ ಕ್ರಿ.ಶ.೧೦೫೪ರ ದಿಗ್ಗಾಂವಿಯ ಶಾಸನದಿಂದ ತಿಳಿದು ಬರುತ್ತದೆ. ದಾವಣ ಭಟ್ಟರು ನಿರ್ಮಿಸಿದ ಚಿಕ್ಕ ಸಂಜೆ ಮಠದ ಜನಾರ್ದನ ದೇವರ ಜವಾಬ್ದಾರಿಯನ್ನು ಮಹಾಜನರಿಗೆ ಒಪ್ಪಿಸಿ, ಅದರ ಪೂಜಾ ವಿಧಿಗೆ ನಲವತ್ತು ಮತ್ತರು ಹೊಲ, ಹೂದೋಟ, ನಿವೇಶನ ಅಲ್ಲದೆ ನಾಗಾಯಿಯ ೪೦೦ ಮಹಾಜನರು ಗದ್ದೆ ಕೊಟ್ಟ ಉಲ್ಲೇಖ ಕ್ರಿ.ಶ.೧೧೦೭ರ ದಿಗ್ಗಾಂವಿಯ ಶಾಸನದಿಂದ ತಿಳಿದು ಬರುತ್ತದೆ.

ಶ್ರೀ ಮನ್ಮಹಾಮಂಡಳೇಶ್ವರ ಲೋಕರಸನು ಅರಲು-೩೦೦, ಮೀರಂತೆ-೩೦೦ ಬೀಳಾನುವೃತ್ತಿಯಿಂದ ರಾಜ್ಯವಾಳುತ್ತಿದ್ದನು. ಮತ್ತರು ೩೨೦, ಗದ್ದೆ ಮತ್ತರು ೪, ದೇವರ ಪೂಜೆಗಾಗಿ ಹೂದೋಟ ಮತ್ತರು ೩ನ್ನು ಧಾರಾಪೂರ್ವಕವಾಗಿ ಜನ್ನೆಯಭಟ್ಟೋಪಾಧ್ಯಾಯನಿಗೆ ದಾನ ಕೊಟ್ಟ ವಿಷಯ ಕ್ರಿ.ಶ.೧೦೮೬ರ ನಾಗಾಯಿ ಶಾಸನದಿಂದ ತಿಳಿದು ಬರುತ್ತದೆ. ದಂಡನಾಯಕ ಮದುವ್ವರಸ ಮತ್ತೆರಡು ಗದ್ದೆ ಕೊಟ್ಟ ಉಲ್ಲೇಖ ಕ್ರಿ.ಶ.೧೦೮೬ರ ನಾಗಾಯಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ. ಶ್ರೀ ಮಹಾಮಂಡಳೇಶ್ವರ ಆನೆಮರಸ, ಮಹಾದೇವಿಯಕ್ಕ ನಾಗಾಯಿಯ ಸಿದ್ದೇಶ್ವರ ದೇವರಿಗೆ ಗದ್ದೆಯ ಕಮ್ಮ ೩೦ ದಾನವಾಗಿ ಕೊಟ್ಟ ಉಲ್ಲೇಖ ನಾಗಾಯಿಯ ಕ್ರಿ.ಶ.೧೦೯೩ರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಶ್ರೀ

ಮಧುಸೂಧನನು ಶ್ವೇತ ಕೇಶವ ದೇವರಿಗೆ ಸೌಳ ಹಳ್ಳದಿಂದ ಸರ್ವನಮಸ್ಯವಾಗಿ ಕೊಟ್ಟ ಗದ್ದೆಯ ಕಮ್ಮ ೩೦. ಪಡುವಲೂರು ತೋಟ ಕೊಟ್ಟ ಉಲ್ಲೇಖ ಕ್ರಿ.ಶ.೧೦೯೩ರ ನಾಗಾಯಿಯ ಶಾಸನದಲ್ಲಿ ಉಲ್ಲೇಖಿಗೊಂಡಿದೆ. ಪೂರ್ವದಿಕ್ಕಿನ ತೋಟ ಶ್ರೀ ಇಂದ್ರಸೇನ ಭಟ್ಟಾರಕರಿಗೆ ದಾನ ಕೊಟ್ಟಿದ್ದು ಕ್ರಿ.ಶ.೧೦೯೪ರ ಇಂಗಳಗಿಯ ಶಾಸನದಲ್ಲಿ ಉಲ್ಲೇಖಿಗೊಂಡಿದೆ. ಅರಲೂರಿನ ಪಾಂಡೇಶ್ವರ ಗಡಿಂಬದ ಗಣ್ಣರಾದಿತ್ಯನಿಗೆ ಬಾಪಿ ಕಟ್ಟಿಸಲು ತೋಟ ಮತ್ತರು ಕೊಟ್ಟ ಉಲ್ಲೇಖ ಕ್ರಿ.ಶ.೧೦೯೫ರ ಇಂಗಳಗಿಯ ಶಾಸನದಲ್ಲಿ ಉಲ್ಲೇಖಿಗೊಂಡಿದೆ.

ಆದಿತ್ಯ ಭಟ್ಟೋಪಾಧ್ಯಾಯರ ಮಗಳಾದ ಶ್ರೀದೇವಿಯಕ್ಕ ತೆಂಗಳಿಯಲ್ಲಿ ಜಗನ್ನಾಥ ದೇವಾಲಯ ಕಟ್ಟಿಸಿ, ಶ್ರೀ ಮನ್ಮಹಾಮಂಡಳೇಶ್ವರ ಬಿಬ್ಬರಸನ ಅನುಮತಿಯಿಂದ ತಮ್ಮ ವೃತ್ತಿಯೊಳಗಿನ ಕಬ್ಬಿನ ತೋಟ, ಪಶ್ಚಿಮ ದಿಕ್ಕಿನಿಂದ ಕೋಲ ಮತ್ತರೊಂದು, ಅಲ್ಲಿಂದ ಉತ್ತರ ದಿಕ್ಕಿನ ಸಾಲೆಯ ಹಳ್ಳಿಯ ದಾರಿಯ ಪೂರ್ವ ದಿಕ್ಕಿನ ಕಂಚಗಾರ ಹಳ್ಳಿಯಿಂದ ಕೋಲಮತ್ತರೊಂದು, ಕಮ್ಮ ೪೬೦, ಧಾರಾ ಪೂರ್ವಕವಾಗಿ ದಾನ ಕೊಟ್ಟ ವಿಷಯ ಕ್ರಿ.ಶ.೧೧೦೬ರ ತೆಂಗಳಿಯ ಶಾಸನದಿಂದ ತಿಳಿದು ಬರುತ್ತದೆ. ವಿಕ್ರಮಾದಿತ್ಯನ ರಾಣಿ ಪಟ್ಟ ಮಹಾದೇವಿ ಮಲೆಯಮತಿದೇವಿಯು ದಾವಣ ಭಟ್ಟ ಮಾಡಿದ ಸ್ವಯಂಭೂ ಸೋಮೇಶ್ವರ ದೇವರಿಗೆ ಕೊಟ್ಟ ಕೋಲ ಮತ್ತರು ೪೦, ಹೂತೋಟ ದೇವರ ಪರಿಸೂತ್ರದೊಳಗಿನ ಭೂಮಿ ಎಲ್ಲವನ್ನು ಕೊಟ್ಟು, ಆ ದೇವರ ನೈವಿಧ್ಯಕ್ಕೆ ಗದ್ದೆ, ನಾಗಾಯಿಯ ಉತ್ತರ ದಿಕ್ಕಿನ ತೋಟ ಕಮ್ಮ ೪೦ ಕೊಟ್ಟ ಉಲ್ಲೇಖವು ಕ್ರಿ.ಶ.೧೧೦೭ರ ದಿಗ್ಗಾಂವಿಯ ಶಾಸನದಿಂದ ತಿಳಿದು ಬರುತ್ತದೆ. ಮಾರಿಸೆಟ್ಟಿಯು ತಾನು ಮಾಡಿಸಿದ ಸೂರ್ಯ ದೇವರಿಗೆಂದು ಅರ್ಧ ಮತ್ತರು ಭೂಮಿಯನ್ನು ದಾನಕೊಟ್ಟ ವಿಷಯ ಮರತೂರಿನ ಕ್ರಿ.ಶ.೧೧೨೪ರ ಶಾಸನದಿಂದ ತಿಳಿದು ಬರುತ್ತದೆ. ಗೊಂಕನೂರಿಪ್ಪತ್ತರ ಅಗ್ರಹಾರವಾದ ಮರತೂರಿನ ಕ್ರಿ.ಶ.೧೧೨೪ರ ಶಾಸನದಲ್ಲಿ ಅಲ್ಲಿನ ನೆಲ-ಜಲ, ಸಸ್ಯ, ಸಮೃದ್ಧಿಯನ್ನು ವರ್ಣಿಸಿದ್ದು ಶಾಸನದಿಂದ ತಿಳಿದು ಬರುತ್ತದೆ.

**ಅಳತೆ / ಮಾಪಕಗಳು:**

ಪ್ರಾಚೀನ ಕಾಲದಲ್ಲಿ ಎರಡು ರೀತಿಯಿಂದ ಹೊಲಗಳನ್ನು ಅಳೆಯುವ ಪದ್ಧತಿ ಕಂಡುಬರುತ್ತದೆ. ಒಂದು ಭೂಮಿಯಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ. ಇನ್ನೊಂದು ಅಳತೆಗೋಲುಗಳಿಂದ ಅಳೆಯುವುದು. ಈ ಜಿಲ್ಲೆಯ ಶಾಸನಗಳಲ್ಲಿ ಬೀಜ ಪ್ರಮಾಣದ ಅಳತೆಯ ಉಲ್ಲೇಖವಿಲ್ಲ. ಶಾಸನಗಳಲ್ಲಿ ಬೇರೆ ಬೇರೆ ಪ್ರಮಾಣದ ನೂರಾರು ಅಳತೆಯ ಗೋಲುಗಳ ಹೆಸರುಗಳು ಕಂಡುಬರುತ್ತವೆ. ಕೆಲವು ಅಳತೆಗೋಲುಗಳ ಪ್ರಮಾಣವನ್ನು ಮಾತ್ರ ಶಾಸನಗಳು ಹೆಸರಿಸುತ್ತವೆ. ಕೆಲ ಅಳತೆಯ ಗೋಲುಗಳಿಗೆ ಪ್ರತ್ಯೇಕ ಹೆಸರುಗಳಿದ್ದವು. ಆಯಾ ಊರುಗಳಲ್ಲಿ ಸುತ್ತ ಮುತ್ತ ಪ್ರಚಾರದಲ್ಲಿದ್ದ ಅಳತೆಯ ಗೋಲುಗಳಿಗೆ ಅದೇ ಹೆಸರಿನ ಊರುಗಳಿಂದ ಕರೆಯುತ್ತಿದ್ದರು. ಅಳತೆಯ ಗೋಲುಗಳ ಸಹಾಯದಿಂದ ಹೊಲಗಳನ್ನು 'ಮತ್ತರು' ಮತ್ತು 'ಕಮ್ಮ' (ಕಂಬ) ಗಳೆಂಬುದಾಗಿ ಅಳೆಯುತ್ತಿದ್ದರು. ಆಯಾ ವಸ್ತುಗಳಿಗನುಸರಿಸಿ, ಬೇರೆ-ಬೇರೆ ಪ್ರಮಾಣದಲ್ಲಿದ್ದವು. ಮಾಪಕಗಳು ಹೆಚ್ಚಾಗಿ ದವಸ, ಧಾನ್ಯಗಳ ಅಳತೆಯಲ್ಲಿ ಉಪಯೋಗವಾಗುತ್ತಿದ್ದವು. ಒಂದು ಮತ್ತರಿಗೆ ೯೦೦ಕಂಬಗಳು, ಇದಕ್ಕೆ ಆಧಾರ ಕ್ರಿ.ಶ.೧೦೯೯ರ ಈ ಶಾಸನದಲ್ಲಿ (S.I.I.;IX,1099 A.D.;P.165) ಬೇರೆ ಬೇರೆ ಭೂಮಿಗಳ ಪ್ರಮಾಣವನ್ನು ಮತ್ತರು

ಕಮ್ಮಗಳಲ್ಲಿ ಹೇಳಲಾಗಿದೆ. ಮತ್ತರು ಮತ್ತು ಕಮ್ಮ (ಕಂಬ) ಪ್ರಮಾಣ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಬುಕೆನನ್ ಎಂಬುವವರು ಒಂದು ಕಂಬವು ೪, ೧೬೯/೧೦೦೦ ಎಕರೆಗೆ ಸಮಾನವೆಂದು ಭಾವಿಸುತ್ತಾರೆ. (Economic condition in south India; P.410) ಡಾ|| ಅಳ್ತೇಕರರ ಪ್ರಕಾರ ಒಂದು ಮತ್ತರು ಸುಮಾರು ಐದು ಎಕರೆಗಳಿಗೆ ಸಮಾನ. (The Rastrakur and their Times; P.220) ಎಂಬುದು ಅವರ ಊಹೆ. ಒಂದು ಹಳೆಯ ಅಳತೆಯ ಆಧಾರದಿಂದ ಹೇಳುವುದಾದರೆ ೧೦೦೦ಕಂಬಗಳು ೪೧ ೧/೨ ಎಕರೆಗಳಿಗೆ ಸಮಾನವೆಂದು ಶ್ರೀ ಎಸ್. ಚಂದ್ರಶೇಖರ ಶಾಸ್ತ್ರೀಯವರ ಅಭಿಪ್ರಾಯ. ಆದರೆ ಇದಕ್ಕೂ ಹೆಚ್ಚು ಆಗಬಹುದು. ಹೈಹಯ ವಂಶದ ಅಯ್ಯಣನ ಸಾಮಂತ ಸಿರಿಯಮರಸನು ಭೂಮಿಯನ್ನು ಧಾರಾಪೂರ್ವಕವಾಗಿ ಮತ್ತರ ೩೦೦, ಪೂಜಾರಿಗೆ ಮತ್ತರ ೨೦ ಕೊಟ್ಟ ಉಲ್ಲೇಖ ಕ್ರಿ.ಶ.೧೦೫೪ರ ದಿಗ್ಗಾಂವಿಯ ಶಾಸನದಲ್ಲಿದೆ. ನಾಗಾವಿಯ ಮತ್ತು ದಿಗ್ಗಾಂವಿಯ ಅರಲೂರಿನ ಭಟ್ಟದರ್ಶನ ವ್ಯಾಖ್ಯಾತೃಗೆ ಮತ್ತರು ೩೫, ನ್ಯಾಸ ವ್ಯಾಖ್ಯಾತೃಗೆ ಮತ್ತರು ೩೦, ಪ್ರಭಾಕರ ವ್ಯಾಖ್ಯಾತೃಗೆ ಮತ್ತರು ೪೫, ಸರಸ್ವತಿ ಭಂಡಾರಿಗೆ ಮತ್ತರು ೩೦, ಘಟಿಕಾ ಪ್ರಹಾರಿಗೆ ಮತ್ತರು ೩೦, ಪಂಚಕೇಶ್ವರನಿಗೆ ಮತ್ತರು ೪೫, ಚಂಡೇಶ್ವರನಿಗೆ ಮತ್ತರು ೩೦ ಎಂಬುದು, ನಾಗಾಯಿಯ ಕ್ರಿ.ಶ.೧೦೫೮ರ ಶಾಸನದಲ್ಲಿ (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು; ೧೯೯೨; ಪು.೧೬) ಉಲ್ಲೇಖಗೊಂಡಿದೆ. ಆಚಾರ್ಯ ರುದ್ರಶಕ್ತಿಜಿಯವರ ಕಾಲನ್ನು ತೊಳೆದು ತಮ್ಮಲ್ಲಿಯ ಮತ್ತರು ೩೬೦ ಸರ್ವನಮಸ್ಯೆವಾಗಿ ಕೊಟ್ಟರು, ಕೊಂಡಲ್ಲಿ ಕೊಟ್ಟಲ್ಲಿ ಮಾನ ೨ ಎಂಬ ಉಲ್ಲೇಖ ಕ್ರಿ.ಶ.೧೦೭೧ರ ಇಂಗಳಗಿಯ ಶಾಸನದಲ್ಲಿ ಕಂಡುಬರುತ್ತದೆ.

ಮಹಾಮಂಡಳೇಶ್ವರ ಲೋಕರಸನ ಕಯ್ಯೊ ಧಾರಾಪೂರ್ವಕವಾಗಿ ಪಡೆದು ಕೋಲಮತ್ತರು ೩೨೦, ಕೋಲಮತ್ತರು ಸಾಸಿರದ ನಾಲ್ವರ್ತೆರಂಕದೊಳಂ, ಕೋಲಮತ್ತರು ೧೦೪೫, ಜನ್ನಯ ಭಟ್ಟೋಪಾಧ್ಯಾಯರಿಗೆ ಕೋಲಮತ್ತರು ೫೦, ಬ್ರಹ್ಮಪುರಿ ದೊಣ್ಣೆಯ ಭಟ್ಟರಿಗೆ ಮತ್ತರು ೩೦, ಪುರಾಣ ಭಟ್ಟರಿಗೆ ಮತ್ತರು ೪೦, ನಾಲ್ವರಿಗೆ ಮತ್ತರು ೫೦, ಎಂಬ ಉಲ್ಲೇಖವು ನಾಗಾಯಿಯ ಕ್ರಿ.ಶ.೧೦೮೫ರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಇವೆಲ್ಲ ದತ್ತಿ ಶಾಸನಗಳಿಗೆ ಕಳಸವಿದ್ದಂತೆ ನಾಗಾಯಿಯ ಶಾಸನವು ಕಾಳಿದಾಸ ದಂಡಾಧೀಶ ಘಟಿಕಾಸ್ಥಾನಕ್ಕಾಗಿ ೧೦೦೦ ಮತ್ತರು ಭೂಮಿಯನ್ನು ದತ್ತಿಯಾಗಿ ಬಿಟ್ಟಿದ್ದನ್ನು ಉಲ್ಲೇಖಿಸಿದೆ. ಬಾಚರಸನ ರಾಣಿ ಕಾಳಬ್ಬರಸಿಯ ಹಂದರಕಿಯ ಲೋಕೇಶ್ವರ ದೇವರಿಗೆ ಅಂಗುಳಿಗೆ ಕೋಲಮತ್ತರು ೭೫ ಎಂದು ಕ್ರಿ.ಶ.೧೦೮೬ರ ನಾಗಾಯಿಯ ಶಾಸನದಲ್ಲಿದೆ. ಸ್ವಯಂ ಭೂ ಕಾಳೇಶ್ವರ ದೇವರಿಗೆ ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನು ಮತ್ತರು ೧೨, ಸರ್ವಭಾಧವಾಗಿ ಕೊಟ್ಟ ಉಲ್ಲೇಖ ಕ್ರಿ.ಶ.೧೧೦೩ರ ಕಾಳಗಿಯ ಶಾಸನದಲ್ಲಿ ಕಂಡುಬರುತ್ತದೆ. ಗೊಂಕೇಶ್ವರ ದೇವರಿಗೆ ತೋಟ, ಕೋಟೆ, ಕಾಳುಗೆಯ ಗೆರೆಯಿಂ, ಗೊಂಕೇಶ್ವರ ದೇವರ ಶ್ರೀ ಕಲ್ಯಾಣ ಶಕ್ತಿಪಂಡಿತ ದೇವರಿಗೆ ಮನ್ನೆದಡಿ ಕೋಲಮತ್ತರು ಕೊಟ್ಟ ಉಲ್ಲೇಖ ಕಾಳಗಿಯ ಹನ್ನೆರಡನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ. ರೇಖಲದೇವಿ ತಮ್ಮ ಮಲ್ಲಿದೇವರಸರು ಕಾಳೇಶ್ವರ ದೇವರಿಗೆ ಶ್ರೀ ಮಹಾಮಂಡಳೇಶ್ವರ ವೀರಗೊಂಕರಸರು ಮತ್ತರೊಂದು ಅಸ್ತು ಮತ್ತರಾರು ಧಾರಾಮೂರ್ವಕವಾಗಿ ಕೊಟ್ಟರು. ವೀರಗೊಂಕರಸ ಹಿರಿಯರಸಿ ಮೈಳಾಲದೇವಿ ಭೂಪಮಲ್ಲಿ ದೇವರಿಗೆ ಹಿರಿಯ ಕೋಲ ಮತ್ತರು ಕೊಟ್ಟ ಉಲ್ಲೇಖ ಇದೆ ಕಾಳಗಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ.

ಭಟ್ಟೋಪಾಧ್ಯಾಯ ಶ್ರೀದೇವಿಯಕ್ಕ ಮಹಾಮಂಡಳೇಶ್ವರ ಬಿಬ್ಬರಸನ ಅನುಮತಿಯಿಂದ ತಮ್ಮ ವೃತ್ತಿಗಳೊಳಗಿನ ಮಾಣಿಕೇಶ್ವರದ ಕೋಲು ಎನ್ನುವ ಅಳತೆಯ ಹೆಸರು ಗುಲಬರ್ಗಾ, ಕೊಪ್ಪಳ, ವಿಜಾಪುರ ಈ ಭಾಗದಲಿ ಕಂಡು ಬಂದರೂ ಇಲ್ಲಿ ಕಾಣುವುದಿಲ್ಲ. ಬದಲಾಗಿ ಬೀರವೆಂಡಗನ ಕೋಲು ಕಂಡುಬರುತ್ತದೆ. ಇದನ್ನು ಕೈಯ ಮಾರಿನಿಂದ ಅಳೆಯುತ್ತಾರೆ. ಬೀರವೆಡಂಗನ ಕೋಲ ಮತ್ತರ ಒಂದು, ಅಲ್ಲಿಂದ ಬಡಗಲು ಸಾವೆ ಹಳ್ಳಿಯ ದಾರಿಯಲ್ಲಿನ ಪೂರ್ವ ದಿಕ್ಕಿನ ಕಂಚಗಾರ ಹಳ್ಳಿಯಿಂದ ಪಶ್ಚಿಮ ದಿಕ್ಕಿನ ಬೀರವಡಂಗನ ಕೋಲ ಮತ್ತರು ಒಂದು, ಕಮ್ಮ ನಾಲ್ಕುನೂರೈವತ್ತು ಅಂತು ಮತ್ತರು ಎರಡು ಧಾರಾಪೂರ್ವಕವಾಗಿ ಕೊಟ್ಟಿದ್ದು ಕ್ರಿ.ಶ.೧೧೦೭ರ ತೆಂಗಳಿಯ ಶಾಸನದಲ್ಲಿ ಉಲ್ಲೇಖವಿದೆ. ಕೊಳಗಗಳೆಲ್ಲ ದೇವಗೊಳಗ, ಅಕ್ಕಸಾಲೆಯಗೊಳಗ ಎಂಬುದು ಕ್ರಿ.ಶ.೧೧೦೮ರ ದಿಗ್ಗಾಂವಿಯ ಶಾಸನವು ಉಲ್ಲೇಖಿಸುತ್ತದೆ. ಕಮ್ಮವನ್ನು ಉಲ್ಲೇಖಿಸಿದ ಒಂದೇ ಒಂದು ಶಾಸನವೆಂದರೆ ಮರತೂರಿನದು. ಬಾಣವಂಶದ ಗೊಂಕರಸರ ಬಿಬ್ಬರಸರು ಕೊಟ್ಟ ಮತ್ತರು ೬, ಕಮ್ಮ ೬೦೦ ಪೂರ್ವ ದಿಕ್ಕಿನಿಂದ ದತ್ತಿಯನ್ನು ಉತ್ತರ ದಿಕ್ಕಿನಿಂದ ತೋಟ ಕೊಟ್ಟು, ಕಾಲಡಿಯ ಮತ್ತರ ೧, ಪೂರ್ವ ಮತ್ತು ಉತ್ತರ ದಿಕ್ಕಿನಿಂದ ಕಮ್ಮ ೪೫೦ ಕೊಟ್ಟ ಉಲ್ಲೇಖ ಕ್ರಿ.ಶ.೧೧೨೪ರ ಮರತೂರಿನ ಶಾಸನ ತಿಳಿಸುತ್ತದೆ. ವ್ಯಾಪಾರ ಸಾಮಗ್ರಿಗಳ ಅಳತೆ ಮತ್ತು ತೂಕಗಳ ವಿಷಯವಾಗಿ ಹೆಚ್ಚು ವಿವರಗಳ ಮಾಹಿತಿ ತಿಳಿದು ಬರುವುದಿಲ್ಲ. ಕೊಳಗ ಎಂಬುದು ಅಳತೆಯ ಮಾನಗಳಲ್ಲಿ ಒಂದು. ಇವು ಹೆಚ್ಚಾಗಿ ದವಸ ಧಾನ್ಯಗಳ ಅಳತೆಯಲ್ಲಿ ಉಪಯೋಗವಾಗುತ್ತಿದ್ದವು. ಬೇರೆ ಬೇರೆ ಕಡೆ ಬಳಸುತ್ತಿದ್ದ ಕೊಳಗಗಳಿಗೆ ವಿವಿಧ ಹೆಸರುಗಳನ್ನಿಡುತ್ತಿದ್ದರು. ಇದರಲ್ಲಿ ಕೊಳಗ ಅಳೆಯುವ ಸಾಧನವೂ ಆಗಿದ್ದಂತೆ ಒಂದು ಮಾಪು ಸಹ ಆಗಿತ್ತು. ಉದಾ: ದೇವಗೊಳಗ, ದಮಗೊಳಗ, (S.I.I, IX; 1034 A.D.;P.88) ದೇವಗೊಳಗದ ಬಗ್ಗೆ ದಕ್ಷಿಣ ಮತ್ತು ಉತ್ತರಕರ್ನಾಟಕದ ಹಳ್ಳಿಗಳಲ್ಲಿ ಬಳಕೆ ಇದ್ದದ್ದು ಕಂಡು ಬರುತ್ತದೆ. ಒಂದು ವರ್ಷಕ್ಕೆ ಊರಿನ ಪ್ರತಿಯೊಂದು ಕುಳವೂ ಅರ್ಚಕನಿಗೆ ಭತ್ತ, ರಾಗಿ ಮುಂತಾದ ದವಸ ಧಾನ್ಯ ಕೊಡಬೇಕೆಂದು ಗೌಡರು ನಿಗದಿಪಡಿಸಿರುತ್ತಾರೆ. ಇದು ತಪ್ಪದೆ ಎಲ್ಲರೂ ಕೊಡತಕ್ಕದ್ದು. ಇದರಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ. (ಡಿ. ಲಿಂಗಯ್ಯ; ಬೋರೆದೇವರು–ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ೫೮.೨; ಪು.೧೬) ಧಾನ್ಯಗಳ ಅಳತೆಯ ಪ್ರಮಾಣ ಕೊಳಗದಿಂದ ಆರಂಭಿಸಿ, ಮಾನ ಒಮ್ಮನ, ಇಮ್ಮನ, ಮುಮ್ಮನ ಒಕ್ಕಳು, ಇಕ್ಕಳು, ಖಂಡುಗ ಮುಂತಾದವು ಕಂಡು ಬರುತ್ತವೆ. ಗಾಣ ಎರಡಕ್ಕೆ ಒಮ್ಮನದಂತೆ ದೇವರಿಗೆ ಕೊಟ್ಟರು ಎಂಬ ಉಲ್ಲೇಖ ದಿಗ್ಗಾಂವಿಯ ಕ್ರಿ.ಶ.೧೦೫೪ರ ಶಾಸನವು ತಿಳಿಸುತ್ತದೆ.

ಅಳತೆ ಮಾಪಕಗಳಲ್ಲಿ ಎಲೆ, ಅಡಿಕೆಗಳು ಸಹ ಪ್ರಚಲಿತವಾಗಿದ್ದಿತು. ಎಲೆ ಸಂಕದ ಭಾರದ ಪ್ರಮಾಣವನ್ನು ೧೮ ಕಟ್ಟನ್ನು ದೇವರಿಗೆ ಸಲ್ಲಿಸುತ್ತಿದ್ದರು ಎಂದು ಕ್ರಿ. ಶ. ೧೨೯ರ ಇಂಗಳಗಿಯ ಶಾಸನವು ಉಲ್ಲೇಖಿಸುತ್ತದೆ. ಸೆಟ್ಟಿ ಎಂಬುವವನು ತಂಬುಲಿಗ ಜನಾಂಗದವರ ಮೇಲೆ ೨೫ ಕಟ್ಟು ವೀಳೆದೆಲೆಯ ಭಾರವನ್ನು, ಆನೆಯ ತೂಕದಷ್ಟು ಹೊಂಗೆ, ಅಡಿಕೆಯ ಸುಂಕವನ್ನು ಅವರ ಮೇಲೆ ಹೇರುತ್ತಿದ್ದನು. ಅವರು ಕೊಟ್ಟ ಸುಂಕವನ್ನು ಪಡೆದುಕೊಂಡು, ಸೂರ್ಯದೇವರಿಗೆ ದಾನ ಮಾಡಿ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದ ವಿಷಯ ಕ್ರಿ. ಶ. ೧೧೨೪ರ ಮರತೂರಿನ ಶಾಸನವು ತಿಳಿಸುತ್ತದೆ.

ಶಾಸನಗಳಲ್ಲಿ ಬೇರೆ ಬೇರೆ ಅಳತೆ ಮತ್ತು ತೂಕಗಳ ಪಟ್ಟಿಯನ್ನು ರಾಜನ ಆಡಳಿತದಲ್ಲಿದ್ದ, ವ್ಯಾಪಾರ, ವ್ಯವಹಾರದಲ್ಲಿನ ಲೆಕ್ಕವನ್ನು ಪರಿಗಣಿಸಿ ಈ ಕೆಳಗಿನಂತೆ ನೋಡಬಹುದು.

| | | | |
|---|---|---|---|
| ೧ ಖಂಡುಗ | = ೪ ಪಂಚಕ | ೧ ಬಾರ | = ೨೦ ತೊಲ |
| ೧ ಪಂಚಕ | = ೫ ಕೊಳಗ | ೧ ತೊಲ | = ೫ ಬೀಸಗೆ |
| ೧ ಕೊಳಗ | = ೪ ಬಳ್ಳ | ೧ ಬೀಸಗೆ | = ೨೦ ಪಲ |
| ೧ ಬಳ್ಳ | = ೪ ಮಾನ | ೧ ಪಲ | = ೪ ಕರ್ಷ |
| ೧ ಮಾನ | = ೪ ಸೊಲ್ಲಿಗೆ | ೧ ಕರ್ಷ | = ೪ ಸುವರ್ಣ |
| ೧ ಸೊಲ್ಲಿಗೆ | = ೪ ಗಿದ್ದಿಗೆ | | |

'ನಿವರ್ತನ' ಎಂಬುದೂ ಹೊಲದ ಅಳತೆಗಳಲ್ಲೊಂದು ಇದು ಸಂಸ್ಕೃತ ಶಾಸನಗಳಲ್ಲಿ (EC, IV; 982 A.D.; P.206) ಮಾತ್ರ ಕಾಣಬಹುದು. ನಿವರ್ತನವು ಕನ್ನಡ ಶಾಸನಗಳ ಮತ್ತರಿಗೆ ಸಮಾನವೆಂದು ಭಾವಿಸಬಹುದು. ನಿವರ್ತನ → ನಿಮರ್ತ → ಮತ್ತರ್? ಈ ಅಭಿಪ್ರಾಯವನ್ನು ತಿ.ನಂ. ಶ್ರೀಕಂಠಯ್ಯನವರು (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ; ೨೦೦೨; ಪು.೪೩೬) ವ್ಯಕ್ತಪಡಿಸಿದ್ದಾರೆ. ಮನೆಯ ನಿವೇಶ ದಿಗ್ಗಾಂವಿಯ ಕ್ರಿ.ಶ.೧೦೫೪ರ ಶಾಸನವು ತಿಳಿಸುತ್ತದೆ. ಮನೆ ನಿವೇಶನ ೬, ಮನೆಯ ನಿವೇಶನ ೮ ಮನೆಯ ನಿವೇಶನ ಒಂದು, ನಾಗಾಯಿಯ ಕ್ರಿ.ಶ.೧೦೮೫ರ ಶಾಸನ ಹಾಗೂ ಮನೆಯ ನಿವೇಶನ ಆರು, ಕ್ರಿ.ಶ.೧೦೮೬ರ ನಾಗಾಯಿಯ ಶಾಸನವು ತಿಳಿಸುತ್ತದೆ. ಹಿರಿಯ ಮತ್ತರಾರು ಮನೆಯ ನಿವೇಶನವೊಂದು ಕೊಟ್ಟ ಉಲ್ಲೇಖ ಹನ್ನೆರಡನೆಯ ಶತಮಾನದ ಕಾಳಗಿಯ ಶಾಸನವು ತಿಳಿಸುತ್ತದೆ.

**ನಾಣ್ಯಗಳು**

ಕರ್ನಾಟಕದಲ್ಲಿ ವ್ಯಾಪಾರ ವಹಿವಾಟುಗಳಲ್ಲಿ ನಾಣ್ಯಗಳನ್ನು ಬಳಸುವ ಪದ್ಧತಿ ಪ್ರಾರಂಭ ಕಾಲದಿಂದಲೂ ಬಳಕೆಯಲ್ಲಿತ್ತು. ಆದರೆ ಇದರ ನಿರ್ದಿಷ್ಟ ಕಾಲಮಾನ ಗುರುತಿಸುವುದು ನಾಣ್ಯ ಶಾಸ್ತ್ರಜ್ಞರಿಗೆ ಅಸಾಧ್ಯವಾಗಿದೆ. ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳೆಂದರೆ ಚಿನ್ನ, ಬೆಳ್ಳಿ, ತಾಮ್ರ, ಕಂಚಿನ ನಾಣ್ಯಗಳು ಕಂಡು ಬರುತ್ತವೆ. ಭಾರತದ ಇತರ ಭಾಗಗಳಲ್ಲಿದ್ದಂತೆ, ಕರ್ನಾಟಕದಲ್ಲಿಯೂ ಪಡಿಯಚ್ಚಿನ ಅಥವಾ ಮುದ್ರಾಂಕಿತ (ಪಂಚಮಾರ್ಕ್ಡ್) ನಾಣ್ಯಗಳೇ ಚಲಾವಣೆಯಲ್ಲಿದ್ದವು. ಇಂಥ ಬೆಳ್ಳಿ ನಾಣ್ಯಗಳನ್ನು ಉತ್ತರದಿಂದ ಕರ್ನಾಟಕದವರೆಗೆ ತರಬಲ್ಲವರಾಗಿದ್ದರೆ ಅವರು ವರ್ತಕರು ಮಾತ್ರ, ಶಾಸನಗಳಲ್ಲಿ ನಾಣ್ಯಗಳನ್ನು ಗದ್ಯಾಣ ಅಥವಾ ಪೊನ್ ಎಂದು ಕರೆಯಲಾಗಿದೆ. ನಿಗಳಗಳಲ್ಲಿ ಏತಗಿರಿ ನಿಗಳ ಎಂಬ ಹೆಸರುಳ್ಳ ನಾಣ್ಯಗಳು ಆಯಾ ಸ್ಥಳಗಳಲ್ಲಿ ಅವುಗಳ ಟಂಕಸಾಲೆ ಇದ್ದುದ್ದನ್ನು ಸೂಚಿಸುತ್ತವೆ. ಗದ್ಯಾಣ, ಪೊನ್‌ಗಳು ಚಿನ್ನವಾದರೆ, ಹಾಗವು ಬೆಳ್ಳಿಯ ನಾಣ್ಯವಾಗಿತ್ತು. ನಾಣ್ಯಗಳಲ್ಲಿ ಪ್ರಸಿದ್ಧಿ ಪಡೆದಿದ್ದು ಗದ್ಯಾಣ ಅಥವಾ ಪೊನ್, ಇದರ ತೂಕ ಸು. ೯೬ ಗ್ರಾಂ. ಎಂದು ಡಾ॥ ಅಲ್ತೇಕರರ (The Rastrakutas and their Times; P.367) ಅಭಿಪ್ರಾಯಪಟ್ಟಿದ್ದಾರೆ. ಸುಮಾರು ೬೩ ಗ್ರಾಂ. ಎಂದು ಡಾ॥ ಅಪ್ಪಾದೊರೈ (Economic Conditions in South India; P.710) ಅವರು ಅಭಿಪ್ರಾಯಪಟ್ಟಿದ್ದಾರೆ. ೧ ಗದ್ಯಾಣ = ಹತ್ತು ಪಣ ಅಥವಾ ಹಣ (B. K. I. I. 1106 A.D.;

P.189) ಈ ಶಾಸನದಲ್ಲಿ ಒಟ್ಟು ಆರು ಗದ್ಯಾಣಗಳ ದತ್ತಿಯನ್ನು ಹೇಳಿ, ದತ್ತಿಯ ವಿವರಣೆಯನ್ನು ಕೊಡುವಾಗ ಐದು ಗದ್ಯಾಣ + ಹತ್ತು ಪಣ ಎಂದು ಹೇಳುತ್ತದೆ. ಆದ್ದರಿಂದ ಒಂದು ಗದ್ಯಾಣವು ಹತ್ತು ಪಣಕ್ಕೆ ಸಮನೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ೧ ಪಣ = ಎರಡು ಅಡ್ಡ (ಸ. ಅರ್ಧ; ಪಾಲಿ. ಅಡ್ಡ) ಪಾಣಿನಿಯಲ್ಲಿ ಅರ್ಧ ಎಂಬ ನಾಣ್ಯದ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ; ೨೦೦೨; ಪು. ೪೩೩) ಹೆಸರಿದೆ. ೧ ಪಣ = ನಾಲ್ಕು ಹಾಗ, ೧ ಪಣ = ಹದಿನಾರು ವೀಸ (ಅಥವಾ ೨೦ ವೀಸ?) ೧ ಹಾಗ = ಎರಡು ಬೇಳೆ, ಗದ್ಯಾಣ, ಪಣ, ಅಡ್ಡ, ಹಾಗ, ಬೆಳೆ, ವೀಸ ಇವೆಲ್ಲವೂ ಪ್ರತ್ಯೇಕ ನಾಣ್ಯಗಳೆಂದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಈ ರೀತಿಯ ನಾಣ್ಯಗಳು ದೊರೆತಿರುವುದು ಬನವಾಸಿ, ಚಂದ್ರವಳ್ಳಿ, ಧಾರವಾಡ, ಚಿಕ್ಕಸಿಂದಗಿ, ಮಸ್ಕಿ, ವಡಗಾಂವ್, ಮಾಧವಪುರ, ರಾಯಚೂರು, ಸನ್ನತಿಯಲ್ಲಿ. ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದೂ, ಅಂಚಿನ ಟಂಕಸಾಲೆಗಳೆಂದು ಕರೆಯುತ್ತಿದ್ದರು. ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಮೌರ್ಯರ ಪ್ರಾರಂಭದ ಕಾಲದಲ್ಲಿಯೇ ಕಾಣುತ್ತೇವೆ. ಸನ್ನತಿಯು ಸೇರಿದಂತೆ ಕಲಬುರ್ಗಿ ಜಿಲ್ಲೆಯ ವಿವಿಧ ಭಾಗಗಳಿಂದ ಶಾತವಾಹನರ ಕಾಲದ ಪ್ರಾಚ್ಯಾವಶೇಷಗಳು ವರದಿಯಾಗುತ್ತಿರುವುದರಿಂದ, ಇನ್ನು ಹೆಚ್ಚಿನ ಸಂಖ್ಯೆಯಲ್ಲಿ ಶಾತವಾಹನರ ಕಾಲದ ನಾಣ್ಯಗಳು ದೊರಕಬಹುದು. ಶಾಸನಗಳಲ್ಲಿ ಅಳತೆ/ಮಾಪಕ ದವಸ, ಧಾನ್ಯಗಳಲ್ಲದೆ, ಕೆತ್ತಿದ ವಿಗ್ರಹಗಳ ಮಾರಾಟವೂ ಇದ್ದವೆಂಬುದಕ್ಕೆ ಇಂಗಳಗಿಯ ಕ್ರಿ.ಶ.೧೧೯೪ರ ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ ಓರ್ವ ಮಹಾಮಾಣಿಕ್ಯನ ಜಿನ ವಿಗ್ರಹದ ವ್ಯಾಪಾರಿಯ ಬಗ್ಗೆ ತಿಳಿಸುತ್ತದೆ.

ಈ ಅಳತೆ ಮಾಪಕಗಳಲ್ಲಿ ಕೆಲ ವ್ಯಾಪಾರಿಗಳು ಅಳತೆಯಲ್ಲಿ ಮೋಸ ಮಾಡಿ ಹೆಚ್ಚಿನ ಲಾಭ ಪಡೆದುಕೊಂಡದ್ದಾಗಲಿ ಅಥವಾ ಅಳೆಯುವಾಗಲೂ ಮೋಸಗಳು ಕಂಡುಬರುತ್ತವೆ. ಆದ್ದರಿಂದ ರಾಜನೇ ಸ್ವತಃ ಗದ್ದೆಯನ್ನು ಅಳತೆ ಮಾಡಿ ಅವುಗಳನ್ನು ಹೇಗೆ ಬಳಸಬೇಕೆಂದು ತಿಳಿಸಿರುವ ಸಂಗತಿಗಳು ಶಾಸನಗಳಿಂದ (EC, VIII; Sb.10, C. 800 A.D.) ತಿಳಿದು ಬರುತ್ತದೆ. ಅಳತೆ ಮತ್ತು ತೂಕದ ಮೇಲೆ ರಾಜ್ಯ ಮುದ್ರೆಗಳಿರಬೇಕೆಂದು, ಅಂದಿನ ರಾಜರು ಆಜ್ಞೆ ಹೊರಡಿಸಿದ್ದರು. ಒಂದು ವೇಳೆ ಅವುಗಳ ಮೇಲೆ ರಾಜಮುದ್ರೆ ಇರದಿದ್ದರೆ, ಯಾವುದೇ ರೀತಿ ಮಾನ್ಯ ಮಾಡಬಾರದೆಂಬ ನಿಯಮವು ಇತ್ತು. ಎತ್ತುಗಳು ಉಳುವ ಸಾಮರ್ಥ್ಯದ ಮೇಲೆ ಜಮೀನಿನ ಪ್ರಮಾಣ ನಿರ್ಧರಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ಕಂಡು ಬರುತ್ತದೆ.

**ವ್ಯಾಪಾರಿ ಸಂಘಗಳು**

ಪ್ರಾಚೀನ ಕರ್ನಾಟಕದಲ್ಲಿ ವೃತ್ತಿಗೆ ಅನುಸಾರವಾಗಿ ಜಾತಿಗಳಿದ್ದವೇ ಹೊರತು, ಜಾತಿ ಎಂಬುದು ಇರಲಿಲ್ಲ. ಮುಂದೆ ವೃತ್ತಿಯೇ ಜಾತಿಯಾಗಿ ಉಳಿಯಿತು. ಈ ವೃತ್ತಿಯ ಜನರು ಒಂದೊಂದು ಸಂಘವನ್ನು ಕಟ್ಟಿಕೊಂಡಿದ್ದರು. ಸಂಘಗಳನ್ನೇ ಪಾರಿಭಾಷಿಕವಾಗಿ ಶ್ರೇಣಿಗಳೆಂದು ಕರೆಯುತ್ತಾರೆ. (Epigraphia Indica, VI; P.166) ಒಂದು ರೀತಿಯ ವೃತ್ತಿಯನ್ನು ಅವಲಂಬಿಸುವವರು ಒಂದು ಶ್ರೇಣಿಗೆ

ಸೇರಿದವರೆಂದು ಮಿತಾಕ್ಷರವು ಹೇಳುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ವರ್ತಕರು ಮಾತ್ರವಲ್ಲದೆ ಇತರೆ ಬೇರೆ ಬೇರೆ ವೃತ್ತಿಯ ಜನರು ಒಟ್ಟಾಗಿ ಬಾಳುತ್ತಿದ್ದರು. ವ್ಯಾಪಾರಸ್ಥ ಸಂಘದ ಜನರಲ್ಲಿ ಒಗ್ಗಟ್ಟಿನ ಬಲವಿತ್ತು. ಯಾವುದೇ ಕಾರ್ಯ ಮಾಡಬೇಕಾದರೆ ಅಥವಾ ಒಂದು ಕ್ರಮ ಕೈಗೊಳ್ಳಬೇಕಾದರೆ ಎಲ್ಲರೂ ಒಂದೆಡೆ ಸೇರಿ ನಿರ್ಧಾರ ತೆಗೆದುಕೊಳ್ಳುತ್ತಿದ್ದರು. ಇದರಿಂದ ಜಾತಿ ಆಗಲಿ ಅಥವಾ ವೃತ್ತಿಗಳಾಗಲಿ ಒಂದೆಡೆ ಸೇರುವಂತೆ ಮಾಡುತ್ತಿದ್ದವು.

ಪ್ರಾಚೀನಕಾಲದಲ್ಲಿ ಕೆಲ ವರ್ತಕ ಶ್ರೇಣಿಗಳು ಕಂಡು ಬರುತ್ತವೆ. ಅವುಗಳಲ್ಲಿ ಮುಮ್ಮರಿದಂಡ, ನಖರ, ವಡ್ಡವ್ಯವಹಾರಿ, ಗವರೆ, ಗಾತ್ರಿಗ ಬೀರ, ಬೀರವಣಿಗ, ಸೆಟ್ಟಿ, ಸೆಟ್ಟಿಗುತ್ತ, ವೇಳೆಕಾರಿ ಮುಂತಾದ ಪಂಗಡಗಳಿದ್ದವು. ಇವು ಅಂದಿನ ವರ್ತಕರ ಹೆಸರುಗಳಿವೆ. ಸೆಟ್ಟಿಗಳ ಸಂಘವನ್ನು, ಸೆಟ್ಟಿಗುತ್ತವೆಂದು ಕರೆಯಲಾಗಿದೆ. ಸೆಟ್ಟಿಗಳಿಗೆ ಅವರದೇ ಆದ ಕುಲದೈವಗಳಿದ್ದು, ಅವರಲ್ಲಿ ರಾಮೇಶ್ವರ, ಬಾಚೇಶ್ವರ, ಕೇತೇಶ್ವರ ಹಾಗೂ ನಖರೇಶ್ವರರು ಮುಖ್ಯರಾಗಿದ್ದಾರೆ. ಸೆಟ್ಟಿ ಎಂಬುದು ಸಂಸ್ಕೃತ ಶಬ್ದವಾಗಿದ್ದು, ಶ್ರೇಷ್ಠ ಎಂಬುದು ಮೂಲರೂಪವಾಗಿದೆ. ಸೆಟ್ಟಿಗುತ್ತರಿಗೆ ಅವರದೇ ಆದ ಧ್ವಜ ಇತ್ತು. ಸೆಟ್ಟಿಗುತ್ತ ಎಂಬುದು ಉತ್ತರ ಪದವು ಕುತ್ತ (ಗುಂಪು) ಎಂಬುದಾಗಿರಬಹುದು. ಸೆಟ್ಟಿ, ಬಣಜಿಂಗ ವರ್ತಕರ ಸಮಾನ ಅರ್ಥವಾಗುತ್ತದೆ. ಇವರು ಈ ವೃತ್ತಿಯನ್ನೆ ವ್ಯಾಪಾರಕ್ಕಾಗಿ ಜೀವನೋಪಾಯದ ಸಾಧನವನ್ನಾಗಿಸಿಕೊಂಡರು. ಸರಕುಗಳನ್ನು ಎತ್ತು, ಕೋಣ, ಕತ್ತೆಗಳ ಮೇಲೆ ಹೇರಿಕೊಂಡು ಹೋಗಿ ಸಂತೆ–ಪಟ್ಟಣಗಳಲ್ಲಿ ವ್ಯಾಪಾರ, ವ್ಯವಸಾಯ ಮಾಡುತ್ತಿದ್ದರು. ಸರಕು ಹೇರುತ್ತಿದ್ದರಿಂದ ಇವರು ಹೇರುವ ಬಣಂಜಿಗ, ಹೇರುವ ಸೆಟ್ಟರು ಎನಿಸಿದರು. ಹೀಗೆ ಸರಕು ಹೇರುವ, ವ್ಯಾಪಾರ ಕಾರ್ಯ ನಿರ್ವಹಿಸುವ ವರ್ತಕರ ಗುಂಪಿಗೆ ಸೇರಿದ್ದಾರೆ. ಪ್ರಾಚೀನ ಕಾಲದ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳಲ್ಲಿ ನಾಗಾಯಿಯ ಕ್ರಿ.ಶ. ೧೧೯೨ರ ಶಾಸನವು ಸೆಟ್ಟಿಯರನ್ನು ಸ್ಥಳೀಯದವರು ಎಂದು ಉಲ್ಲೇಖಿಸಲಾಗಿದೆ. ಇಂಗಳಗಿಯ ಕ್ರಿ.ಶ.೧೨೦೯ರ ಶಾಸನ ಸೆಟ್ಟಿಗುತ್ತರನ್ನು, ನಾಡಶೆಟ್ಟಿ ಗುತ್ತರನ್ನು ಕುರಿತು ವಿವರಿಸಿದೆ. ವರ್ತಕರ ಬಗ್ಗೆ ಈ ಭಾಗದಲ್ಲಿ ಕಂಡುಬರುವ ಶಾಸನಗಳಲ್ಲಿ ಉಲ್ಲೇಖಿಸಿರುವಂತೆ, ಕರ್ನಾಟಕದ ವಿವಿಧ ರೀತಿಯ ವರ್ತಕರ ಸಮುದಾಯಗಳನ್ನು, ಅವರ ಸಂಘ, ಸಂಸ್ಥೆಗಳನ್ನು, ವಣಿಕರು ಹೊಂದಿದ್ದ ಸಾಮಾಜಿಕ ರಾಜಕೀಯ ಗೌರವ ಮಾನಸಮ್ಮಾನಗಳು, ಧಾರ್ಮಿಕ, ಸಾಂಸ್ಕೃತಿಕ ಮುಂತಾದ ವಿಷಯಗಳನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ವರ್ತಕರು ವ್ಯಾಪಾರವನ್ನು ಪಾರಂಪರಿಕ ವೃತ್ತಿಯಾಗಿ ರೂಢಿಸಿಕೊಂಡು ಬಂದ ಜನಾಂಗವನ್ನು ಶಾಸನಗಳಲ್ಲಿ ಕಂಡುಬಂದಿವೆ. ಮುಮ್ಮರಿದಂಡ ವರ್ತಕ ಶ್ರೇಣಿ ಶಾಸನಗಳಲ್ಲಿ ಕಂಡುಬರುತ್ತದೆ. ಮುಮ್ಮರಿ ದಂಡ ಎಂಬ ಪದದ ಅರ್ಥ, ಕಾಯಿಸಿದ ಮರಳು ಎಂಬ ಅರ್ಥವನ್ನು ಕೇಶಿರಾಜನು ಕೊಡುತ್ತಾನೆ. ಈ ಅರ್ಥವನ್ನು ಅರ್ಥೈಸುತ್ತಾ ಹೋದರೆ ಮುಮ್ಮರಿದಂಡ ವ್ಯಾಪಾರಿಗಳ ಸೈನ್ಯವೆಂಬ ಅಭಿಪ್ರಾಯವನ್ನು ವಿದ್ವಾಂಸರು (ಶಾಸನಗಳಲ್ಲಿ ಕರ್ನಾಟಕದ ವರ್ತಕರು;೧೯೮೬; ಪು.೪೧) ವ್ಯಕ್ತ ಪಡಿಸಿದ್ದಾರೆ. ಇಲ್ಲಿ ಸೈನ್ಯವನ್ನು ಕಟ್ಟಿಕೊಂಡು ಯುದ್ಧದಲ್ಲಿ ಹೋರಾಡಿ ವಿಜಯವನ್ನು ಸಾಧಿಸಲು ಮುಮ್ಮರಿದಂಡ ಪದವನ್ನು ಮುಮ್ಮರಿತಂಡ ಎಂದು ಇವರು ಬಳಸಿದ್ದಾರೆ. ಆದರೆ ಶಾಸನಗಳಲ್ಲಿ ಮುಮ್ಮರಿತಂಡ ಇಲ್ಲಿ ಉಪಯೋಗವಾಗಿಲ್ಲ. ಕಾರಣ ಇಲ್ಲಿಯ ಎರಡನೆಯ ಪದ ಗುಂಪು, ಸಮಾಜದ ಅರ್ಥ, ತಂಡವಲ್ಲ, ಕೋಲು ಅರ್ಥದ ದಂಡ. ಇದರ ನಿಜರೂಪವೇ

ಮುಮ್ಮರಿದಂಡ, ಮುಮ್ಮರಿತಂಡವಲ್ಲ. ಹೀಗಾಗಿ ಈ ಪದವನ್ನು ಮುಮ್ಮರಿದಂಡವೆಂದರೆ ಮೂರು ಮುಲಗೆಯ ದಂಡ (=ಕೋಲು) (ಅಯ್ಯಾವೊಳೆ ಐನೂರ್ವರು ಭುಲಂಕಿ ದಂಡ ಹಸ್ತರ್) ಎಂದು ಅರ್ಥ.

ಸಂಚಾರಿ ವರ್ತಕರಾಗಿದ್ದ ಮುಮ್ಮರಿದಂಡರು ಸರಕು ಹೇರಿಕೊಂಡು ಸಂತೆ, ಪೇಟೆಗೆ ಹೋಗಿ ವ್ಯಾಪಾರ ಮಾಡುವ ವರ್ತಕರಾಗಿದ್ದರು. ಸ್ಥಳದಿಂದ ಸ್ಥಳಕ್ಕೆ ಸರಕು ಸಾಗಾಣಿಕೆ ಮಾಡುತ್ತಿದ್ದರು. ಇದರಿಂದ ಮುಮ್ಮರಿದಂಡರು ಸಂಚರಿಸುವ ವರ್ತಕರೆಂದು ಹೇಳಬಹುದು. ಇಂಗಳಗಿಯ ಕ್ರಿ.ಶ.೧೨೯೮ರ ಶಾಸನದಲ್ಲಿ ಮುಮ್ಮರಿದಂಡರ ಬಗ್ಗೆ ತಿಳಿಸುತ್ತದೆ. ಈ ಗ್ರಾಮಗಳ ಶಾಸನಗಳಲ್ಲಿ ಇವರನ್ನು 'ಮೂವತ್ತಾರು ಬೀಡಿನ ಮುಮ್ಮರಿ ದಂಡರು' ಎಂದು ಉಲ್ಲೇಖಿಸುತ್ತದೆ. ಇವರು ಸರ್ವಧರ್ಮ ಸಮನ್ವಯರು, ಬುದ್ಧಿಯುಳ್ಳವರು, ವ್ಯವಹಾರದಲ್ಲಿ ಚತುರರು, ಪರಾಕ್ರಮಿಗಳು, ಪರೋಪಕಾರಿಗಳು ಆಗಿದ್ದರು. ಒಟ್ಟಿನಲ್ಲಿ ನಾಡಿನ ಉದ್ದಗಲಕ್ಕೂ ಸಂಚರಿಸಿ ವ್ಯಾಪಾರ ಮಾಡಿದವರು ಮುಮ್ಮರಿದಂಡರು.

ಪ್ರಾಚೀನ ಮತ್ತು ಮಧ್ಯ ಕಾಲೀನ ಯುಗದಲ್ಲಿ ಕಲಬುರ್ಗಿ ಜಿಲ್ಲೆಯು ವೀಳ್ಯದ ಎಲೆಯ ಮಾರಾಟಕ್ಕೆ ಪ್ರಸಿದ್ಧಿ ಪಡೆದುಕೊಂಡಿತು. ಗವರೆ ಎಂಬ ವರ್ತಕ ಶ್ರೇಣಿ ಇತ್ತು. ಇವರು ಗವರೇಶ್ವರ ಎಂಬ ದೇವರ ಆರಾಧಕರಾಗಿದ್ದರು. ಎಲೆ ಮಾರುವವರ ಸಂಘವನ್ನು ತಂಬಲಿಗ ಸಾಸಿರ್ವರು ಎಂದು ಕರೆಯಲಾಗುತ್ತಿತ್ತು. ನಾಗಾಯಿಯ ಒಂದು ಶಾಸನವು (ಕ್ರಿ.ಶ.೧೦೮೭) ಈ ವೃತ್ತಿಯವರನ್ನು ಹೊನ್ನವೇಣಿಗರು ಎಂದು ವಿವರಿಸುತ್ತದೆ. ಪ್ರಾಚೀನ ಕನ್ನಡ ನಾಡಿನ ಇನ್ನೊಂದು ವರ್ತಕರ ಶ್ರೇಣಿಯಾದ ನಖರರು ಎಂಬ ಉಲ್ಲೇಖವು ಶಾಸನದಲ್ಲಿ ಕಂಡುಬರುತ್ತದೆ. ನಖರರು ಎಂಬ ವರ್ತಕರು ಕೇವಲ ವರ್ತಕ ಎಂದಷ್ಟೇ ಅರ್ಥವಾಗಿರದೆ, ದೇವಾಲಯವೆಂತಲೂ ಅರ್ಥವಿರುವುದರಿಂದ (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೬೨;ಪು.೩೭) ಬಹುಶಃ ನಖರಗಳು ದೇವಾಲಯದ ಆಗು ಹೋಗುಗಳಿಗೆ ಸಂಬಂಧಿಸಿದ ವರ್ತಕ ಸಂಘಗಳಾಗಿರಬೇಕು. ಮುಂದೆ ಇದೇ ಅರ್ಥ ಪಟ್ಟಣದ ಒಂದು ಭಾಗವಾಗಿದ್ದರಿಂದ ಕ್ರಮೇಣ ನಖರ ಮತ್ತು ಪಟ್ಟಣ ಎಂಬ ಸಮಾನ ಅರ್ಥ ತಿಳಿಸುತ್ತದೆ. ಶಾಸನಗಳಲ್ಲಿ ಅರವತ್ತೊಕ್ಕಲು ಕೃಷಿಕರ ಸಂಘಗಳು ಕಂಡುಬರುತ್ತವೆ. ಬಣ್ಣಗಾರ ಸಂಘವನ್ನು ಕ್ರಿ. ಶ. ೧೧೯೬೨, ೧೧೯೪, ೧೨೯೮ರ ಇಂಗಳಗಿಯ ಶಾಸನಗಳು ತಿಳಿಸುತ್ತವೆ. ಇವರು ಸಂತೆ-ಪೇಟೆಗಳಿಗೆ ಬಂದ ಸರಕುಗಳನ್ನು ಖರೀದಿಸಿ ತಮ್ಮ ಅಂಗಡಿ ಹಾಗೂ ಮಳಿಗೆಯಲ್ಲಿಟ್ಟು ಮಾರಾಟ ಮಾಡುತ್ತಿದ್ದರು. ಇವರು ವ್ಯಾಪಾರದಿಂದ ವ್ಯವಹಾರ ಕಾರ್ಯಕ್ಕೆ ಜೀವ ತುಂಬಿದ್ದರು. ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ಪಟ್ಟಣಗಳಲ್ಲಿ ನಖರರಿಂದ ಆರ್ಥಿಕ ಅಭಿವೃದ್ಧಿ ಸಾಧಿಸಿತು. ಹೀಗಾಗಿ ಅವರು ಪಟ್ಟಣಗಳಲ್ಲಿಯೇ ವಾಸವಾಗಿದ್ದರು.

**ತೆರಿಗೆ ಪದ್ಧತಿ**

ಪ್ರಾಚೀನ ಕರ್ನಾಟಕ ಸುಖಿರಾಜ್ಯವಾಗಿದ್ದಿತೆ? ಆ ಜನರು ಸುಖವಾಗಿದ್ದರೆ? ಆರ್ಥಿಕ ವ್ಯವಸ್ಥೆಯು ಅವರ ಸುಖವನ್ನು ಹೆಚ್ಚಿಸಲು ಸಾಧಕವಾಗಿದ್ದಿತ್ತೆ? ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಬಹಳ ಕಷ್ಟ, ರಾಜ್ಯದ ಆದಾಯದ ಬಹುಭಾಗವು ತೆರಿಗೆಯ ಮೇಲೆ ಅವಲಂಬಿಸಿರುತ್ತದೆ. ರಾಜ್ಯದ ಬೊಕ್ಕಸವೇ ಕಂದಾಯ. ಕಂದಾಯ ರಾಜ್ಯದ ಪ್ರಜೆಗಳಿಗಾಗಿ ರಾಜನು ಸಕಾಲದಲ್ಲಿ ನೆರವಾಗುವಂತೆ

ವಿನಿಯೋಗಿಸುತ್ತಿದ್ದನು. ಕಂದಾಯ ವ್ಯವಸ್ಥೆ ಅಥವಾ ತೆರಿಗೆ ವ್ಯವಸ್ಥೆ ವೇದಕಾಲದಿಂದಲೂ ಜಾರಿಯಲ್ಲಿದ್ದದ್ದು ಕಂಡುಬರುತ್ತದೆ. ರಾಜ ಧರ್ಮದಿಂದ ಆಳ್ವಿಕೆ ಮಾಡುತ್ತಿದ್ದನು. ರಾಜ್ಯದಲ್ಲಿ ಬೆಳೆಯುವ ಬೆಳೆಯ ಆರನೆಯ ಒಂದು ಭಾಗ ರಾಜ್ಯಕ್ಕೆ ಸಲ್ಲಿಸಬೇಕಿತ್ತು. ರಾಜ ಹಾಗೂ ಪ್ರಜೆಗಳ ನಡುವೆ ಇರುವ ಸಂಬಂಧ ನಿಕಟವಾಗಿದ್ದರೂ, ರಾಜ ಮಾಡುವ ಸೇವೆಯಲ್ಲಿ ಕರ್ತವ್ಯ ಚುತನಾದರೆ ವಸೂಲಿ ಮಾಡಿದ. ಕಂದಾಯವನ್ನು ಪ್ರಜೆಗಳಿಗೆ ಹಿಂದಿರುಗಿಸುವ ಪದ್ಧತಿ ಇದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ.

ದಕ್ಷಿಣ ಕರ್ನಾಟಕದ ಶಾಸನಗಳನ್ನು ಗಮನಿಸಿದರೆ, ಪ್ರಮುಖವಾಗಿ ಕಂಡುಬರುವುದು ತೆರಿಗೆ ಪದ್ಧತಿ. ಆದರೆ ಎಷ್ಟೋ ತೆರಿಗೆ ಪದ್ದತಿ ಅರ್ಥವಾಗದೆ ರೀತಿಯಲ್ಲಿವೆ. ತೆರಿಗೆಗೆ ಸಂಬಂಧಿಸಿದ ಪದಗಳ ಬಳಕೆ ಕಂಡು ಬಂದರು, ತೆರಿಗೆಯ ವೈವಿದ್ಯತೆ ಇದ್ದ ಬಗ್ಗೆ ಉಲ್ಲೇಖಗಳು ಕಂಡು ಬರುವುದಿಲ್ಲ. ಅರ್ಥ ವ್ಯವಸ್ಥೆ ಅಥವಾ ರಾಜ್ಯದ ಅರ್ಥವ್ಯವಸ್ಥೆಗೆ ಒಂದು ನಿರ್ದಿಷ್ಟವಾದ ರೂಪ ದೊರೆತದ್ದು, ಮೌರ್ಯರ ಕಾಲದಲ್ಲಿಯೆ. ಕೌಟಿಲ್ಯನ ಅರ್ಥಶಾಸ್ತ್ರದಂತಹ ಗ್ರಂಥಗಳಲ್ಲಿ ಕಂಡುಬರುತ್ತದೆ. ಮೌರ್ಯರ ಕಾಲದ ಅರ್ಥವ್ಯವಸ್ಥೆ ತಮಗೆ ಅನುಕೂಲವಾದ ಹಾಗೆ ಅಲ್ಪ-ಸ್ವಲ್ಪ ಬದಲಾವಣೆಗಳಾದರು ಕೆಲ ಪದ್ಧತಿ ಹಾಗೆ ಮುಂದುವರೆದವು. ನಂತರ ಬಂದ ಕದಂಬರಿಂದ ಹಿಡಿದು ವಿಜಯನಗರದವರೆಗಿನ ರಾಜ ಮನೆತನಗಳಲ್ಲಿಯೂ ಇದೆ ಪದ್ಧತಿ ಮುಂದುವರೆಯಿತು.

ರಾಜನು ವಿಧಿಸಿದ ತೆರಿಗೆಯನ್ನು ಪ್ರಜೆಗಳು ಕಡ್ಡಾಯವಾಗಿ ರಾಜ್ಯಕ್ಕೆ ಸಲ್ಲಿಸಬೇಕಾಗುತ್ತಿತ್ತು. ಪ್ರತಿಯೊಬ್ಬ ಪ್ರಜೆಯ ಆದಾಯಕ್ಕೆ ತಕ್ಕಂತೆ ತೆರಿಗೆ ಹೇರಲಾಗುತ್ತಿತ್ತು. ಪ್ರಾಚೀನ ಕಾಲದಲ್ಲಿ ತೆರಿಗೆ ಮಾರಾಟದ ವಸ್ತುಗಳ ಮೇಲೆ ಹಾಗೂ ವೃತ್ತಿ, ಉದ್ಯೋಗಗಳ ಮೇಲೆ ನಿಗಧಿತ ಪ್ರಮಾಣದ ಸುಂಕಗಳನ್ನು ಹೇರಲಾಗುತ್ತಿತ್ತು. ರೈತನಾಗಲಿ ಅಥವಾ ಪ್ರಜೆಗಳಾಗಲಿ ತೆರಿಗೆ ಕಟ್ಟುವುದು ಪ್ರಾರಂಭದಲ್ಲಿ ಧಾನ್ಯಗಳ. ರೂಪದಲ್ಲಿ ಕಂಡುಬರುತ್ತಿತ್ತು. ಅಥವಾ ಭೂಮಿಯನ್ನು ಕೊಡಲಾಗುತ್ತಿತ್ತು. ಮತ್ತು ವಸ್ತು ವಿನಿಯೋಗ ಪದ್ಧತಿಯೂ ರೂಢಿಯಲ್ಲಿತ್ತು. ಕಾಲ ಕ್ರಮೇಣ ಹಣ ಸಂದಾಯ ಮಾಡುವ ಪದ್ಧತಿ ಬೆಳೆದು ಬಂದಿತು. ಮಹಾಜನರು ದೇವಾಲಯದ ಆದಾಯ ಹೆಚ್ಚಿಸುವುದಕ್ಕೆ ಅಲ್ಲಿ ಮಾರಾಟವಾಗುವ ವಸ್ತುಗಳ ಮೇಲೆ ಸುಂಕಗಳನ್ನು ವಿಧಿಸುತ್ತಿದ್ದರು. ಸುಂಕಗಳ ಮೇಲಿನ ಅಧಿಕಾರಿಯನ್ನು ಸುಂಕವೆರ್ಗಡೆ, ಸಮಸ್ತ ನಾಡ ಸುಂಕಾಧಿಕಾರಿ ಎಂದು ಕರೆಯುತ್ತಿದ್ದರು. ಸಿದ್ದವಣ, ಮುದ್ರಾಪಣ, ಅರುವಣಗಳು ದಿಗ್ಗಾಂವಿ, ನಾಗಾಯಿ, ಕಾಳಗಿ, ಮುದನೂರು ಮುಂತಾದ ಶಾಸನಗಳಲ್ಲಿ ಕಂಡುಬರುತ್ತವೆ. ದತ್ತಿಯಾಗಿ ಬಿಟ್ಟುಕೊಟ್ಟ ಹೊಲಕ್ಕೆ, ತೋಟಕ್ಕೆ ಇಂತಿಷ್ಟು ಅರುವಣವನ್ನು ಕೊಡಬೇಕೆಂದು ವಿಧಿಸುತ್ತಿದ್ದರು. ಅರುವಣ ಎಂಬುದಕ್ಕೆ ಅರುಪಣ ಎಂದಾಗಲಿ, ಧರ್ಮದ ಹಣ ಎಂದಾಗಲಿ ಅರ್ಥವಲ್ಲ. ಅರುವಣಕ್ಕೆ ಮಾನ್ಯ, ಭೂಮಿಗಳ ಮೇಲೆ ಹಾಕುವ ಆರು ಹಣದ ಕಂದಾಯ ಎಂದು ಡಿ.ಸಿ.ಸರಕಾರ ಅವರು ಅಭಿಪ್ರಾಯಪಟ್ಟಿದ್ದಾರೆ. ಇದು ಸಮರ್ಥನೀಯವಲ್ಲ. ದತ್ತಿಯಾಗಿ ಕೊಟ್ಟ ಭೂಮಿಯ ಮೇಲಿನ ತೆರಿಗೆಯನ್ನು ಸಂಪೂರ್ಣವಾಗಿ ತೆಗೆದು ಹಾಕಿದ್ದರೆ ಅದಕ್ಕೆ ಅರುವಣ, ಮುದ್ರಾಪಣ ಮುಂತಾದ ತೆರಿಗೆಗಳಿರುತ್ತಿರಲಿಲ್ಲ. ಡಾ॥ ಬಾರ್ನೆಟ್ ಅವರು ಅರುವಣವು ಮಾನ್ಯ ಭೂಮಿಗಳ ಮೇಲಿನ ತೆರಿಗೆ ಎಂದು ಅರ್ಥೈಸುತ್ತಾರೆ. (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ೨೦೦೨; ಪು.೪೪೨) ಇಂತಹ ಕಂದಾಯ ದೊರೆತಾಗ ದೇವಾಲಯ, ಕೆರೆ,

ತಟಾಕ, ಅನ್ನಸತ್ರ, ವಿದ್ಯಾರ್ಜನೆ ಮುಂತಾದ ಪುಣ್ಯ ಕಾರ್ಯಗಳಿಗಾಗಿ ಸದ್ವಿನಿಯೋಗವಾಗುತ್ತಿದ್ದುದನ್ನು ಇಲ್ಲಿನ ಶಾಸನವು ತಿಳಿಸುತ್ತದೆ.

ದತ್ತಿಯಾಗಿ ಕೊಟ್ಟ ಭೂಮಿ, ಮನೆ ನಿವೇಶನ ಮುಂತಾದವುಗಳ ಮೇಲೆ ಕರಭಾರವಿರುತ್ತಿರಲಿಲ್ಲ. ಇದನ್ನೆ ಶಾಸನಗಳಲ್ಲಿ ಸರ್ವಬಾಧಾ ಪರಿಹಾರ ಸರ್ವಸಮಸ್ಯೆ ಸಿದ್ಧಿ, ಏಕಭೋಗ ಎಂದು ಮುಂತಾದ ಕರವಿಮುಕ್ತಾರ್ಥದಲ್ಲಿ ಹೇಳಲಾಗಿದೆ. ಮೇಲಿನ ವಿವಿಧ ರೀತಿಯ ತೆರಿಗೆಗಳಿಗೆ ಸಂಬಂಧಿಸಿದ ಪದಗಳು ಕಂಡುಬರುತ್ತವೆ ಅನೇಕ ತೆರಿಗೆಗಳು ಪ್ರಜೆಗಳಿಗೆ ಭಾರವಾಗಿರಬೇಕು ಎನಿಸಿದರೂ ಇದು ಒಪ್ಪಿಕೊಳ್ಳಲಾಗುವುದಿಲ್ಲ. ಇದಕ್ಕೆ ಬದಲಾಗಿ ಇಂದಿನ ದಿನಗಳಲ್ಲಿ ಕಾಣುವ ಅರ್ಥವ್ಯವಸ್ಥೆಯಷ್ಟೆ ಅಚ್ಚುಕಟ್ಟಾದ ವ್ಯವಸ್ಥೆಯನ್ನು ಅಂದಿನ ಕಾಲದಲ್ಲೂ ಕಾಣುತ್ತೇವೆ. ತೆರಿಗೆ ಪದ್ಧತಿಯಲ್ಲಿ ಬಹು ಭಾಗ ಅರ್ಥವಾಗುವುದಿಲ್ಲ. ಕೆಲವು ಅರ್ಥವಾದರೆ ಎಷ್ಟೋ ಸಲ ಸಂದೇಹ ಉಂಟಾಗುವ ಸಾಧ್ಯತೆಗಳಿವೆ.

**ತೆರಿಗೆಯನ್ನು ಸಂಗ್ರಹಿಸುವ ಅಧಿಕಾರ ವರ್ಗ**

ಪ್ರಾಚೀನ ಕಾಲದಿಂದಲೂ ತೆರಿಗೆಗಳನ್ನು ಬರೆದಿಡುವ ಪದ್ಧತಿ ಇತ್ತೆಂದು ಕಂಡು ಬರುತ್ತದೆ. ಇವುಗಳಿಗೆ ಕಡಿತ ಅಥವಾ ಕಡತಗಳಿದ್ದಿರಬೇಕು. ಇವುಗಳ ರಕ್ಷಣೆಗಾಗಿ ಒಬ್ಬ ನಿಯುಕ್ತರಾಗಿದ್ದ ಅಧಿಕಾರಿಗಳ ನೇಮಕ ಮಾಡಲಾಗುತ್ತಿತ್ತು. ಒಂದೊಂದು ಭಾಗಕ್ಕೆ ಒಬ್ಬೊಬ್ಬರಂತೆ ಸುಂಕದ ಅಧಿಕಾರಿಯನ್ನು ರಾಜನೇ ನೇಮಿಸುತ್ತಿದ್ದನು. ದೊಡ್ಡ ವ್ಯಾಪಾರ ಕೇಂದ್ರಗಳಲ್ಲಿ ತೆರಿಗೆ ಸಂಗ್ರಹಣೆಗಾಗಿ ಬೇರೆ ಬೇರೆ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಪೆರ್ಜುಂಕದ ವೆಣ್ಣಮಯ್ಯ, ಬಿಲ್ಯೋಡೆಯ ವೆಣ್ಣಮಯ್ಯ, ವಡ್ಡರಾವುಳದ ಪೆರ್ಗಡೆ, ಬೇಚಯ್ಯಗಳ ಉಲ್ಲೇಖ ಶಾಸನಗಳು ತಿಳಿಸುತ್ತವೆ. ರಾಷ್ಟ್ರಕೂಟರ ಕಾಲದಲ್ಲಿದ್ದ ತೆರಿಗೆ ಪದ್ಧತಿ ಮುಂದೆ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಹೆಚ್ಚಾಯಿತು. ರಾಜ ಆರನೆಯ ವಿಕ್ರಮಾದಿತ್ಯನಲ್ಲಿ ಪ್ರಜೆಗಳು ತಮ್ಮ ಕಷ್ಟಗಳನ್ನು ಹೇಳಿಕೊಂಡರು. ರಾಷ್ಟ್ರಕೂಟರ ಕಾಲದಲ್ಲಿ ತೆರಿಗೆ ಕಟ್ಟುವುದು ಕಡಿಮೆ ಇತ್ತು. ಆ ಕಾರಣಕ್ಕಾಗಿ ಹಿಂದಿನ ತೆರಿಗೆ ಪದ್ಧತಿಯನ್ನೇ ಜಾರಿಗೆ ತರಲು ಮನವಿ ಮಾಡಿಕೊಂಡರು. ಆದರೆ ತೆರಿಗೆ ಅಧಿಕಾರಿಗಳಿಗೆ ಕೆಲವು ಸಲ ತೆರಿಗೆ ವಿಷಯದಲ್ಲಿ ಪ್ರಜೆಗಳಿಗೆ ಹಿಂಸಿಸಿದಾಗ ಅದನ್ನು ಪ್ರತಿಭಟಿಸಿ ವೀರನೊಬ್ಬನು ಹೋರಾಡಿ ಮಡಿದ. ಅನ್ಯಾಯಕ್ಕೆ ಒಳಗಾದ ಜನರು ಇದನ್ನು ಸಹಿಸದೆ ಪ್ರತಿಭಟಿಸಿದ ನಿದರ್ಶನಗಳು ಇವೆ. ಒಟ್ಟಿನಲ್ಲಿ ಜನತೆಗೆ ತೆರಿಗೆ ಹೊರಲಾರದಷ್ಟು ಭಾರವಾಗಿದ್ದಿತು. ತೆರಿಗೆ ಹೆಚ್ಚಾಗಿ ಹಾಕಿದರೆ ಜನರಿಗೆ ಹೊರಲಾರದ ಹೊರೆಯಾಗಿ ಪರಿಣಾಮಿಸಬಹುದೆಂದು ಮಹಾಭಾರತವು (ಕನ್ನಡ ಶಾಸನಗಳ ಸಾಂಸ್ಕೃತಿ ಅಧ್ಯಯನ;೨೦೦೨;ಪು.೪೪೩) ಸ್ಪಷ್ಟೋಕ್ತಿಗಳಲ್ಲಿ ಎಚ್ಚರಿಸುತ್ತದೆ. "ದೇಶವು ಹಸುವಿದ್ದಂತೆ, ಪ್ರಜೆಗಳು ಕರುಗಳಿದ್ದಂತೆ, ಎಲ್ಲಾ ಹಾಲನ್ನು ಸ್ವಂತಕ್ಕೆ ಕರೆದುಕೊಂಡರೆ ಕರುಗಳು ಬಡವಾಗಿ ಮುಂದೆ ಭಾರವನ್ನು ಹೊರಲು ಅಸಮರ್ಥವಾಗುತ್ತದೆ. ಹಾಲನ್ನು ಕರೆಯಲಿ, ಆದರೆ ಕೆಚ್ಚಲಿಗೆ ನೋವಾಗದಿರಲಿ." ಎಂದು ಅರ್ಥಶಾಸ್ತ್ರದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಲು ಇದೊಂದು ಉದಾಹರಣೆಯಾಗಿದೆ. ಬಳ್ಳಿಗೆ ನೋವಾಗದಂತೆ ದುಂಬಿಯು ಜೇನನ್ನು ಹೀರುವಂತೆ ಜನರಿಂದ ತೆರಿಗೆ ವಸೂಲಿ ಮಾಡಬೇಕು. ಆವಾಗ ಪ್ರಜೆಗಳಿಗೆ ತೆರಿಗೆ ಭಾರವಾಗಿ ಪರಿಣಮಿಸುವುದಿಲ್ಲ. ತೆರಿಗೆ ವಸೂಲಿ ಮಾಡಿದ ಅಧಿಕಾರಿಗಳು ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆ ಹೇರಿ, ಅವರಿಂದ ವಸೂಲಿ ಮಾಡುತ್ತಿದ್ದರು. ಆದರೆ ಈ ವಿಷಯ ರಾಜನಿಗೆ ತಿಳಿಸುತ್ತಿರಲಿಲ್ಲ. ಹಾಗಾಗಿ ಕ್ರಮೇಣ ಪ್ರಜೆಗಳ ಮೇಲೆ ತೆರಿಗೆ ಭಾರವಾಗಿದಿತ್ತು. ಕೆಲ ಶಾಸನಗಳಲ್ಲಿ ಕಿರುಕುಳ

ಎಂಬ ಪದ ಕಂಡು ಬರುತ್ತದೆ. ಕಿರುಕುಳ ಪದದ ಅರ್ಥ ಚಿಕ್ಕ ಚಿಕ್ಕ ತೆರಿಗೆ ಎಂದರ್ಥ. ಕ್ರಮೇಣ ಇದೇ ಹಿಂಸೆ ರೂಪದಲ್ಲಿ ಬಂದಿರಬೇಕು. ತೆರಿಗೆಗಳ ಭಾರವನ್ನು ಹೊರಲಾರದೆ, ಕಾಡಿನಲ್ಲಾದರೂ ಸುಖವಾಗಿರಬಹುದು. ಊರು ಬೇಡ ಎಂದು ಎಷ್ಟೋ ಜನರು ಗ್ರಾಮಗಳನ್ನು ತೊರೆದದ್ದುಂಟು. ಎಷ್ಟೋ ಸಲ ತೆರಿಗೆ ಅಧಿಕಾರಿಗಳಿಗೆ ಜನರು ಬಾಯಿಗೆ ಬಂದಿದ್ದು ಬೈದಿದ್ದುಂಟು. ಹೀಗಾಗಿ ಹೊಲದ ಮೇಲಿನ ತೆರಿಗೆ ತೆಗೆದು ಹಾಕಿದ್ದು ಶಾಸನಗಳಲ್ಲಿ ಕಂಡುಬಂದಿದೆ. ರಾಜ್ಯದ ಮೂಲ ಆದಾಯ ಕಂದಾಯ. ಕಂದಾಯವಾಗಿದ್ದರಿಂದ ರಾಜನು ಸಕಾಲದಲ್ಲಿ ಆ ಕಂದಾಯ ಲೋಕೋಪಯೋಗ ಕಾರ್ಯಕ್ಕಾಗಿ ಅದನ್ನು ವಿನಿಯೋಗಿಸುತ್ತಿದ್ದನು. ಈ ತೆರಿಗೆ ಸಂದಾಯ ಮಾಡುವ ಪದ್ಧತಿ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ;೨೦೦೩;ಪು.೪೪೩) ಕಂಡು ಬರುತ್ತದೆ ಉದಾ- ಒಬ್ಬ ವ್ಯಕ್ತಿ ಒಂದು ಊರಿನ ದೇವಸ್ಥಾನಕ್ಕೆ ತನ್ನ ಅಂಗಡಿಯ ಆದಾಯದ ಒಂದು ಮನ ಜೋಳಕ್ಕೆ ಒಂದು ಸೊಂಟಿಗೆ ಜೋಳವನ್ನು ಕೊಟ್ಟಿದ್ದಾರೆ. ಹಾಗಾಗಿ ವ್ಯಕ್ತಿಯ ಆದಾಯ ಜೋಳದ ರೂಪದಲ್ಲಿ ಇದ್ದಿತೆಂದು ಊಹಿಸಬಹುದು. ಎಂದರೆ ಜನರು ತಾವು ಬೆಳೆದ ಧಾನ್ಯಗಳನ್ನು ಅಂಗಡಿಗೆ ಮಾರ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ಪದ್ಧತಿ ಈಗಲೂ ಹಳ್ಳಿಗಳಲ್ಲಿದದ್ದು ನೆನಪಿಸಿಕೊಳ್ಳಬಹುದು. ಅಣೆಕಟ್ಟು, ಕೆರೆಗಳನ್ನು ಕಟ್ಟಿಸುವುದು, ದೇವಸ್ಥಾನಗಳನ್ನು ಕಟ್ಟಿಸಿ ದತ್ತಿ ಬಿಡುವುದರ ಮೂಲಕ ರಾಜ್ಯಾದಾಯದ ಒಂದು ಭಾಗ ಸಾರ್ವಜನಿಕರಿಗೆ ತಲುಪುತ್ತಿದ್ದಿತು. ಅಗ್ರಹಾರಗಳಲ್ಲಿ ವಿದ್ಯಾಭ್ಯಾಸಕ್ಕಾಗಿ ಸಹಾಯ ಮಾಡುವುದು. ಊರಿನ ದೇವಸ್ಥಾನಕ್ಕೋ, ಕೆರೆಗೋ, ಸತ್ರಕ್ಕೋ, ಬಿಟ್ಟು ಕೊಡುತ್ತಿದ್ದರಿಂದ ತೆರಿಗೆ, ಗ್ರಾಮಕ್ಕೆ ನೇರವಾಗಿ ಕಂದಾಯ ಸಕಾಲದಲ್ಲಿ ಸಂದಾಯವಾಗುತ್ತಿತ್ತು. ಸಂದಾಯವಾದ ಆದಾಯ ರಾಜ ಪ್ರಜೆಗಳ ಕಲ್ಯಾಣ ಕಾರ್ಯಕ್ಕಾಗಿ ವಿನಿಯೋಗಿಸುತ್ತಿದ್ದನು.

ಪ್ರಾರಂಭದಿಂದಲೂ ಅನೇಕ ರಾಜಮನೆತನಗಳು ಆಳಿದ ಈ ಭಾಗದ ರಾಜ್ಯ ಹಾಗೂ ಜನತೆಯ ಸುಖ ದುಃಖಗಳನ್ನುಂಡು ನೆನಪಿಸಿಕೊಳ್ಳುವಂತಹ ಶಾಸನಗಳು ಈ ಭಾಗದಲ್ಲಿ ಕಂಡುಬರುತ್ತವೆ. ಒಬ್ಬ ರಾಜನ ಕಾಲದಲ್ಲಿ ಒಂದು ಭಾಗದ ಜನರು ಸುಖದಿಂದ ಇದ್ದರೆ, ಅದೇ ವೇಳೆಗೆ ಇನ್ನೊಂದೆಡೆ ಜನರು ಕಷ್ಟದಲ್ಲಿ ಸಿಲುಕಿ ಒದ್ದಾಡುತ್ತಿರುತ್ತಾರೆ. ಹಾಗಾಗಿ ಶಾಸನಗಳು ಸುಖ-ದುಃಖಗಳ ಎರಡು ಮುಖದ ನಾಣ್ಯಗಳಾಗಿವೆ. 'ಸುಖ'ದ ಕಲ್ಪನೆ ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ಭಿನ್ನವಾಗುತ್ತದೆ. ಯಾವ ಒಂದು ಕಾರಣಕ್ಕಾಗಿ ದೇಹ ತ್ಯಾಗ ಮಾಡಿದ ವೀರನನ್ನು ಜನರು ಸ್ಮರಿಸುತ್ತಾರೆ. ಗೌರವ ಸಲ್ಲಿಸುತ್ತಿರುವ ಕಾಲವದು. ಆದರೆ ಶಾಸನಗಳು ದುಃಖಕ್ಕಿಂತಲೂ, ಸುಖ, ಶಾಂತಿ, ಸಮೃದ್ಧಿ, ಸಂತೃಪ್ತಿಯ ಜೀವನದ ಉಲ್ಲೇಖವೇ ಕಂಡುಬರುತ್ತವೆ ಹೊರತು, ದುಃಖದ ಅಥವಾ ಕಷ್ಟದ ಬಗ್ಗೆ ತಿಳಿಸುವ ಶಾಸನಗಳು ತೀರ ವಿರಳ. ಹೀಗಿರುವಾಗ ಆಧುನಿಕ ಅರ್ಥಶಾಸ್ತ್ರದ ಸುಖ ದ ಕಲ್ಪನೆಯಿಂದ ಆರ್ಥಿಕ ಮಟ್ಟ ಅಳೆಯುವುದು ತಪ್ಪಾಗುತ್ತದೆ. ಕೆಲವು ಸಲ ಆರ್ಥಿಕ ಅಭಿವೃದ್ಧಿಯಲ್ಲಿ ಕುಸಿತವು ಕಂಡು ಬಂದಿದ್ದುಂಟು. ಬರಗಾಲ, ಭೀಕರ ಕ್ಷಾಮ, ಕ್ಷಯ, ಸಾಂಕ್ರಾಮಿಕ ರೋಗಗಳಿಗೆ ರಾಜ್ಯದ ಭಾಗಗಳು ತುತ್ತಾದಾಗ ಆರ್ಥಿಕವಾಗಿ ಸಮಸ್ಯೆಗೀಡಾಗುತ್ತವೆ. ಆದ್ದರಿಂದ ಪ್ರಾಚೀನ ಕರ್ನಾಟಕ ಸುಖಿ ರಾಜ್ಯದ ಕಲ್ಪನೆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ಬಹುಮಟ್ಟಿಗೆ ಸಂಪೂರ್ಣವಾಗಿ ಆರ್ಥಿಕ ಮಟ್ಟ ಉತ್ತಮವೆಂದು ತಿಳಿದುಕೊಳ್ಳಬಹುದು.

* * * * *

ಗತಕಾಲದ ಇತಿಹಾಸವನ್ನು ನಾವು ಕೆದಕಿದಾಗ ಕಾಲನ ತುಳಿತಕ್ಕೆ ಒಳಗಾಗಿ ಅನೇಕ ಧರ್ಮಗಳು ನಾಶವಾದವು. ಪ್ರಾಚೀನ ಕಾಲದಲ್ಲಿ ತನ್ನದೇ ಆದ ಅಸ್ತಿತ್ವ ಬೆಳೆಸಿಕೊಂಡು ಬಂದಿರುವುದು ಅಲ್ಲಗಳೆಯುವಂತಿಲ್ಲ. ಅದರಲ್ಲೂ ಕಲಬುರ್ಗಿ ಜಿಲ್ಲೆ ತುಂಬಾ ಮಹತ್ವದ್ದಾಗಿದೆ. ಚತುರ್ವಿದ ಪುರುಷಾರ್ಥಗಳಲ್ಲಿ ಧರ್ಮವೂ ಒಂದು. ಲೌಕಿಕದಂತೆ ಪಾರಮಾರ್ಥಿಕದೆಡೆಗೆ ಗಮನ ನೀಡುವ ಪರಂಪರೆ ಈ ನಾಡಿನ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿ ಬೆಳೆದಿದೆ. 'ರಾಜಾ ಕಾಲಸ್ಯ ಕಾರಣಂ' ಆಗಿರುವುದರಿಂದ ವಂಶಾವಳಿ ಬದಲಾಗುತ್ತ ಹೋದಂತೆ ಧಾರ್ಮಿಕವಾದ ಹೊಸ ಹೊಸ ಪ್ರವಾಹಗಳು ಈ ಜಿಲ್ಲೆಯಲ್ಲಿ ಹರಿದು ಬಂದವು. ಪ್ರಾಚೀನ ಕಾಲದಿಂದಲೂ ಈ ಭಾಗದಲ್ಲಿ ಅಸ್ತಿತ್ವದಲ್ಲಿದ್ದ ಧರ್ಮಗಳ ಚರಿತ್ರೆಯನ್ನು ತಿಳಿಯಲು ಉಳಿದೆಲ್ಲ ಆಕರಗಳಿಗಿಂತ ಹೆಚ್ಚಾಗಿ ಶಾಸನಗಳನ್ನೇ ಅವಲಂಬಿಸಬೇಕಾಗಿದೆ.

ಕಲಬುರ್ಗಿ ಜಿಲ್ಲೆಯ ಇತಿಹಾಸ ಸಂಪತ್ತು, ಸಮೃದ್ಧಿಯ ಆಗರ. ಇಲ್ಲಿನ ದೇವಾಲಯಗಳು ಐತಿಹಾಸಿಕ ಮಹತ್ವ ಪಡೆದುಕೊಂಡಿವೆ. ಸ್ಮಾರಕಗಳನ್ನು ನೋಡಲು ಅಜಂತಾ, ಎಲ್ಲೋರಾಗೆ ಹೋಗಬೇಕೆಂಬ ನಿಯಮವೇನಿಲ್ಲ. ನಮ್ಮಲ್ಲಿರುವ ಸ್ಥಳಗಳನ್ನೇ ನೋಡುವ ಮನಸ್ಸು, ಕಾಣುವ ಕಣ್ಣುಗಳಿದ್ದರೆ ಸಾಕು. ಈ ಸ್ಥಳಗಳು ಗತಕಾಲದ ಚರಿತ್ರೆಯನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿದೆ. ಕುಂತಲ ದೇಶವೆಂದು ಖ್ಯಾತಿ ಪಡೆದ ಕಲಬುರ್ಗಿ ಪ್ರದೇಶದ ವೈಭವ ಇಡೀ ಪ್ರಪಂಚಕ್ಕೆ ಚಿರಪರಿಚಿತವಾದದ್ದು. ಕಲಬುರ್ಗಿ ಜಿಲ್ಲೆಯ ಮಹತ್ವದ ಧಾರ್ಮಿಕ ಸ್ಥಳಗಳೆಂದರೆ, ಚಿತ್ತಾಪುರ ತಾಲೂಕಿನ ನಾಗಾಯಿ, ದಿಗ್ಗಾಂವ, ತೆಂಗಳಿ ಮುಂತಾದವುಗಳು, ಅಗ್ರಹಾರ, ಬ್ರಹ್ಮಪುರಿ, ಘಟಿಕಾಲಯಗಳಾಗಿ ಶಿಕ್ಷಣದ ಕೇಂದ್ರಗಳಾಗಿದ್ದವು. ಸನ್ನತಿ, ಕನಗನಹಳ್ಳಿ ಮುಂತಾದವುಗಳು ಬೌದ್ಧರ ನೆಲೆಗಳಾಗಿದ್ದವು. ದಿಗ್ಗಾಂವಿ, ನಾಗಾಯಿ, ಮರತೂರು ಮುಂತಾದವು ವೈದಿಕ ಧರ್ಮದ ಕೇಂದ್ರಗಳಾಗಿದ್ದವು. ಇಂಗಳಗಿ, ತೆಂಗಳಿ ಇವು ಜೈನರ ಅಗ್ರಹಾರ ಕೇಂದ್ರಗಳಾಗಿದ್ದವು. ಈ ಎಲ್ಲ ಮಾಹಿತಿ ಇಲ್ಲಿ ದೊರೆತ ಶಾಸನಗಳಿಂದ ತಿಳಿದು. ಬರುತ್ತದೆ. ಪುರಾತತ್ವ ಕ್ಷೇತ್ರದಲ್ಲಿ ಇತ್ತೀಚೆಗೆ ನಡೆದ ಸಂಶೋಧನೆಯು ಕರ್ನಾಟಕದಲ್ಲಿ ಬೌದ್ಧ ಧರ್ಮದ ಚರಿತ್ರೆ ಮೇಲೆ ಹೆಚ್ಚಿನ ಬೆಳಕು ಬೀರಿವೆ. ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನಿಂದ ಹರಿದ ಭೀಮಾ ನದಿ ತೀರದ ಮೇಲಿನ ಸನ್ನತಿ ಹೊರನೋಟಕ್ಕೆ ಅಂತಹ ಯಾವ ವಿಶೇಷವು ಇಲ್ಲದ ಚಿಕ್ಕ ಗ್ರಾಮ. ಸನ್ನತಿಗಳಲ್ಲಿ ದೊರೆತಂಥ ಪ್ರಾಕೃತ ಶಾಸನಗಳಿಂದ ಬೌದ್ಧ ಧರ್ಮ ಈ ಭಾಗದವರೆಗೆ ವ್ಯಾಪಿಸಿತ್ತು ಎಂಬುದಾಗಿ ತಿಳಿದು ಬರುತ್ತದೆ. ಇತ್ತೀಚೆಗೆ ಸನ್ನತಿಯಲ್ಲಿ ದೊರೆತಂತಹ ಶಿಲ್ಪಗಳಿಂದ ಅಶೋಕನ ಪೂರ್ವದಲ್ಲಿಯೇ ಬೌದ್ಧ ಧರ್ಮದ ಕುರುಹುಗಳು ಇದ್ದವು ಎಂಬುದು ಸಂಶೋಧನೆಯಿಂದ ತಿಳಿದು ಬಂದಿದೆ. ಈ ಸ್ಥಳದಲ್ಲಿ ಬೌದ್ಧ ಧರ್ಮದ ಅವಶೇಷಗಳು ಕಳೆದ ಇಪ್ಪತ್ತು ಶತಮಾನಗಳಿಂದ ಮಳೆ, ಬಿಸಿಲಿಗೆ ಮೈ ಒಡ್ಡಿ ನಿಂತಿವೆ. ಬೌದ್ಧ ಅವಶೇಷಗಳು ಸುಮಾರು ಎರಡು ಮೈಲಿಗಳಷ್ಟು ಉದ್ದಕ್ಕೆ ಸನ್ನತಿ ಗ್ರಾಮದಿಂದ ಕನಗನಹಳ್ಳಿಯವರೆಗೆ ಹಬ್ಬಿದೆ.

**ಬೌದ್ಧಧರ್ಮ**

ಕ್ರಿ.ಪೂ. ಆರನೆಯ ಶತಮಾನದಲ್ಲಿ ಭಾರತದಲ್ಲಿ ಅಶಾಂತಿ, ಅಹಿಂಸೆ, ಶೋಷಣೆ, ಮೂಢನಂಬಿಕೆಯಿಂದ ಜನರು ತೊಳಲಾಡುತ್ತಿದ್ದರು. ಯಾವುದೇ ಒಂದು ಧರ್ಮಕ್ಕಾಗಿ ಹಾತೊರೆಯುತ್ತಿದ್ದರು. ಅಂತಹ ವೇಳೆಗೆ ಜೈನ ಧರ್ಮ, ಬೌದ್ಧ ಧರ್ಮಗಳು ಉದಯಗೊಂಡವು. ಬೌದ್ಧ ಧರ್ಮದ ಸ್ಥಾಪಕ ಗೌತಮ ಬುದ್ಧ ತನ್ನ ರಾಜ್ಯ, ಅರಮನೆ ತೊರೆದು ಲೋಕ ಕಲ್ಯಾಣಕ್ಕಾಗಿ ಹೊರಟು ಬೌದ್ಧ ಧರ್ಮದ ತತ್ವಗಳನ್ನು ಇಡೀ ಜಗತ್ತಿಗೆ ಸಾರಿದ. ಹಾಗಾಗಿ ಬೌದ್ಧ ಧರ್ಮ ವಿಶ್ವದ ಧರ್ಮದಗಳಲ್ಲಿ ಪ್ರಮುಖ ಧರ್ಮವಾಗಿ ಬೆಳೆಯಿತು.

ಬೌದ್ಧ ಧರ್ಮದ ತತ್ವಗಳಾದ, ಜೀವನವು ದುಃಖದಿಂದ ಕೂಡಿದೆ. ಆಸೆಯೇ ದುಃಖಕ್ಕೆ ಮೂಲ ಕಾರಣ, ಆಸೆಗಳನ್ನು ತೊರೆಯಬೇಕಾದರೆ ಅಷ್ಟಾಂಗ ಮಾರ್ಗಗಳನ್ನು ಅನುಸರಿಸಬೇಕು ಎಂದು ಬುದ್ಧನು ಬೋಧಿಸಿದ್ದಾನೆ. ಈ ತತ್ವಗಳು ಸಾಮಾನ್ಯ ಜನರು ಪಾಲಿಸಬಹುದಾಗಿತ್ತು. ಬೌದ್ಧ ಧರ್ಮದಲ್ಲಿ ಮೂರ್ತಿ ಪೂಜೆ ಇರಲಿಲ್ಲ. ಅಶೋಕ ಬೌದ್ಧ ಧರ್ಮದ ಅನುಯಾಯಿಯಾಗಿದ್ದನು. ಬೌದ್ಧ ಸಭೆಗಳು ಈತನ ಕಾಲದಲ್ಲಿ ನಡೆದಿದ್ದವು. ಈತನು ತನ್ನ ಆಳ್ವಿಕೆಯ ಅವಧಿಯಲ್ಲಿ ಬೌದ್ಧ ಧರ್ಮದ ಪ್ರಚಾರಕ್ಕಾಗಿ ಶ್ರಮಿಸಿದನು. ಮೊಗ್ಗಲಿ ಪುಟ್ಟ ತಿಸ್ಸನು ಅಶೋಕನನ್ನು ಬೌದ್ಧ ಧರ್ಮಕ್ಕೆ ಮತಾಂತರಗೊಳಿಸಿದನು. ಸರಳವಾದ ತತ್ವಗಳಿಂದ ದೇಶ ವಿದೇಶದಲ್ಲಿ ಬೌದ್ಧ ಧರ್ಮ ಪ್ರಾಮುಖ್ಯತೆ ಪಡೆದುಕೊಂಡಿತು. ಹೀನಾಯಾನ ಮತ್ತು ಮಹಾಯಾನ ಎಂಬ ಎರಡು ಪಂಥಗಳು ಕಂಡು ಬರುತ್ತವೆ. ಬೌದ್ಧ ಧರ್ಮದ ತತ್ವಗಳು ಇಂದಿಗೂ ಪ್ರಾಮುಖ್ಯತೆ ಪಡೆದುಕೊಂಡಿವೆ.

**ಬೌದ್ಧಕೇಂದ್ರ ಸನ್ನತಿ**

ಪ್ರಾಗೈತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವದ ಪ್ರಾಚೀನ ನೆಲೆಗಳಲ್ಲಿ ಸನ್ನತಿ ಒಂದಾಗಿದೆ. ಹಳೆ ಶಿಲಾಯುಗದ ಆಯುಧಗಳು ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಗೆ ಸೇರಿದ ಬೃಹತ್ ಶಿಲಾ ಶಾಸನಗಳು ಇಲ್ಲಿ ದೊರತಿವೆ. ಸನ್ನತಿ ಒಂದು ಧಾರ್ಮಿಕ ಸ್ಥಳವಾಗುವುದರ ಜೊತೆಗೆ ಬೌದ್ಧರ ಯಾತ್ರಾ ಸ್ಥಳವು ಆಗಿತ್ತು. ಕರ್ನಾಟಕದ ಅತಿ ದೊಡ್ಡ ಬೌದ್ಧ ನಿವೇಶನವಾಗಿದೆ. ಇನ್ನೂ ಹೆಚ್ಚಿನ ಪರಿಶೋಧನಾ ಕಾರ್ಯ ಮುಂದುವರೆದರೆ ಹೆಚ್ಚಿನ ಅವಶೇಷಗಳು ಪತ್ತೆಯಾಗಬಹುದು. (ಕ್ರಿ.ಶ.೧-೨ ಶತಮಾನ) ಸು.೭೭ (ಒಟ್ಟು ೮೧) ಪ್ರಾಕೃತ ಭಾಷೆಯಲ್ಲಿರುವ ಬ್ರಾಹ್ಮಿ ಶಾಸನಗಳು ದೊರಕಿರುವುದು ಗಮನಾರ್ಹವಾಗಿದೆ. ಇತ್ತೀಚಿನ ಭೂಉತ್ಖನನದಲ್ಲಿ ಅನೇಕ ಅವಶೇಷಗಳು ಪತ್ತೆ ಹಚ್ಚಲಾಗಿದ್ದು, ಹೆಚ್ಚಿನ ಅಧ್ಯಯನಕ್ಕೆ ಪುಷ್ಟಿ ನೀಡಿದಂತಾಗಿದೆ.

ಚಂದ್ರಲಾಪರಮೇಶ್ವರಿಯ ದೇವಾಲಯದಿಂದ ಈ ಗ್ರಾಮ ಪವಿತ್ರ ಕ್ಷೇತ್ರವೆಂಬ ಪ್ರತೀತಿಯನ್ನು ಹೊಂದಿದೆ. ಪ್ರಮುಖ ದೇವಿಯರಲ್ಲಿ ಒಬ್ಬಳಾದ ಚಂದ್ರಲಾಂಬ ದೇವಾಲಯದ ಅಭಿವೃದ್ಧಿಯ ಕಾಲದಲ್ಲಿ ಸ್ಥಾಪನೆಯಾದ ಶಕ್ತಿ ಸ್ವರೂಪಿಣಿಯೆಂದು ಹೇಳಬಹುದಾದರೂ ಹಿಂದೆ ಬೌದ್ಧರ ತಾರಾದೇವಿಯ ದೇವಾಲಯವಾಗಿದ್ದಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಕಲಬುರ್ಗಿ ಜಿಲ್ಲೆಯ ಕೃಷ್ಣೆಯ ಉಪನದಿಯಾದ ಭೀಮಾನದಿಯ ಎಡದಂಡೆ ಮೇಲಿರುವ ಸನ್ನತಿ ಗ್ರಾಮದಲ್ಲಿ ಇಂದು ಚಂದ್ರಲಾದೇವಿಯ

ದೇವಾಲಯವಿದೆ. ಈ ದೇವಾಲಯ ಬೌದ್ಧರ ಕಾಲದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿತ್ತು. ಅನೇಕ ಭಕ್ತಾದಿಗಳಿಗೆ ಕೈಬೀಸಿ ಕರೆಯುವ ಯಾತ್ರಾ ಸ್ಥಳವು ಆಗಿದೆ. ಇಲ್ಲಿನ ದೇವಿಯನ್ನು ಚಂದ್ರಲಾ (ಚಂಡಲಾ, ಚಂದ್ರಲಾ) ಪರಮೇಶ್ವರಿ ಎಂದು ಕರೆಯಲಾಗುತ್ತದೆ.

ಇತ್ತೀಚಿನ ಉತ್ಖನನದ ಫಲವಾಗಿ ಒಟ್ಟು ೪೮ ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ನಾಲ್ಕು ಅಶೋಕನ ಶಾಸನಗಳು ದೊರೆತಿವೆ. ಇಲ್ಲಿ ಇನ್ನು ಭೂ ಅಗೆತ ಕಾರ್ಯ ನಡೆದರೆ ಹೆಚ್ಚಿನ ಅವಶೇಷಗಳು ಸಿಗುವ ಸಾಧ್ಯತೆ ಇದೆ. ಇದನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಹೈದ್ರಾಬಾದ್ ವಲಯದ ಸಿಬ್ಬಂದಿಯವರು ಕ್ರಿ.ಶ.೧೯೮೯ರಲ್ಲಿ ಕಾಳಿಕಾಂಬಾ ವಿಗ್ರಹವನ್ನು ಅಗೆದು ತೆಗೆದರು. ಈ ಕಾರ್ಯದ ಜೊತೆಗೆ ಅರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾದವರು ಅದರ ಪ್ರತಿ ಹೊರ ತೆಗೆದರು. ಶಾಸನ ಪಾಠವನ್ನು ಪ್ರಥಮ ಬಾರಿಗೆ ಪರಿಷ್ಕರಿಸಿದವರು, ಪಿ.ಕೆ.ಶರ್ಮ, ಆರ್.ವೆಂಕಟ ಶಿವಶರ್ಮ ಮತ್ತು ಜೆ. ವರಪ್ರಸಾದರಾವ್ ಪರಿಶೀಲನೆ ಮಾಡಿದರು.

ಸನ್ನತಿಯಲ್ಲಿ ಹನ್ನೆರಡನೆಯ ಮುಖ್ಯ ಶಿಲಾಶಾಸನ ದೊರೆತಿದೆ. ಅದು ಧರ್ಮ ಸಹಿಷ್ಣುತೆಯ ಮಹತ್ವವನ್ನು ಒತ್ತಿ ಹೇಳುವುದಾಗಿದ್ದು, ಅನ್ಯ ಧರ್ಮಗಳನ್ನು ಗೌರವಿಸುವುದಾಗಿತ್ತು. ಇದುವರೆಗೆ ಕರ್ನಾಟಕದಲ್ಲಿ ಅಶೋಕನ ಹತ್ತು ಲಘು ಶಾಸನಗಳು ದೊರೆತಿವೆ. ಭೌಗೋಳಿಕವಾಗಿ ಹತ್ತು ಶಾಸನಗಳು ಹರಡಿರುವ ರೀತಿ ಗಮನಾರ್ಹವಾದದ್ದು. ಅಶೋಕ ಇಂತಹ ಲಘು ಶಾಸನಗಳನ್ನು ಬರೆಸಿದುದು ತನ್ನ ಸಾಮ್ರಾಜ್ಯದ ಗಡಿಯಾಚೆಗಿನ ಗಡಿ ಪ್ರಾಂತಗಳಲ್ಲಿನ ಜನರಲ್ಲಿ ಧರ್ಮದ ಅಭಿವೃದ್ಧಿಯನ್ನು ಸಾಧಿಸಲು ಶಾಸನಗಳನ್ನು ಬರೆಯಿಸಿದನು. ಶಾಸನಗಳ ಪ್ರಕಾರ ಅಶೋಕ ತಾನು ಧಾರ್ಮಿಕ ಪ್ರವಾಸದಲ್ಲಿದ್ದಾಗ, ಧರ್ಮ ಪ್ರಚಾರ, ಪ್ರಜೆಗಳ ಹಿತ ಇವುಗಳ ಬಗ್ಗೆ ಇದ್ದ ನಿಷ್ಠುರ ಆದೇಶಗಳು, ಆರ್ಯಪುತ್ರ ಹಾಗೂ ಸುವರ್ಣಗಿರಿಯ ಮಹಾಮಾತ್ರರಿಗೆ ಉದ್ದೇಶಿಸಿದವು ಆಗಿವೆ.

ಪ್ರಸ್ತುತ ಸನ್ನತಿಯಲ್ಲಿ ದೊರೆತ ಹನ್ನೆರಡನೆಯ ಶಿಲಾ ಶಾಸನಗಳ ಆಧಾರದ ಮೇಲೆ ಭೀಮಾನದಿಯ ದಡದಲ್ಲಿರುವ ಕಲಬುರ್ಗಿ ಜಿಲ್ಲೆಯ ಪ್ರದೇಶಗಳು ಅಶೋಕನ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಈ ಭಾಗದಲ್ಲಿ ಆಡಳಿತಾಧಿಕಾರಿಯಾಗಿ ಮಹಾಮಾತ್ರನೊಬ್ಬನು ನಿಯುಕ್ತನಾಗಿದ್ದನೆಂದೂ ಹೇಳಬಹುದು. ಶಿಲಾಶಾಸನದಿಂದ ಅಶೋಕನ ವ್ಯಕ್ತಿತ್ವದ ಪ್ರಭಾವ ಜನಮನದಲ್ಲಿ ಇಂದಿಗೂ ಅಚ್ಚಳಿಯದೆ ನಿಲ್ಲಲು ಶಾಸನಗಳೆ ಕಾರಣ. ಅನೇಕ ಅರಸರು ಶಾಸನಗಳನ್ನು ಬರೆಯಿಸಿದ್ದುದ್ದನ್ನು ಇತಿಹಾಸದುದ್ದಕ್ಕೂ ನಾವು ಕಾಣುತ್ತೇವೆ. ಧರ್ಮದ ಪರವಾದ ಶಾಸನ, ಬರೆಯಿಸಿದ ಏಕೈಕ ವ್ಯಕ್ತಿ ಸಾಮ್ರಾಟ ಅಶೋಕ. ವಿದ್ವಾಂಸರಾದ ಎಚ್.ಜಿ.ವೆಲ್ಸ್ ಅವರ ಪ್ರಕಾರ, ಇತಿಹಾಸದ ಪುಟಗಳಲ್ಲಿ ಕಿಕ್ಕಿರಿದು ತುಂಬಿರುವ ನೂರಾರು, ಸಾವಿರಾರು ರಾಜಾಧಿರಾಜರ ನಡುವೆ ಅಶೋಕನ ಹೆಸರು ನಕ್ಷತ್ರದಂತೆ ಮಿನುಗುತ್ತದೆ ಎಂದು ಹೇಳಿದ್ದಾರೆ. ಶಾಸನಗಳು ಬರೆಯಿಸುವದರಲ್ಲಿ ಆತನ ಉದ್ದೇಶ ಜನರಲ್ಲಿ ಧರ್ಮದ ಬೀಜವನ್ನು ಬಿತ್ತಿ ಅವರನ್ನು ಧರ್ಮದ ಮಾರ್ಗದಲ್ಲಿ ನಡೆಸಿ ಮುಂದೆ ಮುಕ್ತಿ ಮಾರ್ಗ ತೋರಿಸುವ ಉದ್ದೇಶ ಹೊಂದಿದ್ದನು.

**ಹನ್ನೆರಡನೆಯ ಮುಖ್ಯ ಶಿಲಾಶಾಸನ**

ಸನ್ನತಿಯಲ್ಲಿ ದೊರೆತ ಹನ್ನೆರಡನೆಯ ಶಿಲಾ ಶಾಸನ ಧಾರ್ಮಿಕ ಅಂಶಗಳನ್ನು ಒಳಗೊಂಡಿದೆ. ಸರ್ವಧರ್ಮ ಒಂದೇ ಎಂದು ಸಾರುವ ಈ ಶಾಸನ ಎಲ್ಲ ಧರ್ಮಕ್ಕೂ ಮಾನ್ಯತೆ ನೀಡಿದೆ. ಯಾವುದೇ ಜಾತಿ, ಬೇಧ, ಭಾವಗಳಿಲ್ಲದೆ ಸರ್ವರಿಗೂ ಮುಕ್ತಿ ಮಾರ್ಗವನ್ನು ತೋರಿಸುವುದು ಶಾಸನದ ಉದ್ದೇಶವಾಗಿತ್ತು. ಶಾಸನ ಧಾರ್ಮಿಕವಾಗಿ, ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನು ಎಲ್ಲ ಅನ್ಯ ಧರ್ಮದವರನ್ನು, ಪರಿವ್ರಾಜ್ರಕರನ್ನು, ಗ್ರಹಸ್ಥರನ್ನು, ವಿವಿಧ ದಾನ ಮತ್ತು ಪೂಜೆಗಳಿಂದ ಸಮನಾಗಿ ಗೌರವಿಸುತ್ತಾನೆ. ಅಶೋಕನ ಧರ್ಮ ಯಾವ ಮತಕ್ಕೂ ಅನ್ವಯಿಸದೆ, ಯಾವ ಆಚರಣೆಗೂ ಸಂಬಂಧಿಸದೆ, ಅವರವರ ಧರ್ಮಕ್ಕೆ ಅನುಗುಣವಾಗಿ ಧರ್ಮದ ನೀತಿಯನ್ನು ಸಾರಿದನು. ಅದರ ಮೂಲವಿರುವುದು ವಾಕ್ಸಂ (ವಚೋಗುತ್ತಿ) ದಲ್ಲಿ. ಹಾಗೆಂದರೇನು? ತನ್ನ ಧರ್ಮದಲ್ಲಿ ಸಹ ಜೀವನಕ್ಕೆ ಅಗತ್ಯವಾದ ಗುಣ, ಸಹನೆ ಇತರರ ಆಚರಣೆ ಬಗ್ಗೆ ಉದಾರ ಭಾವನೆ, ತಾನೇ ಶ್ರೇಷ್ಠ ತನ್ನ ಧರ್ಮವೇ ಶ್ರೇಷ್ಠ, ಎಂಬ ಅಹಂ ಇದ್ದಲ್ಲಿ ಸಹಬಾಳ್ವೆ ಸಾಧ್ಯವೇ ಇಲ್ಲ. ಇಂತಹ ಸಂದರ್ಭದಲ್ಲಿ ಪರಧರ್ಮವನ್ನು ಅವರು ಗೌರವಿಸಬೇಕು. ಹೀಗೆ ಮಾಡುವುದರಿಂದ ಅವನಲ್ಲಿಯೂ ತನ್ನ ಧರ್ಮದ ಬಗ್ಗೆ ಗೌರವ ಹೆಚ್ಚುತ್ತದೆ. ಇದರಿಂದ ಇತರರಿಗೆ ಸಹಾಯ ಮಾಡುವ ಮನೋಭಾವನೆ ಬೆಳೆಯುತ್ತದೆ. ಹೀಗೆ ಮಾಡದೇ ಇದಕ್ಕೆ ವಿರುದ್ಧವಾಗಿ ನಡೆದರೆ ತನ್ನ ಧರ್ಮವನ್ನು ತಾನೇ ಅವಹೇಳನ ಮಾಡಿದಂತಾಗುತ್ತದೆ. ಅಲ್ಲದೆ ಇತರರಿಗೂ ಅಪಕಾರ ಮಾಡಿದಂತಾಗುತ್ತದೆ ಎಂದು ಶಾಸನ ತಿಳಿಸುತ್ತದೆ. ದೇವನಾಂಪ್ರೀಯ ಪ್ರೀಯದರ್ಶಿ ರಾಜನು ಎಲ್ಲ ಮತಗಳನ್ನು ಗೌರವಿಸುತ್ತಾನೆ (ಅಶೋಕನ ಧರ್ಮ ಶಾಸನಗಳು;೧೯೮೭;ಪು.೭) ವಿವಿಧ ಪೂಜೆಗಳಿಂದ ಪೂಜಿಸುತ್ತಾನೆ ಎಂದು ಹೇಳಿದ್ದಾನೆ. ಧರ್ಮದ ಮತಗಳಷ್ಟೆ ಇರಲಿ, ಆಚರಣೆಗಳೇನೆ ಇರಲಿ, ಎಲ್ಲ ಧರ್ಮದ ಸಾರ ಒಂದೇ, ಆದರೆ ಹೇಳುವ ಪದ್ಧತಿ ಬೇರೆಯಾಗಿರುತ್ತದೆ. ಯಾವನು ತನ್ನ ಧರ್ಮವನ್ನು ಹೆಚ್ಚಾಗಿ ಆದರಿಸುತ್ತಾನೋ, ಆತ ಇತರ ಧರ್ಮವನ್ನು ಅವಹೇಳನ ಮಾಡುವುದಕ್ಕೆ ಇಲ್ಲವೇ ತನ್ನ ಧರ್ಮದಲ್ಲಿದ್ದ ಗೌರವ ಎತ್ತಿ ತೋರಿಸುವುದಕ್ಕೆ ಅಥವಾ ತನ್ನ ಧರ್ಮ ಎಲ್ಲಕ್ಕಿಂತ ಶ್ರೇಷ್ಠ ಎಂಬ ಭಾವನೆ ಇರುತ್ತದೆ. ಇಂತಹ ಮನೋಭಾವನೆ ಉಳ್ಳವನು ನಿಜಕ್ಕೂ ತನ್ನ ಧರ್ಮದಲ್ಲಿ ತಾನೇ ಸಂಕಷ್ಟಕ್ಕೀಡಾಗುತ್ತಾನೆ. ಯಾಕೆಂದರೆ ಆತ್ಮ ಪ್ರಶಂಸೆ, ಪರದೋಷ ಹೇಗೆ ಸಲ್ಲುವುದಿಲ್ಲವೋ ಹಾಗೆಯೇ ತನ್ನ ಮತದ ಹೊಗಳಿಕೆ, ಪರಮತದ ತೆಗಳಿಕೆಯೂ ಕೂಡ ಸಲ್ಲುವುದಿಲ್ಲ. ಆದ್ದರಿಂದ ಪರಮತವನ್ನು ಗೌರವಿಸಲೇ ಬೇಕು. ಆದರಿಸಲೇಬೇಕು. ಧರ್ಮೋಪದೇಶವನ್ನು ಕೇಳುವರು, ಗೌರವದಿಂದ ನಡೆದುಕೊಳ್ಳುತ್ತಾರೆ. ಎಲ್ಲ ಅನ್ಯ ಧರ್ಮದವರೂ ಎಲ್ಲರೂ ಲೋಕ ಕಲ್ಯಾಣವನ್ನು ಮಾಡಬೇಕೆಂದು ಬಯಸುವವರೂ, ಯಾರು ಯಾವುದರಿಂದ ಪ್ರಸನ್ನರಾದರೋ ಅವರೆಲ್ಲರೂ ಹೀಗೆ ಹೇಳುವಂತರಾಗಬೇಕು. ದೇವತೆಗಳಿಗೆ ಪ್ರಿಯನಾದವನು ತನ್ನ ರೀತಿಯಲ್ಲಿಯೇ ದಾನ, ಪೂಜೆಗಳನ್ನು ಮಾಡಬೇಕು. ಏಕೆಂದರೆ ಎಲ್ಲ ಅನ್ಯ ಧರ್ಮನುಯಾಯಿಗಳೆಲ್ಲೂ ಅವರವರ ಧರ್ಮದ ಪದ್ಧತಿಯಂತೆ ನಡೆಯಬೇಕೆಂದು ಶಾಸನ ಉಲ್ಲೇಖಿಸುತ್ತದೆ.

ಅಶೋಕನ ಉದ್ದೇಶವೆಂದರೆ ಎಲ್ಲರೂ ಒಳ್ಳೆಯ ಮಾರ್ಗದಲ್ಲಿ ನಡೆಯಬೇಕು ಇತರರ ಧರ್ಮದ ಸಾರವನ್ನೂ ಕೇಳಬೇಕು. ಇದರಿಂದ ತನ್ನ, ಮತ, ಧರ್ಮಕ್ಕೆ ಪ್ರಾಮುಖ್ಯತೆ ದೊರಕುವುದರಿಂದ ಧರ್ಮದ ಬೆಳಕಾಗುತ್ತದೆ. (ಅಶೋಕನ ಧರ್ಮ ಶಾಸನಗಳು; ೧೯೮೭;ಪು.೯) ಎಲ್ಲ ಧರ್ಮಗಳ ಸಾರ

ತಿಳಿಯುವುದರಿಂದ ಸರ್ವ ಧರ್ಮ ಜ್ಞಾನಿಯಾಗುತ್ತಾನೆ. ಹಾಗೂ ಸನ್ಮಾರ್ಗದಲ್ಲಿ ನಡೆಯುವ ಮಾರ್ಗ ದೊರೆಯುತ್ತದೆ. ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಅಶೋಕನು ಆಡಿದ ಧರ್ಮ ಸಮನ್ವಯದ ಮಾತುಗಳು ಇಂದಿಗೂ ಅರ್ಥಪೂರ್ಣವಾಗಿವೆ. ಇದನ್ನು ಸಾಧಿಸುವುದಕ್ಕೆ ಮನಸ್ಸಿನ ಸ್ಥೈರ್ಯ, ದೃಢನಿರ್ಧಾರ ಅತ್ಯಗತ್ಯ.

ದಕ್ಷಿಣ ಭಾರತದಲ್ಲಿ ಶಾಸನಗಳನ್ನು ಬರೆಯಿಸಲು ಆಯ್ಕೆ ಮಾಡಿರುವ ಸ್ಥಳಗಳ ಸೂಕ್ಷ್ಮ ಪರಿಶೀಲನೆಯಿಂದ, ಈ ಪ್ರದೇಶಗಳು ಮೊದಲಿಗೆ ಸಾಮ್ರಾಜ್ಯದ ಹೊರಗೆ, ಸ್ಥಳೀಯ ಸ್ವತಂತ್ರ ಅರಸರ ಅಧೀನದಲ್ಲಿದ್ದವು. ಆಗ ಲಘು ಶಿಲಾ ಶಾಸನಗಳನ್ನು ಬರೆಯಿಸಲಾಯಿತು. ಕೆಲ ಕಾಲದ ನಂತರ ಕಲಬುರ್ಗಿ ಜಿಲ್ಲೆಯ ಭಾಗದಲ್ಲಿನ ಶಾಸನಗಳನ್ನು ಬರೆಯಿಸಲಾಯಿತೆಂದೂ ಹೇಳಲಾಗಿದೆ. ಅಶೋಕ ತನ್ನ ಪಟ್ಟಾಭಿಷೇಕವಾದ ಎಂಟು ವರ್ಷಗಳ ನಂತರ ಕಳಿಂಗ (ಇಂದಿನ ಒರಿಸ್ಸಾ) ಪ್ರದೇಶವನ್ನು ಗೆದ್ದುಕೊಂಡನು. ಅಶೋಕ ಕ್ರಿ.ಪೂ.೨೬೩-೬೨ರಲ್ಲಿ ಕಳಿಂಗದ ಮೇಲೆ ಯುದ್ಧ ಕೈಗೊಂಡನು. ಯುದ್ಧದಲ್ಲಿ ಅಪಾರ ಸೈನ್ಯವನ್ನು ಹೊಂದಿ, ದೌಲಿ ಎಂಬಲ್ಲಿ ಭೀಕರವಾದ ಕಾಳಗ ಸಂಭವಿಸಿತು. ಅನೇಕ ಜನರು ಸಾವಿಗೀಡಾದರು. ಕೆಲವರು ಕೈ ಕಾಲುಗಳನ್ನು ಕಳೆದುಕೊಂಡರು, ಹೆಣ್ಣುಮಕ್ಕಳು ತಮ್ಮ ಗಂಡಂದಿರನ್ನು ಕಳೆದುಕೊಂಡರು, ಮಕ್ಕಳು ಅನಾಥರಾದರು, ಇಡೀ ರಣರಂಗವೇ ರಕ್ತದ ಹೊಳೆ ಹರಿಯಿತು. ಅಪಾರ ಧನ ನಷ್ಟ ಉಂಟಾಯಿತು. ಕ್ರಮೇಣ ಅಶೋಕ ತನ್ನ ತಪ್ಪಿನ ಅರಿವುಂಟಾಯಿತು. ಚಂಡಾಶೋಕ ಹೋಗಿ ಧರ್ಮಾಶೋಕನಾದನು. ಇದರಿಂದ ತನ್ನ ರಾಜ್ಯಾದಾದಂತ್ಯ ಧರ್ಮ ಪ್ರಚಾರ ಮಾಡಿದನು. ಇದೇ ವೇಳೆಗೆ ಅಶೋಕ ಶಾಸನಗಳನ್ನು ಬರೆಯಿಸಿದನು. ಈ ಹಿನ್ನಲೆಯಲ್ಲಿ ಸನ್ನತಿಯಲ್ಲಿ ದೊರೆತಿರುವ ಪ್ರತ್ಯೇಕ ಶಿಲಾ ಶಾಸನಗಳು ಮತ್ತಷ್ಟು ಮಹತ್ವ ಪಡೆದುಕೊಂಡಿವೆ.

ಅಶೋಕ ಧರ್ಮದ ಪ್ರಚಾರಕ್ಕಾಗಿ ಸಿಂಹಳ ದ್ವೀಪಗಳಲ್ಲಿರುವ ಅನುರಾಧಪುರ, ಬೌದ್ಧ ಸ್ತೂಪದ ಪ್ರತಿಷ್ಠಾಪನೆಗಾಗಿ ಬೌದ್ಧ ಅನುಯಾಯಿಗಳನ್ನು ಕಳುಹಿಸಿದನು. ಕ್ರಿ.ಶ.ಮೂರನೆಯ ಶತಮಾನದಲ್ಲಿ ಬನವಾಸಿ ಬೌದ್ಧ ಕೇಂದ್ರವಾಗಿತ್ತು. ಅಶೋಕನ ಕಾಲದಲ್ಲಿ ಅಭಿವೃದ್ಧಿ ಹೊಂದಿತು. ಅನೇಕ ಅವಶೇಷಗಳು, ಬನವಾಸಿಯಲ್ಲಿ ದೊರೆತಿವೆ ಆದರೆ ಪ್ರಾಚೀನ ಮಹತ್ವದಾದ ಅವಶೇಷಗಳು ಸನ್ನತಿಯಲ್ಲಿ ದೊರೆತಿವೆ. ಎಂದರೆ ಸನ್ನತಿ ಪ್ರಾಮುಖ್ಯತೆ ಪಡೆದಿರುವುದರ ಜೊತೆಗೆ ಬೌದ್ಧರ ಪವಿತ್ರ ಸ್ಥಳವೂ ಆಗಿತ್ತು.

ಇಲ್ಲಿ ಸಿಕ್ಕ ಕೆಲವು ಶಾಸನಗಳನ್ನು ಲಿಪಿ ಶಾಸ್ತ್ರದ ಬಲದಿಂದ ಎರಡನೆಯ ಶತಮಾನದೆಂದು ಹೇಳಬಹುದು. ಬಹಳಷ್ಟು ಶಾಸನಗಳನ್ನು ಒಂದೊಂದು ಪಂಕ್ತಿಯದ್ದಾಗಿದ್ದು, ಬೌದ್ಧ ಸ್ತೂಪ, ವಿಹಾರ, ಸಂಘರಾಮಗಳಿಗೆ ದಾನ ದತ್ತಿಗಳನ್ನು ಸಲ್ಲಿಸಿದ ಭಕ್ತ ಭಕ್ತೆಯರ, ಉಪಾಸಕ, ಉಪಾಸಿಕೆಯರ ನಾಮ ನಿರ್ದೇಶನವನ್ನು ಮಾಡುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ರಾಯಚೂರು, ಕೊಪ್ಪಳ, ಪ್ರದೇಶಗಳಂತೆ, ಕಲಬುರ್ಗಿ ಜಿಲ್ಲೆಯ ಚಿತ್ತಾಪುರದಲ್ಲಿರುವ ಸನ್ನತಿಯು ಅಶೋಕನ ಸಾಮ್ರಾಜ್ಯದ ನಂತರ ಶಾತವಾಹನರ ಕಾಲದಲ್ಲಿ ಬೌದ್ಧ ಧರ್ಮ ಕೇಂದ್ರವಾಗಿ ಒಳಪಟ್ಟಿತು.

**ಶಾತವಾಹನರ ಕಾಲದ ಧಾರ್ಮಿಕ**

ಕರ್ನಾಟಕಕ್ಕೆ ವಲಸೆ ಬಂದ ಹೊರಗಿನ ಧರ್ಮಗಳಲ್ಲಿ ಕಲಬುರ್ಗಿ ಜಿಲ್ಲೆಯ ಸನ್ನತಿ ಹಾಗೂ ಅಶೋಕನ ದೇವನಾಂಪ್ರಿಯ ಬಿರುದುಳ್ಳ ರಾಯಚೂರು ಜಿಲ್ಲೆಯ ಮಸ್ಕಿ ಶಾಸನಗಳು ಶಾತವಾಹನ ಆಳ್ವಿಕೆ. ಕಾಲದ ಬೌದ್ಧ ಧರ್ಮ ಕುರಿತಂತೆ ಸಾಮಗ್ರಿಯನ್ನೊಳಗೊಂಡಿವೆ.

ಕ್ರಿ.ಶ. ಆರಂಭದ ಶತಮಾನಗಳಿಗೆ ಸೇರುವ ಕಲಬುರ್ಗಿ ಜಿಲ್ಲೆಯ ಸನ್ನತಿ ಸುಮಾರು ಮೂವತ್ತಕ್ಕೂ ಮೀರಿದ ಚಿಕ್ಕ ಚಿಕ್ಕ ಪ್ರಾಕೃತ ಶಾಸನಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿದ್ದಾಗಿವೆ. ಇಲ್ಲಿ ಬೌದ್ಧ ಸ್ತೂಪವೂ ಇತ್ತು. (Karnataka Through the Ages. Apd. IX) ಸನ್ನತಿ ಒಂದು ಬೌದ್ಧ ಧರ್ಮಕೇಂದ್ರವೆಂಬ ಸಂಗತಿಯನ್ನು ಎಲ್ಲರ ಗಮನಕ್ಕೆ ಮೊದಲು ತಂದವರು ಎಸ್. ನಾಗರಾಜು. ಆದರೆ ಅಲ್ಲಿಯ ಬೌದ್ಧ ಸ್ಮಾರಕಗಳನ್ನು ಕುರಿತು ಕ್ರಿ.ಶ.೧೯೫೦ರಲ್ಲಿ ಕಪಟರಾಳ ಕೃಷ್ಣರಾಯರ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಕ್ರಿ.ಶ.ದ ಆರಂಭದಲ್ಲಿ ಈ ಭಾಗವನ್ನು ಆಳುತ್ತಿದ್ದ ಶಾತವಾಹನರು ಬೌದ್ಧ ಪಕ್ಷಪಾತಿಗಳಾಗಿದ್ದರು.

ಸನ್ನತಿಯಲ್ಲಿರುವ ಚಂದ್ರಲಾಪರಮೇಶ್ವರಿ ದೇವಾಲಯ ಬಲಕ್ಕೆ ಮಹಾಕಾಳಿ, ನಡುವೆ ಶ್ರೀ ಚಕ್ರ ಹಾಗೂ ಎಡಕ್ಕೆ ಚಂದ್ರಲಾಪರಮೇಶ್ವರಿಯ ಕಿರು ಶಿಲ್ಪಗಳಿವೆ. ಈ ದೇವಿಯೇ ಇಲ್ಲಿಯ ಪ್ರಧಾನ ದೇವತೆಯಾಗಿದ್ದಾಳೆ. ನವರಂಗದ ಪ್ರವೇಶ ದ್ವಾರವೂ ನಾಲ್ಕು ಶಾಖೆಯ ಅಲಂಕಾರಿಕ ಪಟ್ಟಿಕೆ ಹೊಂದಿವೆ. ಮುಂದೆ ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಕಂಬಗಳನ್ನು ಬಳಸಿ, ಪುನರ್ ನಿರ್ಮಿಸಲಾಗಿದೆ. ನವರಾತ್ರಿಯ ದೀಪೋತ್ಸವಕ್ಕೆ ಈ ಕ್ಷೇತ್ರ ಹೆಸರಾಗಿದ್ದು, ಧವನದ ಹುಣ್ಣಿಮೆಯಿಂದ ಪಂಚಮಿಯವರೆಗೆ ದೇವಿಯ ರಥೋತ್ಸವ ನಡೆಯುತ್ತದೆ.

**ಮಹಾಜನ**

ಗ್ರಾಮ ಇಲ್ಲವೆ ಅಗ್ರಹಾರಗಳಲ್ಲಿನ ಬ್ರಾಹ್ಮಣರನ್ನು ಮಹಾಜನ ಎಂದು ಭಾವಿಸಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಮಹಾಜನರೆಲ್ಲರೂ ಬ್ರಾಹ್ಮಣರೇ ಆಗಿರಬೇಕೆಂಬ ನಿಯಮವಿಲ್ಲ. ಸಾಮಾನ್ಯವಾಗಿ ಊರಿನ ಪ್ರಮುಖ ಜನಗಳ ಒಂದು ಮಂಡಲವನ್ನು ಮಹಾಜನವೆಂದು ಕರೆಯವುದು. ಸೂಕ್ತ.(ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನ;೧೯೯೨;ಪು.೨೭) ಎಲ್ಲ ರೀತಿಯಿಂದಲೂ ತೆರಿಗೆಯಿಂದ ಮುಕ್ತಿ ಹೊಂದಿದ ದಿಗ್ಗಾಂವಿಗೆಯ ಶೇಷ ೩೦೦ ಮಹಾಜನಗಳಿಗೆ, ಧರ್ಮ ಪಾಲಿಸುವವರಿಗೆ, ಮಹಾಮಂಡಳೇಶ್ವರ ಮನ್ನೆಯ ಚಂದಿಬ್ಬರಸಿಯ ಮಗ ಮರೆಗರಸರು ಸೇರಿ ಇಲ್ಲಿಯ ಸ್ವಯಂ ಭೂ ಸೋಮೇಶ್ವರ ದೇವರ ನೈವೇದ್ಯಕ್ಕೆ, ಚಿಕ್ಕ ಮೊಗಲಿ ರಾಮೇಶ್ವರ ದೇವರಿಗೆ ಗದ್ದೆಯ ಹೊಲಕ್ಕೆ ದತ್ತಿಯನ್ನು ಕೊಟ್ಟರು. ಅವರ ನಂತರ ಮಹಾಮಂಡಳೇಶ್ವರ ಲೋಕರಸನು ಇದೇ ದೇವರಿಗೆ ದೇವರ ನೈವೇದ್ಯಕ್ಕೆ ಗದ್ದೆ ಹೊಲ ಬಿಟ್ಟ ವಿಷಯ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೧೭೭) ಕ್ರಿ.ಶ. ೧೧೫೦ರ ಶಾಸನದಿಂದ ತಿಳಿದು ಬರುತ್ತದೆ. ಶಾಸನದ ಕೊನೆ ಭಾಗದಲ್ಲಿ ಧರ್ಮವನ್ನು ಪಾಲಿಸಿದವರಿಗೆ ವಾರಣಾಸಿ ತೀರ್ಥ ಯಾತ್ರೆ ಮಾಡಿದಷ್ಟು ಪುಣ್ಯ ಹಾಗೂ ಬ್ರಾಹ್ಮಣರಿಗೆ ಹಸು ದಾನ ಮಾಡಿದಷ್ಟು ಫಲ ದೊರೆಯುತ್ತದೆ. ಒಂದು ವೇಳೆ ಧರ್ಮ ಪಾಲಿಸದಿದ್ದರೆ, ಬ್ರಾಹ್ಮಣರಿಗೆ ಕೊಟ್ಟ ಹಸು ತಮ್ಮ ಸ್ವಹಸ್ತದಿಂದ

ಕೊಂದಷ್ಟು ಪಾಪ ಬರುತ್ತದೆ. ಎಂದು ಕ್ರಿ.ಶ.೧೦೫೪ರ ದಿಗ್ಗಾಂಪಿಯ ಶಾಸನದ ಕೊನೆಗೆ ಶಾಪಶಯದ ಭಾಗದಲ್ಲಿ ಉಲ್ಲೇಖಿಗೊಂಡಿದೆ. ಇದೇ ಗ್ರಾಮದಲ್ಲಿರುವ ಇನ್ನೊಂದು ಶಾಸನ ತ್ರೈಲೋಕ್ಯ ಆಹವಮಲ್ಲನೆಂಬ ಬಿರುದಾಂಕಿತ ಒಂದನೆಯ ಸೋಮೇಶ್ವರ, ಮಹಾಮಂಡಳೇಶ್ವರ ಬಾಚರಸ ಹಾಗೂ ಸೀಮಂತ ಸಿರಿಯಮರಸರು ದಿಗ್ಗಾಂಪಿಗೆಯ ಸ್ವಯಂ ಭೂದೇವರಿಗೆ ೩೦೦ ಮತ್ತರು ಭೂಮಿಯನ್ನು ಅಲ್ಲಿಯ ಪೂಜಾರಿಗೆ ಮತ್ತರಿಪ್ಪತ್ತು ಕೊಟ್ಟು, ಸರ್ವ ಪರಿಹಾರಕ್ಕಾಗಿ ದಾನ ಕೊಟ್ಟ ಉಲ್ಲೇಖ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೧೭೫) ಕ್ರಿ. ಶ. ೧೦೫೪ರ ಶಾಸನದಿಂದ ತಿಳಿದು ಬರುತ್ತದೆ.

ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರ ಬಾಚರಸ ಹಾಗೂ ಸಾಮಂತ ಯರಗರಸರು ಸೇರಿ ಶಕವರುಶ ವೈಶಾಖದ ಅಮವಾಸ್ಯೆ ಗುರುವಾರ (ಬ್ರಹಸ್ಪತಿ) ಕೃಷ್ಣ ಗ್ರಹಣದಂದು ಶ್ರೀ ಸ್ವಯಂಭೂ ಸೋಮೇಶ್ವರ ದೇವರಿಗೆ ಪೂಜೆ ಪುನಸ್ಕಾರಕ್ಕಾಗಿ, ನೈವೇದ್ಯಕ್ಕಾಗಿ ಚೈತ್ರ, ಪವಿತ್ರಕ್ಕಾಗಿ, ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ, ಎಲ್ಲ ರೀತಿಯಿಂದಲೂ ತೆರಿಗೆ ಮುಕ್ತವಾಗಿ ಶ್ರೀ ಸ್ವಯಂಭೂ ಸೋಮೇಶ್ವರ ದೇವರಿಗೆ ತ್ರಿಭೋಗಾಂಭ್ಯಂತರ ಸಿದ್ಧಿಯಿಂದ ಸರ್ವ ನಮಸ್ಯವಾಗಿ ದಾನ ಕೊಟ್ಟಿದ್ದು ಕ್ರಿ.ಶ.೧೦೫೪ರ ದಿಗ್ಗಾಂವಿಯ ಶಾಸನ ತಿಳಿಸುತ್ತದೆ. ಸೋಮೇಶ್ವರ ದೇವಾಲಯದ ಬಳಿಯಲ್ಲಿರುವ ಇನ್ನೊಂದು ಶಾಸನ ದಂಡನಾಯಕ ರನ್ನಪ್ಪಯ್ಯನು ತ್ರಿಭುವನಮಲ್ಲನಿಂದ ಅಗ್ರಹಾರ ದೀರ್ಘವಿಗೆಯನ್ನು ಈಶ್ವರ ದತ್ತಿಯಾಗಿ ಪಡೆದು ಅದನ್ನು ಎಲ್ಲ ರೀತಿಯಿಂದಲೂ ತೆರಿಗೆ ಮುಕ್ತಿಯಿಂದ ದಾನ ಕೊಟ್ಟ ವಿಷಯ ತಿಳಿಸುತ್ತದೆ. ದಿಗ್ಗಾಂವಿಯು ಮಹಾಗ್ರಹಾರವಾಗಿತ್ತೆಂದು ಕ್ರಿ.ಶ.೧೦೫೪ರ ದಿಗ್ಗಾಂವಿಗೆಯ ಶಾಸನದ ದಿಗ್ಗವಿಗೆಯ ಚತುರ್ವೇದ ತತ್ವಜ್ಞಾನ ಮಾರ್ತಂಡೋಜ್ವಲ ಮಹಾಜನಗಳಶೇಷ ಮನೋರ್ಬರಂ ಎಂಬ ವಿವರ ತಿಳಿಸುತ್ತದೆ.

ಕ್ರಿ.ಶ.೧೧೧೦ರ ದಿಗ್ಗಾಂವಿಯ ಗ್ರಾಮದ ಶಂಭುಲಿಂಗ ದೇವಾಲಯದಲ್ಲಿರುವ ಶಾಸನ ಕಲ್ಯಾಣ ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ರಾಣಿ ಮಲೆಯಮತಿ ದೇವಿಯನ್ನು ಪಿರಿಯರಿಸಿ ಪಟ್ಟ ಮಹಾದೇವಿ ಸ್ಥಾನವನ್ನು ಅಲಂಕರಿಸಿದವರಲ್ಲಿ ಮಲೆಯಮತಿದೇವಿ ಒಬ್ಬಳು. ದಿಗ್ಗಾಂವಿಯ ಶಾಸನದಲ್ಲಿ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೧೮೨) ಈಕೆಯನ್ನು ಶ್ರೀ ಮದ್ರಾಯ ಸರ್ವಜ್ಞನರ್ದ್ಧಾಂಗಿ ಶ್ರೀ ಮತ್ಪಿರಿಯರಸಿ ಪಟ್ಟ ಮಹಾದೇವಿ ಶ್ರೀ ಮದ್‌ಅಭೀನವ ಸರಸ್ವರಿ ಮಲೆಯಮತಿದೇವಿ ಎಂದು ಕರೆಯಲಾಗಿದೆ.

ಅಗ್ರಹಾರ ದಿಗ್ಗಾವಿಗೆಯನ್ನು ಮಲೆಯಮತಿದೇವಿ ಮೇಲಾಳ್ವಿಕೆಯನ್ನು ವಹಿಸಿಕೊಂಡಿದ್ದಳು. ಅವಳ ಆಜ್ಞೆ ಮೇರೆಗೆ ಮಹಾಮಂಡಳೇಶ್ವರ ಮನ್ನೆಯ ಲೋಕರಸನು (J.S.I.J.E.;1957;P.194) ಚಾಳುಕ್ಯ ವಿಕ್ರಮ ವರ್ಷದ ೩೨ನೆ ಸರ್ವಜಿತ ಸಂವತ್ಸರ ಮಾರ್ಗಶಿರ ಅಮವಾಸ್ಯೆ ಸೋಮವಾರ ಸೂರ್ಯಗ್ರಹಣದ ದಿವಸದಂದು ಸ್ವಯಂ ಭೂ ಸೋಮೇಶ್ವರ ದೇವಾಲಯಕ್ಕೆ ದಾನಕೊಟ್ಟನು. ಗಂಗೀತೀರ್ಥದ ಬಳಿಯಲ್ಲಿ ದಾವಣ ಭಟ್ಟರು ಚಿಕ್ಕ ಸಂಜೆ ಮಠವನ್ನು ಕಟ್ಟಿಸಿದರು. ಅಲ್ಲಿರುವ ಜನಾರ್ಧನ ದೇವರ ಜವಾಬ್ದಾರಿಯನ್ನು ಮಹಾಜನರಿಗೆ ಒಪ್ಪಿಸಿದರು. ಅದರ ಪೂಜಾ ವಿಧಿಗೆಂದು ನಲವತ್ತು ಮತ್ತರು ಹೊಲ, ಹೂತೋಟ ಹಾಗೂ ನಿವೇಶನಗಳನ್ನು ದಾನ ಕೊಟ್ಟರು. ಅದೇ ಸಂದರ್ಭದಲ್ಲಿ ನೆರೆಯ

ಅಗ್ರಹಾರ ನಾಗವಾಪಿಯ ನಾಲ್ಕನೂರು ಶ್ರೇಷ್ಠ ಮಹಾಜನರು ಕೂಡ ದೇವರ ಸೇವೆಗೆಂದು ಗದ್ದೆಯನ್ನು ದಾನ ಕೊಟ್ಟ ಅಂಶ ಕ್ರಿ.ಶ. ೧೧೦೮ ದಿಗ್ಗಾಂವಿಯ ಶಾಸನದಿಂದ ತಿಳಿದು ಬರುತ್ತದೆ.

ಚಕ್ರವರ್ತಿಗಾಗಲಿ ಅಥವಾ ಆತನ ಮಹಾಮಂಡಳೇಶ್ವರರಿಗಾಗಲಿ ಒಬ್ಬಳು ಪಟ್ಟದರಾಣಿ ಇರುತ್ತಿದ್ದಳು. ಪಟ್ಟದ ರಾಣಿ ಎಂಬುದು ಚಕ್ರವರ್ತಿಯೆಂಬಂತೆ, ರಾಣಿಯರದು ಒಂದು ಬಿರುದಾಗಿತ್ತು. ಇತರ ರಾಣಿಯರಿಗಿಂತ ಇವಳ ಸ್ಥಾನ ಶ್ರೇಷ್ಠವಾಗಿತ್ತು. ಚಕ್ರವರ್ತಿಯೊಂದಿಗೆ ಎಲ್ಲ ಧಾರ್ಮಿಕಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಳು. ಈ ಹಕ್ಕು ಇವಳಿಗೆ ಮಾತ್ರವಿತ್ತು. ಎಂದು ಚಿದಾನಂದ ಮೂರ್ತಿಯವರ (ಆರನೆಯ ವಿಕ್ರಮಾದಿತ್ಯನ ಶಾಸನಗಳು;೧೯೯೨;ಪು.೨೯) ಅಭಿಪ್ರಾಯ. ಈ ರಾಣಿ ಧವಳಶಂಖ, ಉದ್ದಂಡ, ಪುಂಡರಿಕ, ಕನಕದಂಡ, ಚಾಮರಸ್ತೋಮಗಳು, ಇವು ರಾಣಿ ಪಡೆದುಕೊಂಡಿರುವ ಬಿರುದುಗಳಾಗಿದ್ದವು.

**ಚಿಕ್ಕಸಂಜೆ ಮಠ**

ಪ್ರಾಚೀನ ಕರ್ನಾಟಕದ ದೇವಾಲಯಗಳಿಗೂ ಮಠಗಳಿಗೂ ಇದ್ದ ಸಂಬಂಧ ಮಹತ್ವದ್ದಾಗಿದೆ. ಇಲ್ಲಿ ಮುಖ್ಯವಾಗಿ ಪಾಶುಪತ ದೇವಾಲಯಗಳು, ಮಠಗಳನ್ನು ಗಮನಿಸಿದಾಗ ಕೆಲವು ಸಮಸ್ಯೆಗಳು ಎದುರಾಗುತ್ತವೆ. ಶಾಸನಗಳು ಓದುತ್ತಿದ್ದರೆ ಸನ್ಯಾಸಿಗಳು ದೇವಾಲಯಗಳಲ್ಲೆ ವಾಸಿಸುತ್ತ ತಮ್ಮ ತಪೋ ಕರ್ಮದ ಜೊತೆಗೆ ವಿದ್ಯಾದಾನವನ್ನು ಮಾಡುತ್ತಿದ್ದ ಭಾವನೆ ಬರುತ್ತದೆಯಾದರೂ ದೇವಾಲಯವೇ ಮಠವಾಗಿದ್ದಿತ್ತೆ? ಅಥವಾ ದೇವಸ್ಥಾನದಿಂದ ಭಿನ್ನವಾದ ಮಠವಿದ್ದಿತ್ತೆ? ದೇವಾಲಯಕ್ಕೂ ಮಠಕ್ಕೂ ಯಾವ ರೀತಿಯ ಸಂಬಂಧ? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಮಠಗಳಲ್ಲಿ ವೀರಶೈವ ಮಠಗಳು ಆಗಲಿ ಅಥವಾ ಇತರ ಯಾವುದೇ ಧರ್ಮದವರು ಹೊಂದಿದ್ದ ಧಾರ್ಮಿಕ ಕೇಂದ್ರಗಳಾಗಲಿ ಈ ಭಾಗದಲ್ಲಿ ಅಲ್ಲದೆ ಇತರ ಕಡೆ ದೊರೆತ ಶಾಸನಗಳ ಆಧಾರದಿಂದ ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ಶೈವ ಧರ್ಮದ ಮಠಗಳು ಮುಖ್ಯವಾಗಿ ಕಾಳಾಮುಖಪಾಶುಪತ, ಲಾಕುಲೀಶರ ಕೇಂದ್ರಗಳು (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨;ಪು.೨೧) ಹೆಚ್ಚು ಪ್ರಸಿದ್ಧಿಯಾಗಿವೆ. ಸಂಜೆ ಮಠ, ಚಿಕ್ಕ ಸಂಜೆ ಮಠ (ಕ್ರಿ.ಶ.೧೧೦೮ ದಿಗ್ಗಾಂವಿ) ವೇದವೇದಾಂಗ ಪಠನ, (ಕ್ರಿ.ಶ.೧೦೮೫ ನಾಗಾಯಿ) ನೈಸ್ತಿಕ ಮಠ (ಕ್ರಿ. ಶ. ೧೧೧೯ ಹಂದರ್ಕಿ) ಲೋಕೇಶ್ವರ ಮಠ (ಕ್ರಿ. ಶ.೧೨೧೬ ಇಂಗಳಗಿ) ಕಾಳಾಮುಖದ ಸ್ಥಾನಿಕಾಚಾರ್ಯರ ಮಠಗಳನ್ನು ಇಲ್ಲಿನ ನೈಷ್ಠಿತ ಮಠಗಳು ಎಂದಿದೆ.

ಮಠದಲ್ಲಿ ಓದುವ ಕೇಳುವ ವಿದ್ಯಾರ್ಥಿ ತಪೋಧನರ ಮೇಲಿಂದ ಘಟಕಗಳನ್ನು ಬಿಟ್ಟರೆ ಮಠಗಳು ಶೈಕ್ಷಣಿಕ ಕೇಂದ್ರಗಳಾಗಿ ಸಂಸ್ಕೃತಿ-ಧರ್ಮ, ಸಂವರ್ಧನೆಗೆ ಶ್ರಮಿಸಿರುವುದನ್ನು ಕಾಣುತ್ತೇವೆ. ದಿಗ್ಗಾಂವಿಯಲ್ಲಿ ಸ್ವಯಂ ಭೂ ಸೋಮೇಶ್ವರ ತ್ರಿಭುವನ ನಾರಾಯಣ, ಚಿಕ್ಕ ಸಂಜೆ ಮಠವಿದ್ದ ಅಂಶ ತಿಳಿಯುತ್ತದೆ. ಇಂದಿನ ಶಂಭುಲಿಂಗ ಗುಡಿಯೇ ಶಾಸನೋಕ್ತ (J.S.I.J.E;1957;P.251) ಸ್ವಯಂ ಭೂ ಸೋಮೇಶ್ವರ ದೇವಾಲಯವಾಗಿದೆ. ಇದು ಪ್ರಸಿದ್ಧಿ ಪಡೆದಿದ್ದು, ಇದರ ಬಳಿ ೬೦ ಲಿಂಗದ ಬಾವಿ ಇದೆ. ಹನ್ನೆರಡನೆಯ ಶತಮಾನಕ್ಕೆ ಸೇರಿದ ಶಾಂತಲಿಂಗೇಶ್ವರ ದೇವಾಲಯವಿದೆ. ಇಲ್ಲಿ ಒಂದು ಪುಷ್ಕರಣಿ, ಆಕರ್ಷಕವಾದ ಅನಂತಶಯನ ದೇವಾಲಯವಿದೆ.

ಚಿತ್ತಾಪುರ ತಾಲೂಕಿನಲ್ಲಿರುವ ಕಾಳಗಿ ಎಂಬ ಗ್ರಾಮ ಪ್ರಾಚೀನ ಕಾಲದ ಪೌರಾಣಿಕ ಕ್ಷೇತ್ರವೂ, ಐತಿಹಾಸಿಕ ಸ್ಥಳವೂ ಆಗಿತ್ತು. ಕಲ್ಯಾಣ ಚಾಳುಕ್ಯರ ಕಾಲದ ಅನೇಕ ದೇವಾಲಯಗಳಿರುವುದರಿಂದ ಇದು ಪವಿತ್ರವಾದ ಗ್ರಾಮವಾಗಿತ್ತು. ಈ ಪಾವಿತ್ರತೆಯನ್ನು ಕಾಶಿ ಕ್ಷೇತ್ರಕ್ಕೆ ಹೋಲಿಸಲಾಗಿದೆ. ಇಲ್ಲಿ ಪೂಜಿತವಾದ ಇಂತಹ ದೇವಾಲಯಗಳು ಈಗ ಪಾಳು ಬಿದ್ದು ಶೋಚನೀಯ ಸ್ಥಿತಿಯಲ್ಲಿವೆ.

ಕಲ್ಯಾಣ ಚಾಳುಕ್ಯರ ಮಹಾಮಂಡಳೇಶ್ವರನಾದ ಕಳಚೂರಿ ವಂಶದ ಚಕ್ರವರ್ತಿ ತ್ರಿಭುವನಮಲ್ಲ ಬಿರುದಾಂಕಿತ ರಾಯಮುರಾರಿ ಸೋವಿದೇವ ಹಾಗೂ ಈತನ ಹಿರಿಯ ದಂಡನಾಯಕ ಮಲ್ಲಿದೇವನು ಸೇರಿ ಖರ ಸಂವತ್ಸರದ ಶ್ರಾವಣ ಶುದ್ಧ ಪೂರ್ಣಿಮೆ, ಆದಿವಾರದಂದು ಸೋಮಗ್ರಹಣ ಉತ್ತರಾಯಣ ಶ್ರೀಸ್ವಯಂ ಭೂಕಾಳೇಶ್ವರ ದೇವರ ಆರಾಧನೆಗಾಗಿ, ದೇವರ ಅಂಗಭೋಗ, ದೇವರ ರಂಗಭೋಗ, ಬ್ರಾಹ್ಮಣ ಸತ್ರಾರ್ಪಣಕ್ಕಾಗಿ, ಮನ್ನೆದಡಿ, ಸಾಸಿರನಾಡು, ನೊರಂಬಾಡಿಯನ್ನು ಧಾರಾಪೂರ್ವಕವಾಗಿ ದಾನ ಕೊಟ್ಟ ಉಲ್ಲೇಖ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೧೩೬) ಕ್ರಿ.ಶ.೧೧೭೧ರ ಕಾಳಗಿ ಶಾಸನದಿಂದ ತಿಳಿದು ಬರುತ್ತದೆ. ಹಿರಿಯದಂಡನಾಯಕ ಮಾಧ್ಯವಯ್ಯ ಹಾಗೂ ಖಾಂಡವ ಮಂಡಳೇಶ್ವರ ಬಾಣ ವಂಶದ ಗೊಂಕರಸನ ಹಿರಿಯ ಮಗ ಕಾಳರಸ ಮತ್ತು ಮೊಮ್ಮಗ ವೀರ ಗೊಂಕರಸರು ಸೇರಿ ಮ್ಮನೆದಡಿ ನಾಡಿನ ರಾಜಧಾನಿ ಕಾಳುಗೆಯ ಸ್ವಯಂ ದೇವರಿಗೆ (J.S.I.J.E;1957;P.252) ದಾನ ಮಾಡಿದರು. ಅಂಗಭೋಗಕ್ಕಾಗಿ, ರಂಗಭೋಗಕ್ಕಾಗಿ, ಚೈತ್ರ ಮಾಸದಲ್ಲಿನ ಉತ್ಸವಕ್ಕಾಗಿ, ದೇವಾಲಯದ ಜೀರ್ಣೋದ್ಧಾರಕ್ಕಾಗಿ, ಅಲ್ಲಿನ ಸ್ಥಾನಪತಿ ರಾಮೇಶ್ವರ ಸಂತರಿಗೆ, ಸೋವಿದೇವನ ವರ್ಷದ ಏಳನೆಯ ವಿಜಯ ಸಂವತ್ಸರ, ಅಶ್ವಯುಜ, ಶುದ್ಧ ಹತ್ತು, ಬ್ರಹಸ್ಪತಿ (ಗುರುವಾರ)ಯಂದು, ವಿಷ್ಣು ಸಂಕ್ರಮಣದ ನಿಮಿತ್ಯವಾಗಿ, ಕಾಳಗಿಯ ಗೌಡನಿಗೆ ಎಲ್ಲ ರೀತಿಯಿಂದಲೂ ತೆರಿಗೆ ಮುಕ್ತವಾಗಿ ಧಾರಾ ಪೂರ್ವಕವಾಗಿ ದಾನ, ದತ್ತಿಯನ್ನು ಕೊಟ್ಟರು. ಎಂಬುದು ಕ್ರಿ.ಶ.೧೧೭೩ರ ಕಾಳಗಿಯ ಶಾಸನದಿಂದ ತಿಳಿದು ಬರುತ್ತದೆ. ಕಲಚೂರಿ ದೊರೆ ಸೋವಿದೇವನ ಕಾಲಕ್ಕೆ ಸೇರಿದ್ದರಿಂದ ಈ ಶಾಸನವು ಕಲಚೂರಿಯ ಚರಿತ್ರೆಯನ್ನು ತಿಳಿಸುವ ಶಾಸನ ಇದಾಗಿದೆ. ದೇವಾಲಯಗಳ ನವನಿರ್ಮಾಣ, ಅವುಗಳ ಜೀರ್ಣೋದ್ಧಾರ ಕಾರ್ಯಗಳು ಅಂದಿನ ಜನತೆಯಲ್ಲಿ ಮೋಕ್ಷ ಸಾಧನೆಯ ಗುರಿಯಾಗಿತ್ತು. ಆಳರಸರು ಅಲ್ಲದೆ ಅನೇಕ ಪೆರ್ಗಡೆ, ದಂಡನಾಯಕರು ತಮ್ಮ ಹೆಸರಿನಲ್ಲಿ ದೇವಾಲಯಗಳಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿದ್ದಾರೆ. ದೇವಾಲಯ ಕಟ್ಟಿಸಿದರೆ ಪುಣ್ಯ ಬರುತ್ತದೆ (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨;ಪು.೩೧) ಎಂಬ ನಂಬಿಕೆ ಅರಸರಲ್ಲಿತ್ತು. ತಮ್ಮ ಹೆಸರು ಭೂಲೋಕದಲ್ಲಿ ಉಳಿಯಬೇಕೆಂದು ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಅಂತೆಯೇ ಕಾಳುಗೆಯಲ್ಲಿ ಕಾಳಿಮರಸನು ಕಾಳೇಶ್ವರ ದೇವಾಲಯಗಳನ್ನು ನಿರ್ಮಿಸಿದುದ್ದು ಕಂಡು ಬರುತ್ತದೆ. ವೀರಗೊಂಕರಸ ಶ್ರೀ ಮತ್ಕಲ್ಯಾಣ ಶಕ್ತಿ ಪಂಡಿತದೇವರೆಂಬ ಸ್ಥಾನಿಕಚಾರ್ಯರರ ಸನ್ನಿದಿಯಲ್ಲಿ ಗೋಂಕೇಶ್ವರ ದೇವರಿಗೆ ಬಿಟ್ಟ ಭೂಮಿ, ದಾನ ಹಾಗೂ ಮಲ್ಲಗಾಣ ಗ್ರಾಮದ ಉಂಬಳಿಯ ಬಗ್ಗೆ ಈ ಶಾಸನಗಳಲ್ಲಿ ಕಂಡುಬರುತ್ತದೆ. ಶ್ರೀ ವೀರಗೊಂಕೇಶ್ವರ ಈತನ ಮಡದಿ ಮೈಳಾಲದೇವಿ ಕಾಳಗಿಯಲ್ಲಿ ಗೊಂಕೇಶ್ವರ ದೇವಾಲಯ ನಿರ್ಮಾಣ ಮಾಡಿದರು. ದೇವರ ಅಂಗಭೋಗಕ್ಕೆ ದೇವರ ಪ್ರತಿಮೆಯನ್ನು ಮಾಡಿ ಅಲಂಕಾರಗೊಳಿಸುವ ಕ್ರಿಯೆ ದೇವಾಲಯದಲ್ಲಿ ಕಂಡು ಬರುತ್ತದೆ. ದೇವರ ವಿಗ್ರಹಕ್ಕೆ ಅರ್ಚಕರು ಸಲ್ಲಿಸುವ ಪೂಜೆಯನ್ನು (ರಾಷ್ಟ್ರಕೂಟರ ಶಾಸನಗಳು ಸಾಂಸ್ಕೃತಿಕ ಅಧ್ಯಯನ:೨೦೦೨:ಪು.೨೫೭) ಅಂಗಭೋಗ ಎಂದು

ಕರೆಯಲಾಗಿದೆ. ಸ್ನಾನ ಮಾಡಿಸುವುದು, ಗಂಧ ಲೇಪನ, ಧೂಪ ಬೆಳಗುವುದು, ಪುಷ್ಪ ಧರಿಸುವುದು ಇತ್ಯಾದಿಗಳೆಲ್ಲವೂ ಅಂಗಭೋಗ ಕ್ರಿಯೆಗಳಾಗಿದ್ದವು.

ದೇವಾಲಯದಲ್ಲಿ ಡೊಳ್ಳುಕುಣಿತ, ಭಜನೆ, ಜನಪದ ಹಾಡು, ದೇವರ ಸೇವೆ ಮುಂತಾದವುಗಳು ನಡೆಯುತ್ತಿದ್ದವು. ದೇವರು ಸಾಮಗಾನ ಪ್ರೀಯನೆಂದು ಸಾಮವೇದವು ಹೇಳುತ್ತದೆ. ಆದುದರಿಂದಲೇ ಕಲೆಗಳ ಆದಿದೇವತೆಯನ್ನಾಗಿ ಮಾಡಲಾಗಿದೆ. ಶಿವನು ಸಂಗೀತ ಪ್ರಿಯ, ನಾಟ್ಯ ಲೋಲನಂತೆ. ಆದುದರಿಂದಲೇ ಅವನನ್ನು ನಟರಾಜನೆಂದು ಕರೆಯಲಾಗಿದೆ. ಈ ಭಾವನೆಯ ಹಿನ್ನಲೆಯಲ್ಲಿ ಸಾಮಗಾನ ಪ್ರಿಯನಾದ ದೇವರಿಗೆ ದಿನನಿತ್ಯವೂ ಸಂಗೀತ-ನೃತ್ಯಸೇವೆ ನಡೆಯುತ್ತಿದ್ದವು. ಈ ಸೇವೆಗಾಗಿಯೇ ಪರಿಣಿತರಾದ ನೃತ್ಯಾಂಗನೇಯರೂ, ಸಂಗೀತಗಾರರೂ ಇರುತ್ತಿದ್ದರು. ಪ್ರಸಿದ್ಧ ದೇವಾಲಯಗಳಲ್ಲಿ ಇಂದಿಗೂ ರಂಗ ಮಂಟಪಗಳು ಕಂಡು ಬರುತ್ತವೆ.

ಪ್ರಾಚೀನ ಕಾಲದಲ್ಲಿ ಅಲ್ಲಿಯೇ ರಂಗಭೋಗ ನಡೆಯುತ್ತಿತ್ತು. ದೇವರ ನೈವೇದ್ಯಕ್ಕಾಗಿ, ಚೈತ್ರ ಮಾಸದಲ್ಲಿನ ಉತ್ಸವಕ್ಕಾಗಿ, ದೇವಾಲಯ ಜೀರ್ಣೋದ್ಧಾರಕ್ಕಾಗಿ, ದೇವರ ದೂಪ-ದೀಪಕ್ಕಾಗಿ, ತಪೋದನಕ್ಕಾಗಿ, ಜಪಕ್ಕಾಗಿ ಆರಕ್ಕೆ (ದಾಸೋಹ) ಪಂಚವಾದ್ಯಕರಿಗಾಗಿ, ಅರ್ಚಕರಿಗೂ, ದೇವದಾಸಿಯರಿಗೂ, (ದೇವದಾಸಿಯರು- ಎಂದರೆ ಭಗವಂತನ ದಾಸಿಯರು, ದೇವರ ಸೇವೆಗೆ ಮೀಸಲಾದವರು ಎಂದರ್ಥ. ದೇವಾಲಯಗಳಲ್ಲಿ ಗೀತ ನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದರು) ಇವರಿಗೂ ದಾನ ದತ್ತಿಕೊಟ್ಟಿದ್ದು ಶಾಸನ ಕ್ರಿ.ಶ.೧೧೬೩ರಲ್ಲಿ (ರಾಷ್ಟ್ರಕೂಟರ ಶಾಸನಗಳು ಸಾಂಸ್ಕೃತಿಕ ಅಧ್ಯಯನ;೨೦೦೨;ಪು.೨೫೮) ಉಲ್ಲೇಖಗೊಂಡಿದೆ. ತಮ್ಮ ಆಳ್ವಿಕೆಯ ಮನ್ನೆದಡಿ ಸಾಸಿರದ ನೂರಂಬಾಡದೊಳಗಿನ ತೆಂಗಳಿ-೭೦ಕ್ಕೆ ಸೇರಿದ ಮಲ್ಲಗಾಣವನ್ನು ಮೂರು ವಿಧದ ಉಪಭೋಗಕ್ಕಾಗಿ ಕೊಟ್ಟ ದಾನದ ಕರ (ತ್ರಿಭೋಗಾಧ್ಯಂತರಂ) ಗಳನ್ನು ಶಕವರಷ ಕ್ರಿ.ಶ.೧೦೮೫ನೆ ಸ್ವಭಾನು ಸಂವತ್ಸರದ ಪುಷ್ಯದಮಾಸ್ಸೆ ಸೋಮವಾರ ಸೂರ್ಯ ಗ್ರಹಣ ನಿಮಿತ್ಯ ಉಂಬಳಿಯಾಗಿ ಕೊಟ್ಟ ವಿಷಯ ಶಾಸನ ತಿಳಿಸುತ್ತವೆ. ಮೇಲಿನ ಎಲ್ಲ ತೆರಿಗೆಗಳು ರದ್ದುಗೊಳಿಸುವ ಕ್ರಮ ಗೊಂಕೇಶ್ವರ ದೇವಸ್ಥಾನಕ್ಕೆ ಕಾಲಡಿಯ ಮತ್ತರಾರು, ಕೋಟೆ ಸಮೀಪದ ತೋಟ, ಕೆರೆಯ ಭೂಮಿ ಹನ್ನೆರಡು ಮತ್ತರು ದಾನವನ್ನು ಧಾರಾಪೂರ್ವಕವಾಗಿ ಕೊಟ್ಟಿದ್ದು (ಕ್ರಿ.ಶ.೧೧೬೩ ಕಾಳಗಿ) ಶಾಸನದಲ್ಲಿ ಉಲ್ಲೇಖಗೊಂಡಿದೆ.

ಶ್ರೀಕಲ್ಯಾಣ ಶಕ್ತಿ ಪಂಡಿತ ದೇವರು ಗೊಂಕೇಶ್ವರ ದೇವಾಲಯದ ಆಚಾರ್ಯರಾಗಿದ್ದರು. ಈ ದೇವಾಲಯದಲ್ಲಿ ಯಮ, ನಿಯಮ, ಸ್ವಧ್ಯಾಯ, ಧ್ಯಾನ, ಧಾರುಣ, ಮೌನಾನುಷ್ಠಾನ, ದಿನ ನಿತ್ಯ ಮಾಡುವ ಪಂಚಕರ್ಮಗಳಾಗಿದ್ದವು. ಈ ದೇವಾಲಯಕ್ಕೆ ದೇವರ ನೈವೇದ್ಯಕ್ಕಾಗಿ, ತಪೋಧನರಿಗಾಗಿ, ಆ ಸ್ಥಳದಲ್ಲಿನ ಗದ್ದೆ ಮತ್ತರಿಪ್ಪತು ಶ್ರೀ ಕಲ್ಯಾಣ ಶಕ್ತಿ ಪಂಡಿತದೇವರಿಗೆ ಶ್ರೀ ಮನ್ಮಹಾಮಂಡಳೇಶ್ವರ, ವೀರಗೊಂಕರಸ ಹಾಗೂ ಮೊಮ್ಮಗ ಗೊಂಕರಸನು ಸೇರಿ ದೇವರ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದರು. ಸರ್ವಮಾನ್ಯ ವೃತ್ತಿ, ಸಹಿತವಾಗಿ ದೇವರ ಸಾನಿಧ್ಯದಲ್ಲಿ ಧಾರಾಪೂರ್ವಕವಾಗಿ ದಾನ ದತ್ತಿಗಳನ್ನು ಕೊಟ್ಟಿದ್ದು (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೧೫೫) ಕ್ರಿ.ಶ.೧೧೬೩ರ ಕಾಳಗಿಯ

ಶಾಸನ ತಿಳಿಸುತ್ತದೆ. ದೇವಾಲಯ ನಿರ್ಮಿಸಿದವರು ಮಲ್ಲೋಜ, ಬಮ್ಮೋಜ, ಅವರೋಜ, ಹಾಗೂ ರಾಮೋಜರ ಹೆಸರನ್ನು ಇಲ್ಲಿ ಕಾಣಬಹುದು. ಇಲ್ಲಿನ ರೂವಾರಿಗಳಿಗೂ ಒರಿಯ ಕೋಲ ಮತ್ತರು ಹನ್ನೆರಡು ಮನೆಯ ನಿವೇಶನ ಹನ್ನೆರಡು ಹಾಗೂ ರಾಮೋಜ ಎಂಬುವನು ಶಿಲ್ಪಿಯಾಗಿದ್ದು, ಈತನಿಗೂ ಒರಿಯ ಮತ್ತರಾರು ಮನೆಯ ನಿವೇಶನವೊಂದು, ಕೊನೆಗೆ ಶೇ(ಸೆ)ಟ್ಟರಿಗೂ ಭೂ ದಾನ, ದತ್ತಿ ಕೊಟ್ಟಿದ್ದು ಶಾಸನ ಉಲ್ಲೇಖಿಸುತ್ತದೆ.

ಕಾಳಗಿ ಶೈಕ್ಷಣಿಕ ಹಾಗೂ ಧಾರ್ಮಿಕ ಕೇಂದ್ರವಾಗಿತ್ತು. ಇಲ್ಲಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಸೋಮೇಶ್ವರ, ಬಿಜೇಶ್ವರ, ಕಾಳೇಶ್ವರ, ಜಯಲಿಂಗೇಶ್ವರ ಹಾಗೂ ಗೊಂಕೇಶ್ವರ ದೇವಾಲಯಗಳು ಇಂದು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟಿವೆ. ಊರ ನಡುವೆ ಇರುವ ಮಲ್ಲಿಕಾರ್ಜುನ ದೇವಾಲಯವೇ ಶಾಸನೋಕ್ತ ಗೊಂಕೇಶ್ವರ ದೇವಾಲಯವಾಗಿದೆ. ಇದರ ಬದಿಗೆ ಪುಷ್ಕರಣಿ ಇದ್ದು, ಸಮೀಪದಲ್ಲಿ ಹಳ್ಳವಿದೆ. ಇಲ್ಲಿನ ದೇವಾಲಯಗಳ ಕೆತ್ತನೆ ಅತಿ ಸೂಕ್ಷ್ಮ ಕಲೆಯಿಂದ ಕೂಡಿದ ಶಿಲಾಮೂರ್ತಿಗಳು ಕಂಡು ಬರುತ್ತವೆ. ಇದು ಚಿತ್ತಾಪುರ ತಾಲೂಕಿನ ಪ್ರೇಕ್ಷಣೀಯ ಸ್ಥಳ ಎಂಬುದರಲ್ಲಿ ಆಶ್ಚರ್ಯವೇನಲ್ಲ.

ಪ್ರಾಚೀನ ಕಾಲದಲ್ಲಿ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದ ಟೆಂಗಳಿ ಗ್ರಾಮ ಇಂದು ತನ್ನೆಲ್ಲ ಗತ ವೈಭವವನ್ನು ಇತಿಹಾಸದ ಪುಟಕ್ಕೆ ಸೇರಿಸಿಕೊಂಡಿದೆ. ಈ ಗ್ರಾಮದಲ್ಲಿದ್ದ ಅನೇಕ ಐತಿಹಾಸಿಕ ಸ್ಥಳಗಳು ಹಾಳಾಗಿವೆ. ಗುರುಕುಲಗಳು ಇಂದು ಎತ್ತಿ ಹಿಡಿಯಬೇಕಾದ್ದದು ಅವಶ್ಯವಾಗಿದೆ. ಟೆಂಗಳಿ ಪ್ರಾಚೀನ ಕಾಲದಲ್ಲಿ ಗುರುಕುಲದ ವಿದ್ಯಾ ಕೇಂದ್ರವಾಗಿತ್ತು. ಕಲ್ಯಾಣ ಚಾಳುಕ್ಯರ ಸಾಮಂತ ಅರಸ ವೀರಗೊಂಕರಸರ ಕಾಲಕ್ಕೆ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿತ್ತು ಎನ್ನುವುದು ಅಲ್ಲಿನ ಸ್ಮಾರಕ ಹಾಗೂ ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ.೧೧೦೭ರ ತೆಂಗಳಿಯ ಶಾಸನ ಚಾಳುಕ್ಯ ವಿಕ್ರಮ ವರ್ಷ ೩೧ನೆಯ ವ್ಯಯ ಸಂವತ್ಸರದ ಚೈತ್ರ ಶುದ್ಧತ್ರಯೋದಶಿ ಬ್ರಹಸ್ಪತಿ (ಗುರುವಾರ) ವಶಿಷ್ಠ ಗೋತ್ರದ ಆದಿತ್ಯ ಭಟ್ಟೋಪಾಧ್ಯಯನ ಮಗಳು ಶ್ರೀದೇಪಿಯಕ್ಕ ಅಗ್ರಹಾರ ತೆಂಗಳಿಯ, ಶ್ರೀ ಜಗನ್ನಾಥ ಕೇಶವ ದೇವರ ಪ್ರತಿಮೆ (J.S.I.J.E;1957;P.257) ಮಾಡಿಸಿದ್ದಳು. ದೇವಾಲಯ ನಿರ್ಮಾಣ ಮಾಡಿದ್ದಳು. ಆ ದೇವರ ರಂಗಭೋಗಕ್ಕೆ ನೈವೇದ್ಯಕ್ಕೆ, ನಂದಾ ದೀವಿಗೆಗೆ, ಚೈತ್ರ ಪವಿತ್ರಕ್ಕೆ ಬ್ರಾಹ್ಮಣರಿಗೆ, ಮಹಾಜನಗಳಿಗೆ, ಪ್ರಭುಗಳಿಗೆ, ಮಹಾಮಂಡಳೇಶ್ವರರಿಗೆ, ಬಿಬ್ಬರಸನ ಅನುಮತಿಯಿಂದ ತಮ್ಮ ವೃತ್ತಿಯೊಳಗಿನ ಕಬ್ಬಿನ ತೋಟ, ಸೈನ್ಯಾಧಿಕಾರಿ, ಕೋಲು ಮತ್ತರು-ಒಂದು, ಬೀರ ವೆಂಡಗನ ಕೋಲ ಮತ್ತರು-ಒಂದು, ಕಮ್ಮ ೪೫೦, ಧಾರಾ ಪೂರ್ವಕವಾಗಿ ದಾನ ಕೊಟ್ಟಿದ್ದು, ಶಾಸನದಿಂದ ತಿಳಿದು ಬರುತ್ತದೆ. ಪದ್ದರಚಿ ಚಟ್ಟೋಪಾಧ್ಯಾಯರು ಅವರ ಮಗಳು ಸಾವಿತ್ರಿಯಕ್ಕ ತಮ್ಮ ಸ್ಥಳ ವೃತ್ತಿಯೊಳಗೆ ಹೊಲ, ಕೋಲ ಮತ್ತರು-ಒಂದು, ಆ ದೇವರ ನೈವೇದ್ಯಕ್ಕೆ ನಂದಾ ದೀವಿಗೆಗೆ ಧಾರುಪೂರ್ವಕವಾಗಿ ಕೊಟ್ಟಿದ್ದು ಇದೇ ಶಾಸನದಿಂದ ತಿಳಿದು ಬರುತ್ತದೆ.

ಕ್ರಿ.ಶ. ೧೧೨೮ರ ವೇಳೆಯಲ್ಲಿ ನಿರ್ಮಾಣಗೊಂಡ ಅನೇಕ ದೇವಾಲಯಗಳು ಸ್ಮಾರಗಳು, ಶಾಸನಗಳು, ಟೆಂಗಳಿಯ ಭವ್ಯ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಕಲ್ಯಾಣ ಚಾಳುಕ್ಯರು ಹಾಗೂ ಅವರ ಸಾಮಂತರ ಬಗ್ಗೆ ಮಾಹಿತಿ ನೀಡುತ್ತವೆ. ತೆಂಗಳಿ ಗ್ರಾಮದ ಈಶ್ವರ ದೇವಸ್ಥಾನ ಅಂದಿನ ಗುರುಕುಲದ ಲಕ್ಷಣಗಳನ್ನು ಹೊಂದಿದೆ. ಇಲ್ಲಿನ ಸ್ಮಾರಕಗಳು ಅಳಿವಿನ ಅಂಚಿನಲ್ಲಿದ್ದರೂ ನಾಡಿನ ಇತಿಹಾಸ ಪರಂಪರೆಯನ್ನು ಸಾರುತ್ತವೆ. ರಾಷ್ಟ್ರಕೂಟರ ರಾಜಧಾನಿ ಮಳಖೇಡ ಮತ್ತು ವೀರಗೊಂಕರಸನ ರಾಜಧಾನಿ ಕಾಳಗಿ ಮಧ್ಯದಲ್ಲಿರುವ ತೆಂಗಳಿ (ವಿಜಯ ಕರ್ನಾಟಕ;೨೦೦೭;ಪು.೪) ಸಾಂಸ್ಕೃತಿಕ ನಗರವಾಗಿ ಅಂದು ಪರಾಕ್ರಮದಿಂದ ಮೆರೆದಿದ್ದ ನಾಡಾಗಿದೆ. ಇಂತಹ ಗ್ರಾಮದ ಇತಿಹಾಸ ತಿಳಿಸಲು ಶಾಸನಗಳು ಪ್ರಮುಖವಾಗಿವೆ. ಈ ಭಾಗದಲ್ಲಿ ದೊರೆತ ಶಾಸನಗಳ ಸಹಾಯದಿಂದ ಇತಿಹಾಸವನ್ನು ಕಟ್ಟಿಕೊಳ್ಳಬಹುದು.

ಕ್ರಿ.ಶ.೧೧೬೨ರ ತೆಂಗಳಿಯ ಶಾಸನ ಮಹಾಮಂಡಳೇಶ್ವರ ವೀರಗೊಂಕರಸನ ದಂಡನಾಯಕ ನಾಚರಸರು ತೆಂಗಳಿಯಲ್ಲಿ ನಾಟೇಶ್ವರ, ಬೋಗೇಶ್ವರ ಹಾಗೂ ಇತರ ಸ್ಥಳ ದೈವಿರತಿಗೆ ತೆಂಗಳಿ ಅಗ್ರಹಾರದ ಮಹಾಜನಗಳ ಎದುರಿನಲ್ಲಿ ಕೊಟ್ಟ (J.S.I.J.E;1957;P.259) ದತ್ತಿಯ ಉಲ್ಲೇಖವಿದೆ. ಶ್ರೀಮತ್ಸ ಅಗ್ರಹಾರ ತೆಂಗಳಿಯ ಮಹಾಜನಗಳ ಕೈಯಲ್ಲಿ ೭೭ ವೃತ್ತಿ ಎರಡು, ಸರ್ವಾನುಮತದಿಂದ, ಸರ್ವ ಪರಿಹಾರಕ್ಕಾಗಿ ಕೊಟ್ಟರು. ಕೋಲ ಮತ್ತರು ೨೦, ನಾಚಯ್ಯ ಕೇಶವ ದೇವನ ಮಗ ಚಾಮಯ್ಯನ ಕೈಯಲ್ಲಿ ಕ್ರಮವಾಗಿ, ಕೊಂಡ ವೃತ್ತಿಯೊಂದಕ್ಕೆ ಮಹಾಜನಗಳಿಗೆ ಪಾದ ಪೂಜೆಗೆ ಕೊಟ್ಟ ಸರ್ವನಮಸ್ಯವಾಗಿ ದಾನ ಕೊಟ್ಟಿದ್ದು ತಿಳಿದು ಬರುತ್ತದೆ. ನಾಚಯ್ಯ ಹೆಗ್ಗಡೆ, ಚಂದಿಮರಸರಿಗೆ ಕೊಟ್ಟ ಹಿರಿಯ ಕೋಲ ಮತ್ತರು ೧೦, ೨೦ರೊಳಗಿನ ಮತ್ತಿರೊಳಗಾಗಿ ಕೋಲ ೩೦ ಕೊಟ್ಟನು. ಕಂಚನಾದಿತ್ಯ ಚಟ್ಟೋಪಾಧ್ಯಾಯರ ಕೇಶವ ದೇವರ ನೈವಿದ್ಯಕ್ಕೆ, ಪೂಜೆಗಾಗಿ, ಚೈತ್ರ ಪವಿತ್ರಕ್ಕಾಗಿ, ದೇವಾಲಯ ಜೀರ್ಣೋದ್ಧಾರಕ್ಕಾಗಿ, ಪೂಜಾರಿಗಾಗಿ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬; ಪು.೧೭೨) ಶಕ ವರ್ಷ ೧೦೮೪ನೆಯ ಚಿತ್ರಬಾನು ಸಂವತ್ಸರದ ವೈಶಾಖ ಬಹುಳ ಪಂಚಮಿ ಸೋಮವಾರದಂದು ವೃಷಭ ಸಂಕ್ರಾಂತಿ ನಿಮಿತ್ಯ ಪೇರ್ಗಡೆ ಚಂದಿಮರಸ ಶ್ರೀ ಚಂದೇಶ್ವರ ದೇವರಿಗೆ ದಾನ ಕೊಟ್ಟನು. ಹಿರಿಯ ಕೋಲು ಮತ್ತರು ೧೦೫, ಶ್ರೀಭೋಗೇಶ್ವರ ದೇವರಿಗೆ ಮತ್ತರು ೩ ಮುಂತಾದ ದಾನ ದತ್ತಿಗಳನ್ನು ಕೊಟ್ಟ ಉಲ್ಲೇಖವಿದೆ.

ಬಸವ ಪೂರ್ವಯುಗದ ಶಿವಶರಣರ ಸಾಲಿನಲ್ಲಿ ಶಿವಗಣಂಗಳು ಪುರಾತನ ಗಣ, ಶೋಡಗಣ, ದಶಗಣ, ಹಾಗೂ ನೂತನ ಗಣಗಳಲ್ಲಿ ಪರಿಗಣಿಸಲಾಗುವ ಹಲವಾರು ಶಿವಶರಣರನ್ನು ಇಲ್ಲಿನ ಶಾಸನಗಳು (ಹೈದ್ರಾಬಾದ್ ಕರ್ನಾಟಕದ ಭಾಗದ ಕನ್ನಡ ಶಿಲಾ ಶಾಸನಗಳು;೧೯೯೨;ಪು.೨೫) ಉಲ್ಲೇಖಿಸುತ್ತವೆ. ಇಲ್ಲಿನ ದೇವಾಲಯಗಳ ನಿರ್ಮಾಣ ಜೀರ್ಣೋದ್ಧಾರ ಕಾರ್ಯ ಅಂದಿನ ಜನತೆಗೆ ಮೋಕ್ಷ ಮಾರ್ಗ ತೋರಿಸುವ ಒಂದು ನಿದರ್ಶನವಾಗಿವೆ. ಅರಸರು, ಪೆರ್ಗಡೆಗಳು, ದಂಡನಾಯಕರು ಇವರು ತಮ್ಮ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಶಿವಲಿಂಗ ಸ್ಥಾಪಿಸಿದರೆ ತಮಗೆ ಶಿವ. ಒಲಿಯಬಹುದು ಎಂಬುದು ಇಲ್ಲಿನ ಅರಸರ, ದಂಡನಾಯಕರ ಕಲ್ಪನೆಯಾಗಿತ್ತು. ಹಾಗಾಗಿ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದರು. ಇದಕ್ಕೆ ಕಾಳಗಿ ಗ್ರಾಮದಲ್ಲಿರುವ ಕಾಳಿಮರಸನು ಕಾಳೇಶ್ವರ ದೇವಾಲಯ ನಿರ್ಮಿಸಿದನೆಂಬುದು ಶಾಸನದಿಂದ ತಿಳಿದು ಬರುತ್ತದೆ.

ಕ್ರಿ.ಶ.೧೧೨೩ರ ಮರತೂರಿನ ಶಾಸನ ಮೊದಲು ಪರಿಶೀಲಿಸಿದವರು (ವಿಜ್ಞಾನೇಶ್ವರ ಮಿತಾಕ್ಷರ:೨೦೦೫:ಪು.೩೧) ಪಿ.ಬಿ.ದೇಸಾಯಿ ಅವರು. ಭಾರತೀಯ ನ್ಯಾಯ ಪದ್ಧತಿ ಒಂದು ದೃಷ್ಟಿಯಲ್ಲಿ ಧರ್ಮಶಾಸ್ತ್ರ ಎಂದೇ ಪ್ರಚಲಿತ. ಪ್ರೊ.ಮಹಾಮಹೋಪಾಧ್ಯಾಯ ಪಿ.ವಿ.ಕಾಣೆ ಅವರ ಧರ್ಮಶಾಸ್ತ್ರದ ಸಂಪುಟಗಳನ್ನು ನೋಡಿದವರಿಗೆ ಈ ಶಾಸನ ಚಿರಪರಿಚಿತವಾಗಿದೆ. ಮರತೂರಿನ ಶಾಸನದ ಉಲ್ಲೇಖದಿಂದ ತಿಳಿದು ಬರುವ ಅಂಶವೆಂದರೆ ಬೀಚಿರಾಜನು ಮರತೂರಿನಲ್ಲಿ ಈಶ್ವರ ಕೇಶವ ದೇವಾಲಯವನ್ನು ನಿರ್ಮಾಣ ಮಾಡಿದನು. ಈ ದೇವಾಲಯಕ್ಕೆ ನಾಡ ಪ್ರಭುಗಳಾದ ಬಿಬ್ಬರಸನ ಮಗ ಗೊಂಕರಸನು ಚಾಳುಕ್ಯ ವಿಕ್ರಮ ವರ್ಷ ೪೮ ಶೋಭಕ್ರತ ಸಂವತ್ಸರದ ಮಾಘ ಶುದ್ಧ ೭ ವಡ್ಡವಾರ (ಶನಿವಾರ) ಈ ದೇವಾಲಯದ ದೇವರಿಗಾಗಿ ಅಂಗಭೋಗ, ರಂಗಭೋಗಕ್ಕೆ, ಪೂಜೆಗೆ, ಚೈತ್ರ ಪವಿತ್ರಕ್ಕೆ, ನೈವೇದ್ಯಕ್ಕೆ ನಂದಾದೀವಿಗೆ ಕೊಟ್ಟ ಉಲ್ಲೇಖ ಶಾಸನದಿಂದ ತಿಳಿದು ಬರುತ್ತದೆ. ಬೊಂತೇಶ್ವರ ದೇವಾಲಯದ ಭೂಮಿ ಅಳೆಯುವ ಕೋಲಿನಿಂದ ಮತ್ತರು ನಾಲ್ಕು, ಆ ದೇವಾಲಯದಲ್ಲಿ ಪೂಜಾ ಕಾರ್ಯಗಳಾದ ಪಂಚ ಮಹಾಶಬ್ದ (ಐದು ಬಗೆಯ ವಾದ್ಯಗಳು) ಧೂಪ, ಜಾಗಟೆ, ಹರಿಕಾರ ಇತ್ಯಾದಿ ಕಾರ್ಯಗಳ ಖರ್ಚಿಗೆಂದು ಮತ್ತರು ಎರಡು, ಸಂಜೆ ವೇಳೆಗೆ ನಡೆಯುವ ಪೂಜೆಗೆಂದು ಭೂಮಿ, ಕಮ್ಮ ೬೦೦, ತೋಟದ ಭೂಮಿ ಕಾಲಡಿಯ ಮತ್ತರು ೧, ನಂದಾ ದೀವಿಗೆಗೆ ಊರಲ್ಲಿ ಗಾಣಗಳನ್ನು ನಡೆಸುವವರು ಕೊಡಬೇಕಾದದ್ದು ಎಣ್ಣೆಧಾರೆ, ಊರಿನಲ್ಲಿ ಭತ್ತ ಮಾರಿದವರು ಕೊಡಬೇಕಾದ ತೆರಿಗೆ ಹೊನ್ನಿಗೆ ಸಲಗವೆತ್ತ, ತಂಬಲಿಗೆರು (ಎಲೆಗಾರರು) ಮಾರಿದ ಎಲೆಯ ಹೇರಿಗೆ ಎಲೆ-೨೫, ಅಡಿಕೆ ಮಾರಿದ ಹೊನ್ನಿಗೆ ೧೦, ಮಾರಿಸೆಟ್ಟಿ ಮಾಡಿಸಿದ ಸೂರ್ಯ ದೇವಾಲಯಕ್ಕೆ ಕೊಟ್ಟ ಭೂಮಿ ಕಮ್ಮ ೪೫೦ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೯೬) ಇವು ದಾನ ದತ್ತಿ ಕೊಟ್ಟಿದ್ದು ಕ್ರಿ.ಶ.೧೧೨೩ರ ಮರತೂರಿನ ಶಾಸನ ಉಲ್ಲೇಖಿಸುತ್ತದೆ. ಅಲ್ಲದೆ ಈ ಗ್ರಾಮ ಹಿಂದೆ ಕುಗ್ರಾಮವಾಗಿದ್ದಿತ್ತು. ಇಂತಹ ಧಾರ್ಮಿಕ ಅಂಶಗಳಿಂದ ಇಂದು ಈ ನಾಡು ಶೈಕ್ಷಣಿಕ ಕೇಂದ್ರ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿತ್ತು. ಶಾಸನದ ಕೊನೆಗೆ ಶಾಪಾಶಯದಿಂದ ಉಲ್ಲೇಖಗೊಂಡಿದೆ. ದಾನದತ್ತಿಗಳನ್ನು ರದ್ದುಪಡಿಸಿದರೆ ಉಂಟಾಗುವ ಪಾಪ ಮತ್ತು ಪಾಲಿಸಿದರೆ ಪುಣ್ಯ ಬರುತ್ತದೆ ಎಂಬ ಅಂಶಗಳನ್ನೊಳಗೊಂಡಿದೆ.

ಪ್ರಾಚೀನ ಕುಂತಲವೆಂದೇ ಕರೆಯುವ ಕರ್ನಾಟಕ, ಸಾಂಸ್ಕೃತಿವಾಗಿ, ಸಂಪತ್ಭರಿತ ಪ್ರದೇಶ. ಇಲ್ಲಿಯ ಜನರ ಬದುಕು, ಆಚಾರ ವಿಚಾರ, ಕಲೆ, ಸಾಹಿತ್ಯ, ಸಂಸ್ಕೃತಿ ಎಲ್ಲವುಗಳಿಂದಲೂ ಪ್ರದೇಶ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ಚಾರಿತ್ರಿಕ ದೃಷ್ಟಿಯಿಂದಲೂ ಇಲ್ಲಿನ ನೆಲ ಪ್ರಾಮುಖ್ಯತೆ ಪಡೆದು ಕೊಂಡಿದೆ. ಕಾಲ ಕಾಲಕ್ಕೆ ಈ ನಾಡನ್ನಾಳಿದ ಅರಸರರು, ರಾಣಿಯರು ಅಲ್ಲದೆ ಇತರ ಸಾಮಂತರೂ ಕೂಡ ವಿಶೇಷ ಕೊಡುಗೆ ನೀಡುತ್ತ ಬಂದಿದ್ದಾರೆ. ಅವುಗಳಲ್ಲಿ ನಾಗಾಯಿಯು ಒಂದಾಗಿದೆ.

ನಾಗಾಯಿಯು ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿತ್ತಲ್ಲದೆ, ಇದೊಂದು ಸುಪ್ರಸಿದ್ಧ ವಿದ್ಯಾಕೇಂದ್ರ, ಪುಣ್ಯಕ್ಷೇತ್ರ, ಕಲೆಯಬೀಡು, ಸುಸಜ್ಜಿತ ನಾಗರಿಕತೆಯ ಹಾಗೂ ಸಾಂಸ್ಕೃತಿಕ ತಳಹದಿಯ ಮೇಲೆ ನಿರ್ಮಾಣಗೊಂಡಿರುವಂಥದ್ದು. ಇಲ್ಲಿನ ಅಗ್ರಹಾರಕ್ಕೆ ಐತಿಹಾಸಿಕ ಹಿನ್ನಲೆ, ಧಾರ್ಮಿಕ ಪರಂಪರೆಯಿದ್ದು, ಸಾವಿರಾರು ವರ್ಷಗಳು ಗತಿಸಿದರೂ, ಇಂದಿಗೂ ಕಲಾ ಆರಾಧಕರನ್ನು ಇತಿಹಾಸಕಾರರನ್ನು ಸಂಶೋಧಕರನ್ನು ಕೈಬೀಸಿ ಕರೆಯುವಂತಿದೆ.

ನಾಗಾಯಿಯನ್ನು ನಾಗವಾಪಿ, ನಾಗವಾವಿ, ನಾಗಾವಿ ಎಂಬ ವಿಭಿನ್ನ ಹೆಸರುಗಳಿಂದ ಕರೆಯುವುದುಂಟು. ನಾಗವಾಪಿ ಎನ್ನುವ ಪದ ನಾಗ ಮತ್ತು ವಾಪಿ ಎಂಬ ಎರಡು ಪದಗಳಿಂದ ಕೂಡಿದೆ. ವಾಪಿಯ ಅರ್ಥ ಬಾವಿ. ನಾಗವಾವಿ ಹೆಸರೇ ಅಪಭ್ರಂಶವಾಗಿ ನಾಗಾಯಿ ಆಗಿರಬಹುದು. ವರ್ಷದ ಎಲ್ಲಾಕಾಲದಲ್ಲಿಯೂ ನೀರು ಉಕ್ಕುವ ಬುಗ್ಗೆಗಳು ಈಗಲೂ ಇಲ್ಲಿ ಕಂಡುಬರುತ್ತವೆ. ನಾಗಾವಿಯ ಶಾಸನಗಳಲ್ಲಿ ಅಗ್ರಹಾರ ನಾಗಾವಿ, ಮಹಾ ಅಗ್ರಹಾರ ನಾಗವಾವಿ, ಸರ್ವ ನಮಸ್ಯೆದಗ್ರಹಾರ ನಾಗಾವಾವಿ ಎಂದೆಲ್ಲ ಉಲ್ಲೇಖಿಗೊಂಡಿದೆ. ಇಂದು ನಾಗಾವಿ ಪ್ರದೇಶವನ್ನು ನಾಗಾಯಿ ಎಲ್ಲಮ್ಮ ದೇವಿಯ ಪುಣ್ಯ ಕ್ಷೇತ್ರವೆಂದೇ ಹೆಚ್ಚಾಗಿ ಗುರುತಿಸಲಾಗುತ್ತದೆ.

**ಅಗ್ರಹಾರ**

ಅಗ್ರಹಾರವೆಂದರೆ ಶ್ರೇಷ್ಠವಾದ ಸ್ಥಳ ಅಥವಾ ಶ್ರೇಷ್ಠರಿಗೆಂದು ಕೊಟ್ಟ ಸ್ಥಳ. ಇದರ ಮೂಲ ರೂಪ "ಅಗ್ರಹಾರ" ಎಂದಿರಬೇಕು. ಅದು ಅಗ್ರ + ಆಹಾರ ಎಂಬ ಎರಡು ಪದಗಳ ಸಮಾಸವೆಂದೂ ಪ್ರೊ.ಡಿ.ಎಲ್.ನರಸಿಂಹಾಚಾರ್ಯರ (ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು;೧೯೯೨; ಪು.೧೯) ಅಭಿಪ್ರಾಯಪಟ್ಟಿದ್ದಾರೆ. ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ. ಅಗ್ರಹಾರದಲ್ಲಿ ಬ್ರಾಹ್ಮಣರೇ ಇರಬೇಕಿಲ್ಲ. ಬೇರೆ ಜಾತಿಯ ಜನರು ಇರಬಹುದು. ಅದರ ಉತ್ಪತ್ತಿ ಎಲ್ಲವೂ ಬ್ರಾಹ್ಮಣರಿಗೆ ಸಲ್ಲುತ್ತದೆ. ಆದರೆ ಆ ಊರಿನಿಂದ ರಾಜಾದಾಯಕ್ಕೆ ಸಲ್ಲಬೇಕಾಗಿದ್ದ ಕಂದಾಯದ ಹಣವನ್ನು ಬ್ರಾಹ್ಮಣರು ಅನುಭವಿಸುತ್ತಿದ್ದರು.

ಸುಮಾರು ಕ್ರಿ.ಶ.೪೨೦-೪೪೫ರ ವರೆಗೆ ಆಳಿದ ಶಾಲಂಕಾಯನ ದೊರೆ ಎರಡನೆಯ ನಂದಿವರ್ಮನ ತಾಮ್ರಪಟವೊಂದರಲ್ಲಿ ಕುರವಕ ಶ್ರೀಧರ ಎಂಬ ಹೆಸರಿನ ಅಗ್ರಹಾರದ ಹೆಸರಿರುವುದರಿಂದ ಬ್ರಾಹ್ಮಣರಿಗೆ ಊರುಗಳನ್ನು ದತ್ತಿಯಾಗಿ ಬಿಟ್ಟುಕೊಡುವ ಸಂಪ್ರದಾಯ ಸಾಕಷ್ಟು ಪ್ರಾಚೀನದೆಂದೇ ಹೇಳಬೇಕು. ಕರ್ನಾಟಕದ ಇನ್ನು ಈಚಿನ ಶಾಸನಗಳಲ್ಲಿ ಅಗ್ರಹಾರಗಳ ವಿಷಯ ಬಂದಿದ್ದರೂ ಕ್ರಿ.ಶ. ಐದನೆಯ ಶತಮಾನದಲ್ಲಿಯೇ. ಅಗ್ರಹಾರಗಳು ಕಾಣಿಸಿಕೊಂಡಿದ್ದವು ಎಂದು ಹೇಳಲು (ಕರ್ನಾಟಕದಲ್ಲಿ ಪುರಾತನ ವಿದ್ಯಾಕೇಂದ್ರಗಳು;೧೯೮೩;ಪು.೧೨) ಆಧಾರಗಳಿವೆ. ಕದಂಬರ ಅನೇಕ ತಾಮ್ರ ಪಟಗಳು ವೈದಿಕರಿಗೆ ಕೊಟ್ಟ ದಾನ, ದತ್ತಿಗಳನ್ನು ಹೇಳುತ್ತವೆ. ಪ್ರಾಚೀನ ಕಾಲದಲ್ಲಿ ಸಾಮ್ರಾಟರು, ಮಹಾಮಂಡಳೇಶ್ವರರು, ದಂಡನಾಯಕರು, ವಿದ್ಯಾಕೇಂದ್ರಗಳು, ಯಜ್ಞಗಳು, ನಡೆಸಲು ಬ್ರಾಹ್ಮಣರು ವಸತಿಯಲ್ಲಿ ವಾಸವಾಗಿದ್ದರು. ಈ ಎಲ್ಲ ಬ್ರಾಹ್ಮಣೊತ್ತಮ್ಮರು ಒಂದೆಡೆ ಇರುವ ಪ್ರದೇಶಕ್ಕೆ ಅಗ್ರಹಾರವೆಂದು ಕರೆಯಲಾಗುತ್ತದೆ. ಈ ಅಗ್ರಹಾರದಲ್ಲಿ ವಾಸಿಸುವ ಬ್ರಾಹ್ಮಣರನ್ನು ಮಹಾಜನರೆಂದು ಕರೆಯಲಾಗುತ್ತಿತ್ತು. ನಾಗಾಯಿಯಲ್ಲಿ ನಾಲ್ಕು ನೂರು ಮಹಾಜನರಿದ್ದರೆಂದ (ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್; ೧೯೯೭;ಪು.೭೫೬) ಕ್ರಿ.ಶ.೧೦೯೪ರ ಶಾಸನ ತಿಳಿಸುತ್ತದೆ. ಈ ಸಂಖ್ಯೆಯನ್ನು ನೋಡಿದರೆ, ನಾಗಾಯಿಯು ಅತ್ಯಂತ ದೊಡ್ಡ ಅಗ್ರಹಾರವೆಂದು ಹೇಳಬಹುದು. ಏಕೆಂದರೆ ಮಹಾಜನರ ಸಂಖ್ಯೆಯು ಆಯಾ ಅಗ್ರಹಾರಗಳ ವ್ಯಾಪ್ತಿಯ ಮೇಲೆ ಅವಲಂಬಿಸಿರುತ್ತದೆ. ಅಗ್ರಹಾರದ ವ್ಯವಸ್ಥೆಯನ್ನು ಮಹಾಜನರೇ ನೋಡಿಕೊಳ್ಳುತ್ತಿದ್ದರು. ವಿದ್ವಾಂಸರು, ಬ್ರಾಹ್ಮಣರು ತಾವು ಇರುವ ಸ್ಥಳದಲ್ಲಿಯೇ ವೇದ, ಶಾಸ್ತ್ರ, ಜೋತಿಷ್ಯ, ಗಣಿತ ಮುಂತಾದ ಮಹತ್ವದ ಶಾಸ್ತ್ರಗಳ ವಿಷಯಗಳನ್ನು ಬೋಧಿಸುತ್ತಿದ್ದರು. ಅಧ್ಯಾಪಕ ವರ್ಗದ ಯೋಗ ಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ವಿಶಿಷ್ಟ ಅಗ್ರಹಾರಗಳಲ್ಲಿ ಇಂದಿನ ಚಿತ್ತಾಪುರ ತಾಲೂಕಿನ ನಾಗಾಯಿಯು ಒಂದಾಗಿದೆ.

ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ "ಮಹಾಜನಗಳು" ಅವರೇ ಆ ಅಗ್ರಹಾರದ ಪ್ರಭುಗಳು. ಮಹಾಜನಗಳಲ್ಲಿ ಬ್ರಾಹ್ಮಣರೇತರರು ಕಡಿಮೆ ಸಂಖ್ಯೆಯಲ್ಲಾದರೂ ಇದ್ದಿರಬಹುದೆಂದು ಡಾ॥ಅಲ್ತೇಕರರು (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ;೨೦೦೨;ಪು.೨೩೬) ಅಭಿಪ್ರಾಯಪಟ್ಟಿದ್ದಾರೆ. ಕೆಲವು ಶಾಸಸಗಳನ್ನು ಉದಾಹರಿಸುತ್ತಾರೆ. ಚಾರಿತ್ರಿಕ ದೃಷ್ಟಿಯಿಂದಲೂ ನಾಗಾಯಿ ಪ್ರದೇಶ ಮಹತ್ವದ ಸ್ಥಾನ ಪಡೆದಿದೆ. ಶಾತವಾಹನರು, ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ಕಳಚೂರ್ಯರು ಈ ಪ್ರದೇಶದಲ್ಲಿ ಸತತವಾಗಿ ಆಳ್ವಿಕೆ ಮಾಡಿದ್ದಾರೆ. ನಂತರ ಈ ಭಾಗದಲ್ಲಿ ಮಹಮ್ಮದೀಯರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ ಕಂಪನಿ, ಸರಕಾರಗಳೂ ಇಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ರಾಷ್ಟ್ರಕೂಟರು ಈ ಭಾಗದ ಮಳಖೇಡ (ಮಾನ್ಯಖೇಟ)ವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಸಮೀಪದ ಸೇಡಂ ರಾಣಿವಾಸ, ನೀಲಹಳ್ಳಿಯಲ್ಲಿ ಖಜಾನೆಯು ಇದ್ದರೆ, ದಂಡೋತ್ತಿಯಲ್ಲಿ ಸೈನ್ಯದ ವಾಸಸ್ಥಳವಿತ್ತು. ಈ ಅವಧಿಯಲ್ಲಿಯೇ ನಾಗಾಯಿಯು ಸುಪ್ರಸಿದ್ಧ ಅಗ್ರಹಾರವಾಗಿತ್ತು ಎಂದು ತಿಳಿಸುತ್ತದೆ.

**ಘಟಿಕಾಸ್ಥಾನ**

ಉಚ್ಚ ಶಿಕ್ಷಣ ಸಂಸ್ಥೆಗಳಲ್ಲಿ 'ಘಟಿಕ' ಅತ್ಯಂತ ಪ್ರಾಚೀನವಾದುದು. ಇಲ್ಲಿ ನಡೆಯುತ್ತಿದ್ದ ಶಿಕ್ಷಣ ಉಳಿದೆಲ್ಲಕ್ಕೂ ಶಿಖರ ಪ್ರಾಯವಾಗಿತ್ತು. 'ಘಟಿಕ' ಎಂಬ ಸಂಸ್ಥೆಯು ಕರ್ನಾಟಕದಲ್ಲಿ ಅನೇಕ ಕಾಲ ಬದುಕಿ ಬಾಳಿತು. ಘಟಿಕೆಯನ್ನು ಸಭಾಗ್ರಹವೆಂದೂ, ದೇವಾಲಯವೆಂದೂ ಬ್ರಹ್ಮಪುರಿಯೆಂದು ಕರೆಯುತ್ತಿದ್ದರು. ಇದಕ್ಕೆ ಕಾರಣವೆಂದರೆ, ಅದು ಹಿಂದೆ ಒಂದು ದೇವಾಲಯಕ್ಕೆ ಹೊಂದಿಕೊಂಡಿರುತ್ತಿತ್ತು. ಅದರಲ್ಲಿ ಒಂದು ಸಭಾಗ್ರಹವಿರುತ್ತಿತ್ತು. ಅಗ್ರಹಾರ, ಬ್ರಹ್ಮಪುರಿಗಳಂತೆ ಘಟಿಕಾ ಸ್ಥಾನವೂ ವಿದ್ವಾಂಸರ ವಸತಿಯಿಂದ ಕೂಡಿರುತ್ತಿತ್ತು. ಘಟಿಕ ಎಂದರೆ ಗಳಿಗೆ-ಗಳಿಗೆಗೊಮ್ಮೆ ಬೇರೆ ಬೇರೆ ಉಪಾಧ್ಯಾಯರು ಬಂದು ಬೋಧಿಸುವ ವಿದ್ಯಾಲಯವೆಂದು (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ;೨೦೦೭;ಪು.೨೩೭) ಹೇಳಲಾಗುತ್ತದೆ. ಘಟಿಕಾಲಯಗಳ ಸ್ವರೂಪದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಘಟಿಕಾಸ್ಥಾನ ಎಂದರೆ ಧಾರ್ಮಿಕ ಕೇಂದ್ರ (Religious Centre) ಎಂಬ ಅಭಿಪ್ರಾಯ ಒಂದೆಡೆ ಇದ್ದರೆ, ಮತ್ತೊಂದೆಡೆ ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರ ಎಂಬ ಅಭಿಪ್ರಾಯವು ಇದೆ. ವಿಶಾಲಾರ್ಥದಲ್ಲಿ ಘಟಿಕಾಲಯದ ಸ್ವರೂಪವನ್ನು ಈ ರೀತಿಯಲ್ಲಿ ಅರ್ಥೈಸಬಹುದು. ಉಪಾಧ್ಯಾಯರೂ, ವಿದ್ಯಾರ್ಥಿಗಳೂ ಕೂಡಿಯೇ ಚರ್ಚೆ ನಡೆಸುತ್ತಿದ್ದರು. ವಿದ್ವಾಂಸರ ಸಹಾಯದಿಂದ ಧಾರ್ಮಿಕ ವಿಷಯದಲ್ಲಿ ಜ್ಞಾನವನ್ನು ಪಡೆಯುವುದೆ ಘಟಿಕಾ ಸ್ಥಾನವಾಗಿತ್ತು. ನಾಗಾಯಿ ಪ್ರಾಚೀನ ಅರಸು ಮನೆತನಗಳ ಕಾಲದಿಂದಲೂ ಅಗ್ರಹಾರ ಬ್ರಹ್ಮಪುರಿಯಾಗಿದ್ದು ನಂತರ ಘಟಿಕಾಲಯವಾಗಿ ಮಾರ್ಪಟ್ಟಿತ್ತು. ರಾಷ್ಟ್ರಕೂಟ ಅರಸು ಮನೆತನದ ನಾಲ್ಕನೆಯ ಗೋವಿಂದನು ತನ್ನ ಪಟ್ಟಾಭಿಷೇಕ ಕಾಲದಲ್ಲಿ ೬೦೦ ಅಗ್ರಹಾರಗಳಿಗೆ ಮತ್ತು ೮೦೦ ವಿದ್ಯಾರ್ಥಿಗಳಿಗೆ ದತ್ತಿ ಕೊಟ್ಟ ವಿಷಯವನ್ನು ಶಿಲಾಶಾಸನಗಳು ಹೇಳುತ್ತವೆ. ಆ ವೇಳೆಗಾಗಲೇ ನಾಗಾಯಿ ಮಹಾಗ್ರಹಾರವಾಗಿತೆಂಬುದು ತಿಳಿದು ಬರುತ್ತದೆ. ನಾಗಾಯಿಯ ರಾಮೇಶ್ವರ ದೇವಾಲಯದ ಜೊತೆಗೆ ಇದ್ದ ಸತ್ರ ಮತ್ತು ವಿದ್ಯಾಕೇಂದ್ರಕ್ಕಾಗಿ ಭೂಮಿ ದಾನವನ್ನು ನೀಡಿರುವುದನ್ನು ರಾಷ್ಟ್ರಕೂಟರ ಕಾಲದ ಕ್ರಿ.ಶ.೯೬೭ರ ನಿತ್ಯ ವರ್ಷದೇವನ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್:೧೯೯೬:ಪು.೬೩೫)

ಶಾಸನವು ಉಲ್ಲೇಖಿಸಿದೆ. ನಾಗಾಯಿಯ ಶಿಲಾಹಾರ, ರಾಷ್ಟ್ರಕೂಟರ ಕಾಲದಿಂದಲೂ ಅಗ್ರಹಾರವಾಗಿದ್ದು, ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶ ನೀಡುವಂತಹ ಘಟಿಕಾಲಯವಾಗಿ ಮಾರ್ಪಟ್ಟಿತು. ಇವರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿದ್ದು, ಒಂದನೆಯ ಸೋಮೇಶ್ವರನ ಕಾಲ (೧೦೪೩-೧೦೬೭)ಕ್ಕೆ ಇಲ್ಲಿ ಘಟಿಕಾಸ್ಥಾನ ಸ್ಥಾಪಿತವಾಯಿತು. ಇದನ್ನು ನಿರ್ಮಿಸಿದವನು ಮಧುವಪ್ಪರಸ ದಂಡನಾಯಕ. ಇಲ್ಲಿನ ಉದ್ಯಾನ, ನೀಡಿದ ದಾನ, ಇಕ್ಕಿದ ಸತ್ರ, ರಚಿಸಿದ ದೇವಾಲಯ, ಇಟ್ಟ ಅರವಟಿಗೆಗಳಿಗೆ ಲೆಕ್ಕವಿರಲಿಲ್ಲವೆಂದು ಶಾಸನ ಕವಿ ನಾಗೋಜನಿಂದ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ;೨೦೦೨;ಪು.೨೩೬) ತಿಳಿದು ಬರುತ್ತದೆ. ಆ ಮಹಾಪುರುಷನೇ ಒಂದು ಸ್ಥಾನಿಕ ವಿದ್ಯಾಲಯ ಮಟ್ಟದ ವಿದ್ಯೆಗಾಗರವಾದ ಘಟಿಕಸ್ಥಾನವನ್ನು ನಿರ್ಮಿಸಿ ಸಾಂಸ್ಕೃತಿ ಇತಿಹಾಸದಲ್ಲಿ ತನ್ನ ಹೆಸರನ್ನು ಚಿರಸ್ಥಾಯಿಯಾಗಿಸಿಕೊಂಡಿದ್ದಾನೆ.

ಚಾಳುಕ್ಯ ಚಕ್ರೇಶ್ವರನಾದ ಒಂದನೆಯ ಸೋಮೇಶ್ವರ ಕುಂದೂರು ನಾಡಿನ ಕೋಳೂರು ನೆಲೆವೀಡಿನಲ್ಲಿದ್ದಾಗ ಅವನಿಂದ ತನಗೆ ಪರಮೇಶ್ವರ ದತ್ತಿಗಾಗಿ ದೊರಕಿದ ಭೂಮಿಯನ್ನು ಅಲ್ಲಿನ ತ್ರೈಪುರುಷ ದೇವಾಲಯಕ್ಕೆ ತಾನು ಸ್ಥಾಪಿಸಿದ ಘಟಿಕಾ ಸ್ಥಾನಕ್ಕೆ ದಾನ ಕೊಡುತ್ತಾನೆ. ಕ್ರಿ.ಶ.೯೬೩ರಲ್ಲಿ ಹೈಹಯ ವಂಶದ ಮಹಾಮಂಡಳೇಶ್ವರ ಶಿರಸರಸನು ನಾಗಾಯಿಯಲ್ಲಿ ಜ್ಞಾನದಾನ ಅಖಂಡವಾಗಿ ಅವ್ಯಾಹತವಾಗಿ ನಡೆಯಲೆಂದು ಸಾಕಷ್ಟು ಭೂಮಿ ಸೀಮೆಗಳನ್ನು ದತ್ತಿಕೊಟ್ಟ ವಿಷಯ ಶಾಸನಗಳಲ್ಲಿ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೯೭; ಪು.೭೩೬) ವ್ಯಕ್ತವಾಗಿದೆ. ಕ್ರಿ.ಶ.೧೦೫೮ರ ಶಾಸನದಲ್ಲಿ

ಚತುರ್ವೇಧಪಾರಮಾರ ಪಾರಾಗಮರೆನಿಸಿದ ನಾಲ್ನೂರ್ವರ್ವಿಪ್ರೋತ್ತಮರ್ಗೆ
ಭರಣಂಗೆಯ್ಯಲಭಿನವ ಬ್ರಹ್ಮಲೋಕಮಿಂದೆಂಬಂತ
ನೆಗರ್ತ್ತವೆ ಸಕಳ ವಸುಮತಿ ತಳಕ್ಕೆ ತಲೆಯಿದೆನಿಸಿ ನೆಲರ್ದ್ದಿ
ಕುಂತಳ ಮಹೀತಳಕ್ಕೆ ತಿಳಕಮಪ್ಪನ್ತಿರ್ದ

ಮಹಾಗ್ರಾಹಾರ ನಾಗಾಯಿ ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ. ಒಂದನೆಯ ಸೋಮೇಶ್ವರನು ಕೊಳೂರು ನೆಲೆವೀಡಿನಲ್ಲಿ ಇದ್ದಾಗ ಪಾರಮೇಶ್ವರ ದತ್ತಿಯಾಗಿ ಪಡೆದ ಭೂಮಿಯನ್ನು ತ್ರೈಪುರುಷ ದೇವರ ಶಾಲೆಯಲ್ಲಿಯ ಘಟಿಕಾಲಯಕ್ಕೆ ಧಾರೆಯೆರೆದನೆಂದು ಇದೇ ಶಾಸನದಿಂದ ತಿಳಿದು ಬರುತ್ತದೆ.

ಕ್ರಿ.ಶ.೧೦೫೮ರ ಶಾಸನವು ತ್ರೈಲೋಕ್ಯಮಲ್ಲ ಮತ್ತು ಅಹವಮಲ್ಲ ಎಂಬ ಬರುದನ್ನು ಉಲ್ಲೇಖಿಸಿದೆ. ಆ ಕಾಲದ ಶಿಕ್ಷಣ ಸಂಸ್ಥೆಗಳಿಗೆ ಬಹು ಬೆಲೆಯುಳ್ಳ ಭೂಮಿಯನ್ನು ದಾನ ದತ್ತಿಗೆ ಸಂಬಂಧಿಸಿದ್ದಾಗಿದೆ. ತದುಪಾಧ್ಯಾಯರು ಮೂರು, ಭಟ್ಟದರ್ಶನ, ನ್ಯಾಸ, ಪ್ರಭಾಕರ ವ್ಯಾಖ್ಯಾತೃಗಳು ಮೂವರಿಗೆ, ವೇದವನೋದಿಸುವ ಮೂರು ಉಪಾಧ್ಯಾಯರಿಗೆ, ಶಾಲೆಯ ಸರಸ್ವತಿ ಭಂಡಾರಿಗರು ಆರು ಜನರಿಗೆ, ಒಟ್ಟು ೨೫೭ ಮಾನಸರ ಬಟ್ಟೆ, ಊಟ, ಜೀರ್ಣೋದ್ಧಾರ, ಪುಷ್ಪ, ಧೂಪ, ದೀಪ, ನೈವೇದ್ಯಕ್ಕೆ ತ್ರೈಪುರಷ ದೇವರ ಶಾಲೆಯ ಪರಿಷ ಮಾಣಿಯರ್ಗೆ ಸರ್ವನಮಸ್ಯವಾಗಿ ಕೊಟ್ಟ ಕೆಯಿ ಮಾಣಿಕೇಶ್ವರ ದೇವರಿಗೆ ಬಡಗ ಮತ್ತರು ೧೦೦೦, ಆ ಹೊಲ ನಾಗಾಯಿಯ, ದಿಗ್ಗವಿಗೆಯ, ಅರಲೂರಿನ ಕೆಳಗಿನ ಪ್ರದೇಶವನ್ನು ದಾನವಾಗಿ ಕೊಟ್ಟರು. ಭಟ್ಟದರ್ಶನ ವ್ಯಾಖ್ಯಾತೃಗೆ ಮತ್ತರು ೩೫, ನ್ಯಾಸವ್ಯಾಖ್ಯಾತ್ರಗೆ ಮತ್ತರು

೩೦, ಪ್ರಭಾಕರ ವ್ಯಾಖ್ಯಾತೃಗೆ ಮತ್ತರು ೪೫, ಸರಸ್ವತಿ ಭಂಡಾರಿಗೆ ಮತ್ತರು ೩೦, ಘಟಿಕಾ ಪ್ರಹಾರಿಗೆ ಮತ್ತರು ೩೦ ಈ ರೀತಿಯಾಗಿ ದಾನ ದತ್ತಿಗಳನ್ನು ಕೊಟ್ಟ ಉಲ್ಲೇಖ ಕ್ರಿ. ಶ. ೧೦೫೮ರ ಶಾಸನದಿಂದ ತಿಳಿದು ಬರುತ್ತದೆ.

ಘಟಿಕಾಲಯದಲ್ಲಿ ವೇದಗಳನ್ನು ಅಧ್ಯಯನ ಮಾಡುವ ೨೦೦ ವಿದ್ಯಾರ್ಥಿಗಳು, ಶಾಸ್ತ್ರವನ್ನು ಅಭ್ಯಸಿಸುವ ೫೦ ವಿದ್ಯಾರ್ಥಿಗಳು, ವೇದಗಳನ್ನು ಕಲಿಸುವ ಮೂವರು ಅಧ್ಯಾಪಕರು, ಭಟ್ಟ ದರ್ಶನ ನ್ಯಾಸಗಳಂತಹ ಶಾಸ್ತ್ರಗಳಲ್ಲಿ ಮನ್ನಣೆ ಪಡೆದ ಒಬ್ಬೊಬ್ಬ ಅಧ್ಯಾಪಕರು, ಸರಸ್ವತಿ ಭಂಡಾರಿ (ಗ್ರಂಥಪಾಲಕ) ಘಟಿಕೆ (ಗಂಟೆ) ಹೊಡೆಯುವ ಘಟಿಕಾ ಪ್ರಹಾರಿಗಳಿದ್ದು, ಜೀವನೋಪಾಯಕ್ಕಾಗಿ ಅರ್ಹತೆಗನುಗುಣವಾಗಿ ವಿವಿಧ ಅಳತೆಯ ಮತ್ತರು ಭೂಮಿಯನ್ನು ಸಂಭಾವನೆಯಾಗಿ ಪಡೆದ ವಿವರ (ಕನ್ನಡ ಶಾಸನಗಳ ಅಧ್ಯಯನ;೨೦೦೪;ಪು.೨೧೬) ಕ್ರಿ. ಶ. ೧೦೫೮ರ ಶಾಸನದಿಂದ ತಿಳಿದು ಬರುತ್ತದೆ. ಘಟಿಕಾಸ್ಥಾನಕ್ಕೆ ನೀಡಲಾದ ೧೦೦೦ ಮತ್ತರು ಭೂಮಿಯನ್ನು ಈ ಕೆಳಗಿನಂತೆ ಉಪಯೋಗಿಸಬೇಕೆಂದು ನಿರ್ದಿಷ್ಟಪಡಿಸಲಾಗಿತ್ತು.




ಈ ಮೇಲಿನ ಕ್ರಮದಲ್ಲಿ ಹಂಚಲಾದ ಈ ಭೂಮಿಯಲ್ಲಿ ಉಳಿದ ಭಾಗವನ್ನು ದೇವಸ್ಥಾನದ ಇತರ ಸೇವೆಗಳ ವೃತ್ತಿಗಳಿಗೆ, ಜೀರ್ಣೋದ್ಧಾರಕ್ಕಾಗಿ ವಿನಿಯೋಗಿಸಲಾಗುತ್ತಿತ್ತು. ನಾಗಾಯಿಯ ಘಟಿಕಾ ಸ್ಥಾನದಲ್ಲಿ ವೇದ, ಶಾಸ್ತ್ರ, ನ್ಯಾಸ, ಪ್ರಭಾಕರ ಮುಂತಾದ ವಿದ್ಯೆಗಳನ್ನು ಹೇಳಿಕೊಡುವ ಉಪಾಧ್ಯಾಯರು. ಆಸಕ್ತಿಯಿಂದ ಕಲಿಯುವ ವಿದ್ಯಾರ್ಥಿಗಳು ಒಂದೆಡೆ ಕೂಡಿಯೇ ಇರುತ್ತಿದ್ದರು. ಪ್ರಾಚೀನ ಗುರುಕುಲದ ಭವ್ಯ ಸ್ಮರಣೆಗೆ ಇವು ಒಂದು ಪ್ರತೀಕದಂತೆ. ಇಲ್ಲಿ ಅವರೆಲ್ಲರ ಉಚಿತ ಊಟ ವಸತಿಗಳ ಸೌಲಭ್ಯಗಳಲ್ಲದೆ, ಪ್ರತಿಯೊಂದು ಶಾಖೆಯ ವಿದ್ಯೆಯನ್ನು ಬೋಧಿಸುವ ಉಪಾಧ್ಯಾಯರುಗಳಿಗೆ ಸಂಭಾವನೆಯಾಗಿ ಭೂಮಿಯನ್ನು ಉಂಬಳಿಗಾಗಿ ಕೊಡಲಾಗುತ್ತಿತ್ತು. ಮಧುಸೂದನ ದೇವಾಲಯದಲ್ಲಿ ಇವರೆಲ್ಲರಿಗೆ ಉಚಿತ ನಿವೇಶನಗಳಿದ್ದಾದಾಗಿಯೂ ತಿಳಿದು ಬರುತ್ತದೆ. ಘಟಿಕಾಲಯದಲ್ಲಿ ಪ್ರತಿಯೊಂದು ಕಾರ್ಯದಲ್ಲಿಯೂ ಸಮಯಕ್ಕೆ ಮಹತ್ವ ಇರುತ್ತಿದ್ದರಿಂದ ಘಟಿಕಾ ಯಂತ್ರಗಳನ್ನು ಸ್ಥಾಪಿಸಿ ಅದನ್ನು ನೋಡಿಕೊಳ್ಳಲು ಘಟಿಕಾ ಪ್ರಹಾರಿಗಳನ್ನು ನೇಮಿಸಿಕೊಂಡಿದ್ದರ ವಿವರ ತಿಳಿದು (ಕನ್ನಡ ಶಾಸನಗಳ ಸಾಂಸ್ಕೃತಿ ಅಧ್ಯಯನ;೨೦೦೨;ಪು.೨೩೬) ಬರುತ್ತದೆ. ಅಧ್ಯಯನದ ವಿಷಯಗಳು ವೇದ ಮತ್ತು ಶಾಸ್ತ್ರಗಳನ್ನು ಒಳಗೊಂಡಿದ್ದವು. ಮೂರು ವೇದಗಳ ಜೊತೆಗೆ ವ್ಯಾಕರಣ ಮತ್ತು ಮಿಮಾಂಸೆಗಳನ್ನು ಅಭ್ಯಸಿಸುತ್ತಿದ್ದರು. ಘಟಿಕಾಲಯದಲ್ಲಿ ಅತ್ಯುತ್ತಮ ಪುಸ್ತಕ ಭಂಡಾರ ಇದ್ದು, ಬೋಧಿಸುವ ಗ್ರಂಥಗಳ ಜೊತೆಗೆ ಹೆಚ್ಚಿನ

ಓದಿಗಾಗಿ ಇನ್ನು ಅನೇಕ ಆಕರ ಗ್ರಂಥಗಳನ್ನು ಸಂಗ್ರಹಿಸಲಾಗಿತ್ತು. ಅಚ್ಚುಕಟ್ಟಾದ ಪುಸ್ತಕ ಭಂಡಾರ ಇದ್ದು ಮೇಲ್ವಿಚಾರಣೆಗಾಗಿ ಸರಸ್ವತಿ ಭಂಡಾರಿಯೊಬ್ಬನಿದ್ದನು. ನಿಷ್ಠೆಯ ಕಾರ್ಯಕ್ಕಾಗಿ ಮೂವತ್ತು ಮತ್ತರು ಭೂಮಿಯನ್ನು ಉಂಬಳಿಯಾಗಿ ಪಡೆದಿದ್ದನು. ಇದೊಂದು ಸನಿವಾಸ ಸಹಿತ ವಿದ್ಯಾಕೇಂದ್ರವಾಗಿತ್ತು.

ಕಲ್ಯಾಣ ಚಾಳುಕ್ಯರ ಕಾಲದ ಕ್ರಿ.ಶ.೧೦೬೮, ೧೦೮೫ರ ನಾಗಾಯಿಗೆ ಸೇರಿದ ಎರಡು ಶಾಸನಗಳು ಕ್ರಿ.ಶ.೧೦೫೮ರ ಶಾಸನಕ್ಕೆ ಪೂರಕವಾಗಿರುವುದಲ್ಲದೆ ನಾಗಾವಿಯಲ್ಲಿದ್ದ ವಿದ್ಯಾ ಸಂಸ್ಥೆಯ ವ್ಯಾಪ್ತಿಯನ್ನು ಇನ್ನಿತರ ಸಾಂಸ್ಕೃತಿಕ ಅಂಶಗಳನ್ನು ತಿಳಿಯುವುದಕ್ಕೆ ಸಹಾಯಕವಾಗಿದೆ. ಇಲ್ಲಿಯವರೆಗೂ ಕ್ರಿ.ಶ.೧೦೫೮ರ ಶಾಸನದಲ್ಲಿಯ ವಿವರಗಳನ್ನು ಅನುಸರಿಸಿ ನಾಗಾಯಿಯು ಘಟಿಕಾಲಯವಾಗಿತ್ತು ಎಂಬುದನ್ನು ಗಮನಿಸಲಾಗಿತ್ತು. ಈ ಶಾಸನಗಳ ವಿವರದಿಂದ ನಾಗಾಯಿಯ ಮಧುಸೂಧನ ದೇವಾಲಯವು ಕೇವಲ ಘಟಿಕಾಲಯ ಮಾತ್ರವಾಗಿರದೆ ಆ ಕಾಲದಲ್ಲಿ ಸಾಮಾಜಿಕ ಸಂಸ್ಥೆಯಾಗಿಯೂ ಪ್ರಾಮುಖ್ಯತೆ ಪಡೆದುಕೊಂಡಿತು.

ನಾಗಾಯಿಯ ರಾಮೇಶ್ವರ ದೇವಾಲಯದ ದ್ವಾರಗೋಪುರವು ಮೂರು ಅಂತಸ್ತಿನಿಂದ ಕೂಡಿದ್ದಾಗಿದೆ. ಇದರಲ್ಲಿ ಒಂದು ಅನುಷ್ಠಾನ ಭವನವಿತ್ತು. ಇದರಲ್ಲಿ ಏಕದಂಡಿ, ತ್ರಿದಂಡಿ ತಪಸ್ವಿಗಳು, ಸ್ನಾತಕರು, ಬ್ರಹ್ಮಚಾರಿಗಳು, ಹಂಸ, ಪರಮಹಂಸ, ಸನ್ಯಾಸಿಗಳು ತಮ್ಮ ಅನುಷ್ಠಾನವನ್ನು ನಡೆಯಿಸಬಹುದಾದಷ್ಟು (J.S.I.J.E;1957;P.252) ವಿಶಾಲವಾಗಿತ್ತು. ನಾಲ್ಕು ವೇದಗಳನ್ನು ಅಭ್ಯಸಿಸುತ್ತಿದ್ದ ಸಾವಿರಾರು ಶಾಖೆಗಳ ವಿದ್ಯಾರ್ಥಿಗಳಿಗೆ ನಾಗಾವಿಯಲ್ಲಿ ವಸತಿ ಸೌಕರ್ಯವಿತ್ತು. ಇಲ್ಲಿ ಒಂದು ನರ್ತನ ಶಾಲೆಯೂ ಇತ್ತು. ಇವೆಲ್ಲವೂ ಭವ್ಯವಾದ ಸಭಾಂಗಣದಲ್ಲಿದ್ದವು. ಈ ಮಠದಲ್ಲಿ ಎತ್ತರವಾದ ಮುಖಮಂಟಪಗಳು, ದ್ವಾರಗಳು, ಹಜಾರಗಳು, ಗೋಡೆಗಳು ಇದ್ದವು. ನಾಗಾಯಿ ಘಟಿಕೆಯ ಆವರಣವು ಹೂವಿನ ತೋಟದಿಂದ ಸುತ್ತಲು ಆವರಿಸಿದ್ದರಿಂದ ಸುಂದರವಾಗಿ ಕಾಣುತ್ತಿತ್ತು.

ಈ ಮಠದ ಕಾರ್ಯ ಕಲಾಪಗಳು ಸುಗಮವಾಗಿ ನಡೆಯುವುದಕ್ಕೆ ೧೦೪೫ ಮತ್ತರು ಭೂಮಿಯನ್ನು ಕೊಟ್ಟಿದ್ದರು. ಅದರಲ್ಲಿ ಅಧ್ಯಾಪಕರು, ಸರಸ್ವತಿ ಭಂಡಾರಿಗಳು ಪುರಾಣ ಭಟ್ಟರು, ವಾಸ್ತು ಶಿಲ್ಪಿಗಳು, ಪಾರುಪತ್ತೆಗಾರರು, ವೇಶಾಪಟ್ಟಿಯಂತೆ ಕಾರ್ಯಕ್ರಮದ ಮೇಲ್ವಿಚಾರಣೆ ನಡೆಸುವ ಘಟಿಕಾ ಪ್ರಹಾರಿಗಳು ಇದ್ದರು. ವೇದ ವೇದಾಂಗವನ್ನು ಅಭ್ಯಸಿಸುವ ವಿದ್ಯಾರ್ಥಿ ವರ್ಗ ಶ್ರೇಣಿ ಇದ್ದು, ಪ್ರತಿಯೊಂದು ಶ್ರೇಣಿ ವರ್ಗವೂ ತನ್ನದೇ ಆದ ಭಾವನೆಗಳನ್ನು ಹೊಂದಿತ್ತು. ಇತರ ಅಧ್ಯಾಪಕರ (ಬಿಡುಗಡೆ;೨೦೦೨;ಪು.೨೦) ವರ್ಗಗಳು ಇದ್ದವು. ಅಂತಹವುಗಳೆಂದರೆ ಜನ್ನಯ ಭಟ್ಟೋಪಾಧ್ಯಾಯರು, ಬ್ರಹ್ಮಪುರಿ ಡೋಣಯ ಭಟ್ಟರು, ಶಿಕ್ಷಾ ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ ಕಲ್ಪಗಳನ್ನು ಬಲ್ಲವರಾದ ಮೂವರು ಪಡಂಗಿಗಳು, ಸಂಜೆ ಮಠದಲ್ಲಿ ಪುರಾಣ ವಾಚಿಸುವ ಪುರಾಣ ಭಟ್ಟ ಮುಂತಾದವರು ಜ್ಞಾನ ಪ್ರಸಾರ ಕಾರ್ಯದಲ್ಲಿ ನಿರತರಾಗಿದ್ದರು. ಜೀವನೋಪಾಯಕ್ಕೆ, ಅರ್ಹತೆಗನುಗುಣವಾಗಿ ಹಲವು ಮತ್ತರು ಭೂಮಿಯನ್ನು ದತ್ತಿಯಾಗಿ ಪಡೆದಿದ್ದರು. ಕ್ರಿ.ಶ.೧೦೫೮ರ ಕಾಲಕ್ಕೆ ಉನ್ನತ ಶಿಕ್ಷಣ ಕಲಿಕೆಗೆ ಆಗರವಾಗಿದ್ದ ನಾಗಾಯಿಯು ಕ್ರಿ.ಶ.೧೦೮೫ರ ವೇಳೆಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಸಾಂಸ್ಕೃತಿಕ ಚಟುವಟಿಕೆಗಳಿಗೂ ಅವಕಾಶವನ್ನು ಕಲ್ಪಿಸಿಕೊಟ್ಟು, ಲಲಿತ ಕಲೆಗಳ ನೆಲೆವೀಡು ಆಗಿತ್ತು.

ಒಂದನೆಯ ಸೋಮೇಶ್ವರನ ದಂಡನಾಯಕನಾದ ಕಾಳಿದಾಸ ಪರಮೇಶ್ವರ ದತ್ತಿಯಾಗಿ ತಾಮ್ರ ಶಾಸನವನ್ನು ಬರೆಯಿಸಿದನು. ಚತುರ್ವೇದ, ಪರಿಣಿತಿಯಾದ ೪೦೦ ಜನ ಬ್ರಾಹ್ಮಣರಿಗೆ ಅಭಿನವ ಬ್ರಹ್ಮಲೋಕವು ಭೂ ಮಂಡಲಕ್ಕೆ ಶಿರಸ್ಸು ಕುಂತಳ ಲೋಕಕ್ಕೆ ಮುಖವು ಎನ್ನುವಂತಿದ್ದ ಅರಲು ೩೦೦ ತಿಳಿಕೆದಂತಿದ್ದ ಮಹಾಗ್ರಹಾರ ನಾಗಾಯಿಯಲ್ಲಿ ಅನೇಕ ಜನಹಿತಕಾರ್ಯಗಳೊಂದಿಗೆ ಪುಣ್ಯ ಕಾರ್ಯವನ್ನು ಇಡೀ ಜಗತ್ತಿಗೆ ಪ್ರತ್ಯಕ್ಷವಾಗಿ ಮಾಡಿ ತೋರಿಸುವ ಹಾಗೆ ತ್ರೈಪುರುಷ ದೇವರ ಶಾಲೆಯನ್ನು ಮಧುಸೂಧನಾಲಯವನ್ನು, ರಾಮೇಶ್ವರಾಲಯವನ್ನು, ರಾಮೇಶ್ವರ ತೀರ್ಥವನ್ನು ಕಟ್ಟಿಸಿ ಘಟಿಕಾಸ್ಥಾನವನ್ನಾಗಿಸಿದನು.

ಒಂದನೆಯ ಸೋಮೇಶ್ವರ ದಂಡನಾಯಕ ಕಾಳಿದಾಸ ಮಾತ್ರವಲ್ಲದೆ, ನಂತರದ ಕಾಲದಲ್ಲಿ ತ್ರಿಭುವನ ಮಲ್ಲನ ಸಾಮಂತ ಕನ್ನಡ ಸಂಧೀವಿಗ್ರಹಿ ಕಡಿತ ವೆರ್ಗ್ಗಡೆ ದಂಡನಾಯಕ ಮಧುವಪರಸನಿಂದ ಹಾಗೂ ಹೈಹಯ ವಂಶದ ಲೋಕರಸ ಮಹಾಮಂಡಳೇಶ್ವರನಿಂದಲೂ ಭೂಮಿ ಹಾಗೂ ಇತರೆ ವಸ್ತುಗಳನ್ನು ದತ್ತಿಯಾಗಿ ಪಡೆದ ವಿವರ (ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್;೧೯೭೭;ಪು.೭೩೮) ಕ್ರಿ ಶ. ೧೦೫೮ರ ಶಾಸನದಿಂದ ತಿಳಿದುಬರುತ್ತದೆ. ನಾಗಾಯಿ ಒಂದು ಅಗ್ರಹಾರ ನಾಲ್ಕು ನೂರು ಮಹಾಜನಗಳು ಆ ಕಾಲದಲ್ಲಿ ಪ್ರತಿಷ್ಠಿತ ಸ್ಥಾನವನ್ನು ಪಡೆದಿದ್ದರು. ಯಾವುದೇ ಅರಸ, ಮಾಂಡಳಿಕ ಹಾಗೂ ದಂಡನಾಯಕರು ನಾಗಾವಿಯ ಯಾವುದೇ ದೇವಾಲಯಗಳಿಗೆ ದತ್ತಿಗಳನ್ನು ಬಿಟ್ಟರೂ ಇವರ ಸಮ್ಮುಖದಲ್ಲಿಯೇ ಬಿಡಲಾಗುತ್ತಿತ್ತು. ಈ ಎಲ್ಲಾ ಅಂಶಗಳು ನಾಗಾವಿಯಲ್ಲಿ ದೊರೆತ ಉಳಿದ ನಾಲ್ಕು ಶಾಸನಗಳಿಂದ ತಿಳಿದುಬರುತ್ತದೆ.

ನಾಗಾಯಿಯಲ್ಲಿ ಲಕ್ಷ್ಮಣೇಶ್ವರ ಮತ್ತು ಶ್ರೀ ಸಿದ್ದೇಶ್ವರ ದೇವಾಲಯಗಳಿದ್ದು, ಇವುಗಳ ದೇವರ ನೈವೇದ್ಯಕ್ಕೂ ತ್ರಿಕಾಲದ ಪೂಜೆಗೂ ದಂಡನಾಯಕ ಕಾಳಿಮರಸರು ಹಾಗೂ ಹೈಹಯ ವಂಶದ ಮಹಾಮಂಡಳೇಶ್ವರ ಅನೆಮರಸರು ಕೂಡಿ ನಾಗಾಯಿಯ ಮಹಾಗ್ರಹಾರದ ನಾಲ್ಕನೂರು ವಿಪ್ರೋತ್ತಮರ ಸಮ್ಮುಖದಲ್ಲಿ ದತ್ತಿಯನ್ನು ಕೊಟ್ಟ ವಿವರ ಕ್ರಿ.ಶ.೧೧೯೩ರ ನಾಗಾಯಿ ಶಾಸನದಿಂದ ತಿಳಿದುಬರುತ್ತದೆ. ನಾಗಾಯಿಯು, ಅಗ್ರಹಾರ, – ಘಟಿಕಾಲಯವಾಗುವುದಕ್ಕಿಂತ ಮೊದಲು ಜೈನ ಕೇಂದ್ರವೂ ಆಗಿದ್ದಿತು ಎಂಬಲ್ಲಿ ಸಂದೇಹವೇ ಇಲ್ಲ. ೮–೧೦ನೆ ಶತಮಾನದ ಅವಧಿಯಲ್ಲಿ ಮಾನ್ಯಖೇಟವನ್ನು ರಾಷ್ಟ್ರಕೂಟರು ಆಳುತ್ತಿದ್ದ ಕಾಲದಲ್ಲಿ ಜೈನ ಧರ್ಮವು ಪ್ರಮುಖ ಸ್ಥಾನಗಳಿಸಿಕೊಂಡಿತ್ತೆಂಬುದನ್ನು ಆ ಕಾಲದ ಶಾಸನಗಳು ಸಮರ್ಥಿಸುತ್ತವೆ. ಮಾನ್ಯಖೇಟದ ಪರಿಸರದಲ್ಲಿಯೇ ನಾಗಾಯಿಯು ಇದ್ದುದರಿಂದ ಜೈನ ಕೇಂದ್ರವೆಂದು ಪ್ರಾಮುಖ್ಯತೆ ಪಡೆದಿತ್ತು. ಉತ್ಖನನದಿಂದ ದೊರೆತ ಅವಶೇಷಗಳನ್ನು ಪರಿಶೀಲಿಸಿದರೆ ಜೈನ ಧರ್ಮದ ಯಾವ ಶಾಖೆ ಇಲ್ಲಿ ಅಸ್ತಿತ್ವದಲ್ಲಿ ಇದ್ದಿತು ಎಂಬುದು ತಿಳಿದು ಬರುತ್ತದೆ. ಸುತ್ತಮುತ್ತಲ ಪರಿಸರದಲ್ಲಿ ಯಾಪನೀಯ ಪಂಥ ಇದ್ದುದರ ಬಗೆಗೆ ಉಲ್ಲೇಖ ಇರುವುದರಿಂದ ಇಲ್ಲಿಯೂ ಯಾಪನೀಯ ಇದ್ದಿರಬಹುದೆಂದು ಊಹಿಸಲು ಅವಕಾಶ ಇದೆ.

ಬಳ್ಳಿಗಾವೆಯ ಒಂದು ಶಾಸನವು ಅರವತ್ತು ನಾಲ್ಕು ಘಟಿಕಾಸ್ಥಾನಗಳಿದ್ದುದನ್ನು ಪ್ರಸ್ತಾಪಿಸಿದೆ (ಇ.ಸಿ.೭,ಶಿಕಾರಿಪುರ ೯೪, ಕ್ರಿ.ಶ.೧೦೯೪) ಬಳ್ಳಿಗಾವೆಯ ದಕ್ಷಿಣ ಕೇದಾರ ಸ್ಥಾನವು ಸ್ವಾಧ್ಯಾಯ ಸ್ಥಾನವು ಆಗಿತ್ತು (ಇ.ಸಿ.೭,ಶಿಕಾರಿಪುರ ೯೪, ಕ್ರಿ.ಶ.೧೧೬೨) ಸ್ವಾಧ್ಯಾಯ ಮಾಡುತ್ತಿದ್ದ ವಿದ್ಯಾರ್ಥಿ ಛಾತ್ರರು ಅಥವಾ ವಿದ್ಯಾರ್ಥಿ ತಪೋಧನರು ಇವರು ಪ್ರೌಢ ವಿದ್ಯಾಭ್ಯಾಸ ಮಾಡುತ್ತಿದ್ದರು. ಜೊತೆಗೆ ಬೋಧನೆ ವೃತ್ತಿಯನ್ನು ಮಾಡುತ್ತಿದ್ದರು. ಅವರ ಆಶನ, ಆಚ್ಛಾದನಗಳ ವ್ಯವಸ್ಥೆಗಾಗಿ 'ಛಾತ್ರವೃತ್ತಿ'ಯನ್ನು ನೀಡಲಾಗುತ್ತಿತ್ತು. ಅಂತಹ ಪ್ರೌಢ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದ ವಿದ್ವಾಂಸರೇ ಭಟ್ಟರು. ಅವರುಗಳ ಜೀವನಕ್ಕಾಗಿ ಭಟ್ಟವೃತ್ತಿಯನ್ನು ನೀಡಲಾಗುತ್ತಿತ್ತು. ಬಳ್ಳಿಗಾವೆಯಲ್ಲಿ ಯಗುಜು ಮಾಥರ್ವ್ಯ ಚತುರ್ವೇದ ಸ್ವಾಧ್ಯಾಯವೂ ನಡೆಯುತ್ತಿತ್ತು. ಅಲ್ಲಿನ ವ್ಯಾಖ್ಯಾನದ ವಿಷಯಗಳೆಂದರೆ ಕೌಮಾರ, ಪಾಣಿನೀಯ, ಶಾಕಟಾಯನ, ಶಬ್ದಾನುಶಾಸನ ಇತ್ಯಾದಿ ವ್ಯಾಕರಣಗಳು ಮತ್ತು ನ್ಯಾಯ ವೈಶಿಷ್ಠಿಕ ಮೀಮಾಂಸಾ ಸಾಂಖ್ಯಬೌದ್ಧ ಇತ್ಯಾದಿ. ಲಾಕುಳ ಸಿದ್ಧಾಂತ, ಪತಾಂಜಳ ಇತ್ಯಾದಿ ಯೋಗ ಶಾಸ್ತ್ರಗಳು, ಅಷ್ಟದಶ ಪುರಾಣ, ಧರ್ಮ, ಶಾಸ್ತ್ರ, ಕಾವ್ಯ, ನಾಟಿಕಾ ಮುಂತಾದ ವಿದ್ಯೆಗಳಿದ್ದವು. ನಾಟಿಕಾ ಎಂಬುದು ನೃತ್ಯವನ್ನು ಕುರಿತು ವಿದ್ಯೆಯಾಗಿರಬೇಕು. ಸಾಲೋಟಗಿ, ಬಳ್ಳಿಗಾವೆ, ನಾಗಾವಿಯಂತಹ ಪ್ರಸಿದ್ಧ ಸ್ಥಳಗಳು ಘಟಿಕಾಸ್ಥಾನಗಳೆಂದು (ಸಂಶೋಧನ;೧೯೯೧;ಪು.೬೧೪) ಉಲ್ಲೇಖಿಸಿವೆ. ಸಾಲೋಟಗಿಯು ರಾಷ್ಟ್ರಕೂಟರ ಕಾಲದಲ್ಲೇ ಬಹು ಮುಖ್ಯವಾದ ವಿದ್ಯಾ ಕೇಂದ್ರವಾಗಿತ್ತು. ಅದೊಂದು ತ್ರೈಪುರುಷ ಶಾಲೆ. ಅಲ್ಲಿ ವಿದ್ಯಾಭ್ಯಾಸಕ್ಕೆಂದು ಅನೇಕ ದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಅಲ್ಲಿನ ವಿದ್ಯಾರ್ಥಿಗಳ ವಸತಿ, ಆಹಾರ, ಅಧ್ಯಯನ ಇತ್ಯಾದಿಗಳಿಗೆ ಮತ್ತು ಶಾಲೆಯ ಉಪಾಧ್ಯಾಯ ವರ್ಗದವರಿಗೆ ಅನೇಕ ದಾನಗಳನ್ನು ನೀಡಲಾಗಿತ್ತು.

**ಕಾಳಾಮುಖಿರು**

ಶೈವ ಧರ್ಮವು ಭರತವರ್ಷದ ಅತಿ ಪುರಾತನ ಧರ್ಮ. ಮೊಹೆಂಜೊದಾರೊ-ಹರಪ್ಪ ಸಂಸ್ಕೃತಿಯು ಸಹ ಪ್ರಧಾನವಾಗಿ ಶೈವ ಸಂಸ್ಕೃತಿಯದ್ದಾಗಿದೆ. ದಕ್ಷಿಣ ಭಾರತದಲ್ಲಿ ಕ್ರಿ. ಶ. ೬ನೆಯ ಶತಮಾನದ ವೇಳೆಗೆ ಶೈವ ಧರ್ಮ ಪ್ರಾಮುಖ್ಯತೆ ಪಡೆದುಕೊಂಡಿತು. ೯ನೆಯ ಶತಮಾನದ ವೇಳೆಗೆ ಕಾಶ್ಮೀರದಲ್ಲಿ ಎರಡು ಶೈವ ಶಾಖೆಗಳಿದ್ದವು. ಕರ್ನಾಟಕದ ಅನೇಕ ಅರಸರು, ಸಾಮಂತರು, ಜನಸಾಮಾನ್ಯರು ಶೈವ ಧರ್ಮದ ಶಿವನ ಆರಾಧಕರಾಗಿದ್ದರು. ಈ ಧರ್ಮದಲ್ಲಿ ಮೂರ್ತಿಪೂಜೆ ಹೆಚ್ಚಾಗಿ ಕಂಡು ಬರುತ್ತದೆ. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಎಲ್ಲ ಪ್ರಮುಖ ಧರ್ಮಗಳು ಪ್ರಚಾರದಲ್ಲಿದ್ದವು. ಚಾಲುಕ್ಯರು ಶೈವರಾಗಿದ್ದರೂ ಸರ್ವಧರ್ಮಿಯರಿಗೆ ಉದಾರವಾದ ಆಶ್ರಯ ಹಾಗೂ ದತ್ತಿಯನ್ನು ನೀಡುವುದರ ಮೂಲಕ ಧಾರ್ಮಿಕ ಸಾಮರಸ್ಯವನ್ನು ಕಾಯ್ದುಕೊಂಡು ಹೋಗುವಲ್ಲಿ ಯಶಸ್ವಿಯಾಗಿದ್ದರು. ಕಲ್ಯಾಣ ಚಾಳುಕ್ಯರ ಅರಸರು ಧಾರ್ಮಿಕ ಸದ್ಭಾವನೆ ಉಳ್ಳವರಾಗಿದ್ದರು. ಅಂತೆಯೇ ತಮ್ಮ ಆಳ್ವಿಕೆ ಉದ್ದಕ್ಕೂ ಅನೇಕ ದಾನ, ಧರ್ಮ, ದತ್ತಿಗಳನ್ನು ಮಾಡುವುದರಲ್ಲಿ ಎತ್ತಿದ ಕೈ ಕೇವಲ ಅರಸರುಗಳು ಅಷ್ಟೇ ಅಲ್ಲ ಅವರ ಮಹಾಮಂಡಳೇಶ್ವರರು ಸಹ ಸೇರಿ ದಾನ ದತ್ತಿ ಕೊಟ್ಟಿದ್ದು ಕೆಲವು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಪುರಾತನ ಕಾಲದಲ್ಲಿ ಭಾರತದ ವಿವಿಧ ಭಾಗಗಳಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳು ಪ್ರತಿಷ್ಠಾಪಿತವಾದವು. ಆದ ಕಾರಣ ರಾಮೇಶ್ವರದಿಂದ ಕೇದಾರನಾಥವರೆಗೂ ಶೈವ ಧರ್ಮ

ಹರಡಿತ್ತೆಂದು (ಕರ್ನಾಟಕದ ಇತಿಹಾಸ ದರ್ಶನ;೧೯೭೦;ಪು.೭೩೩) ಹೇಳಬಹುದು. ಎಲ್ಲ ಶೈವ ಸಿದ್ಧಾಂತಗಳಲ್ಲೂ 'ಪತಿ', 'ಪಶು' ಎಂಬ ಅಂಶಗಳು ಸಾಮಾನ್ಯವಾಗಿ ಕಂಡು ಬರುತ್ತವೆ. ಪಾರಿಭಾಷಿಕವಾಗಿ ಇದನ್ನೇ 'ಪಾಶುಪತ ಮತ' ಎಂದು ಕರೆಯಬಹುದು. ಪಾಶುಮತ, ಕಾಳಾಮುಖ, ಲಾಕುಲ, ಮಾಹೇಶ್ವರ ಪಂಥಗಳು ಶೈವ ಧರ್ಮದ ಬೇರೆ-ಬೇರೆ ಪಂಥಗಳಾಗಿವೆ. 'ಮಹಾಭಾರತ'ದ ಶಾಂತಿಪರ್ವದಲ್ಲೂ 'ವಾಯು', 'ಕೂರ್ಮ' ಮತ್ತು 'ಲಿಂಗ ಪುರಾಣ'ಗಳಲ್ಲೂ ಪಾಶುಪತರ ಉಲ್ಲೇಖವಿದೆ. ಪಾಶುಪತ ಸಂಪ್ರದಾಯದ ಸ್ಥಾಪಕನಾದ ಲಕುಲೀಶನು ಸು. ಕ್ರಿ. ಶ. ಒಂದನೆಯ ಶತಮಾನದವನು.

ಪ್ರಾಚೀನ ಕಾಲದಿಂದಲೂ ಶಾಸನಗಳಲ್ಲಿ ಕಾಳಾಮುಖ ಪಂಥದ ಆಚಾರ್ಯರ ಹೆಸರುಗಳ ಉಲ್ಲೇಖ (ಕರ್ನಾಟಕದ ಇತಿಹಾಸ ದರ್ಶನ;೧೯೭೦;ಪು.೭೩೨) ಕಂಡು ಬರುತ್ತದೆ. ಬಾದಾಮಿ ಚಲುಕ್ಯರು, ಗಂಗರು, ಹೊಯ್ಸಳರು, ಕಾಳಾಮುಖರಿಗೆ ಆಶ್ರಯ ನೀಡಿದರು. ಕಾಳಾಮುಖರ ಅತ್ಯಂತ ಪ್ರಾಚೀನ ಶಾಸನವೆಂದರೆ ಕ್ರಿ. ಶ. ೭೦೦ರ ಕಿಗ್ಗದ ಶಾಸನವಾಗಿದೆ. ನಂತರದಲ್ಲಿ ಕಂಡು ಬಂದ ಇನ್ನೊಂದು ಶಾಸನವೆಂದರೆ ರಾಷ್ಟ್ರಕೂಟರ ಕಾಲದ ಮೂರನೆಯ ಗೋವಿಂದ ರಾಜನ ತಾಮ್ರಪಟ ಕ್ರಿ. ಶ. ೮೦೭ರ ಶಾಸನವಾಗಿದೆ.

ಕೇದಾರೇಶ್ವರ, ಮರಳೇಶ್ವರ, ಕುಸುಮೇಶ್ವರ, ಸರ್ವೇಶ್ವರ, ಲಿಂಗೇಶ್ವರ, ಪಂಚಲಿಂಗೇಶ್ವರಾದಿ ಅನೇಕ ಪ್ರಸಿದ್ಧ ದೇವಾಲಯಗಳಲ್ಲಿ ಕಾಳಾಮುಖರೇ ಮಠಾಧಿಪತಿಗಳಾಗಿದ್ದರು. ಇವರು ಹೆಚ್ಚಾಗಿ ಹಾಸನ, ಕಡೂರು, ಚಿತ್ರ ದುರ್ಗಗಳಲ್ಲಿ ನೆಲೆಸಿದ್ದವರಾಗಿದ್ದರು. ಕೋಲಾರ, ಶಿವಮೊಗ್ಗ ಜಿಲ್ಲೆಗಳಲ್ಲೂ ಅವರ ಕೇಂದ್ರಗಳಿದ್ದವು, ಕರ್ನೂಲು ಜಿಲ್ಲೆಯ ಶ್ರೀ ಪರ್ವದಲ್ಲೂ, ಅಬ್ಬಲೂರು, ಹಾನಗಲ್ಲು, ಗದಗ ಮುಂತಾದ ಕಡೆ ವ್ಯಾಪಕವಾಗಿ ಹರಡಿದ್ದು ಕಂಡು ಬರುತ್ತದೆ.

ಕಾಳಾಮುಖ ಯತಿಗಳು ತಮ್ಮ 'ಪರ್ಷೆ', 'ಅಮ್ನಾಯ' ಇಲ್ಲವೆ 'ಆವಳಿ' ಸಂತತಿಗಳು ಕಂಡು ಬರುತ್ತವೆ. 'ಪರ್ಷೆ'ಗಳಲ್ಲಿ 'ಶಕ್ತಿ ಪರ್ಷೆ', 'ಸಿಂಹ ಪರ್ಷೆ'ಗಳು ಪ್ರಸಿದ್ಧವಾಗಿದ್ದವು. 'ಶಕ್ತಿ ಪರ್ಷೆ'ಯಲ್ಲಿ ಪರ್ವತಾಮ್ನಾಯ (ಪರ್ವತಾವಳಿ) ಭುಜಂಗಾಮ್ನಾಯ (ಭುಜಂಗಾವಳಿ) ಎಂಬ ಎರಡು ಅಮ್ನಾಯ (ಆವಳಿ)ಗಳಿದ್ದವು. ಆರನೆಯ ವಿಕ್ರಮಾದಿತ್ಯನು ಬ್ರಾಹ್ಮಣರಿಗೆ ದಾನ ಮಾಡಿದನೆಂದು ಕ್ರಿ. ಶ. ೧೧೧೩ರ ಷಿಕಾರಿಪುರದ ೯೯ನೆಯ ಶಾಸನದಿಂದ ತಿಳಿದು ಬರುತ್ತದೆ. ಕಾಳಾಮುಖರು 'ಪರ್ವತಾವಳಿ'ಯ 'ಮೂವರ ಕೋಣೆಯ ಸಂತತಿ'ಯವರು ಎಂದು ವರ್ಣಿತವಾಗಿದೆ.

ಕಾಳಾಮುಖರು ಶೈವರ ಎಲ್ಲ ಸ್ಥಾನಗಳೂ ಅನ್ನದಾನ ಮತ್ತು ವಿದ್ಯಾದಾನಕ್ಕೆ ಪ್ರಾಧಾನ್ಯತೆ ನೀಡಿದ್ದವು. ದಾನಗಳಲ್ಲಿ ಮುಖ್ಯವಾದ ಎರಡು ದಾನಗಳು ನಡೆಯುತ್ತಿದ್ದ, ದೇವಾಲಯಗಳ ಜೊತೆಗೆ ಮಠಗಳೂ ಬೆಳೆದಿರುವ (ಸಂಶೋಧನ;೧೯೯೧;ಪು.೬೧೬) ಸಾಧ್ಯತೆಗಳಿವೆ. ಮಠ ಎಂದರೆ ಧರ್ಮ ಬೋಧನೆ ಮಾಡುತ್ತ ಅನ್ನದಾನ ಮತ್ತು ವಿದ್ಯಾದಾನ ಮಾಡುವ ಒಂದು ಸಂಸ್ಥೆ ಎಂದು ಅರ್ಥೈಸಿದರೆ ತಪ್ಪಾಗಲಾರದು. ಶಾಲೆಯನ್ನು ಮಠ ಎನ್ನುವ ಪರಿಪಾಠವೂ ತೀರಾ ಹಳೆಯದಲ್ಲ. ಎಲ್ಲ ಕಾರಣಗಳಿಂದ ಶಿವ ದೇವಾಲಯಗಳು ವಿದ್ಯಾ ಸಂಸ್ಥೆಗಳು ಆಗಿ ಬೆಳೆದು, ತ್ರೈಪುರುಷ ದೇವಾಲಯಗಳು

ಘಟಿಕಾಸ್ಥಾಪನೆಗಳಾಗಿ ಸಾರ್ಥಕ ಸೇವೆ ಸಲ್ಲಿಸಿವೆ. ಇವು ಜನತೆಯ ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾಗಿವೆ. ಜನತೆಯ ಉತ್ತಮ ನಡೆತೆಗೆ ಮಾರ್ಗದರ್ಶನ ನೀಡಿ, ಅವರ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ ಬದುಕನ್ನು ಸಾರ್ಥಕಗೊಳಿಸುವ ಕಾರ್ಯವನ್ನು ದೇವಾಲಯಗಳು ಮಾಡುತ್ತಿದ್ದವು ಎಂದು ಬಾ.ರಾ.ಗೋಪಾಲ (ದಿ. ಚಾಲುಕ್ಯಾಸ್ ಆಫ್ ಕಲ್ಯಾಣ ಆಂಡ್ ಕಲಚೂರಿಸ್ ಎಜುಕೇಷನ್ ಆಂಡ್ ಕಲ್ಚರ್, ಪು.೪೨೦-೪೨೧) ಅವರು ಅಭಿಪ್ರಾಯಪಟ್ಟಿದ್ದಾರೆ.

ಕರ್ನಾಟಕದ ಪ್ರಾಚೀನ ವಿದ್ಯಾಕೇಂದ್ರಗಳಲ್ಲಿ ಅಧಿಕ ಪಾಲು ಕಾಳಾಮುಖ ಗುರುಗಳ ವಶದಲ್ಲಿದ್ದುದು ಗಮನಾರ್ಹವಾದುದು. ಕಾಳಾಮುಖ ಗುರುಗಳನ್ನು ಶಾಸನಗಳು ಸಾಮಾನ್ಯವಾಗಿ ತಪೋಧನರು ಎಂದೇ ಉಲ್ಲೇಖಿಸಿವೆ. ಕಾಳಾಮುಖ ಯತಿಗಳಲ್ಲಿ 'ಸಸ್ತ್ರೀಕರು', 'ನಿಸ್ತ್ರೀಕರು', (ನೈಷ್ಠಿಕ ಬ್ರಹ್ಮಚಾರಿಗಳು) ಎಂದು ಎರಡು ಬಗೆಯ ಯತಿಗಳಿದ್ದರು. 'ಸಸ್ತ್ರೀಕರು' ಎಂದರೆ ವಿವಾಹವಾದವರು. 'ನಿಸ್ತ್ರೀಕರು' ಎಂದರೆ ನೈಷ್ಠಿಕ ಬ್ರಹ್ಮಚಾರಿಗಳ ವರ್ಗಕ್ಕೆ ಸೇರಿದವರಾಗಿದ್ದರು. ಬ್ರಹ್ಮಚಾರಿ ಯತಿಗಳಿಗೆ ಸಸ್ತ್ರೀಕ ಯತಿಗಳಿಗಿಂತ ಹೆಚ್ಚಿನ ಗೌರವವಿತ್ತು. ಕಾಳಾಮುಖ ಶೈವ ಧರ್ಮವು ಕಾಶ್ಮೀರ ಶೈವ ಸಿದ್ಧಾಂತಕ್ಕೆ (ಕರ್ನಾಟಕದ ಇತಿಹಾಸ ದರ್ಶನ;೧೯೭೦;ಪು.೭೩೪) ನಿಕಟವರ್ತಿಯಾಗಿದ್ದಿತು. ಇವರು ಅನೇಕ ಶೈವ ದೇವಾಲಯಗಳನ್ನು ಕಟ್ಟಿದ್ದರು. ೯ನೆಯ ಮತ್ತು ೧೩ನೆಯ ಶತಮಾನಗಳಲ್ಲಿ ದೇವಾಲಯಗಳು ಪ್ರಸಿದ್ಧ ವಿದ್ಯಾಕೇಂದ್ರಗಳಾಗಿದ್ದವು.

ದೇವಾಲಯ, ಮಠ, ವಿದ್ಯಾಕೇಂದ್ರಗಳ ಜವಾಬ್ದಾರಿಯನ್ನು ವಹಿಸಿಕೊಂಡವರಲ್ಲಿ ಕಾಳಾಮುಖರೇ ಪ್ರಮುಖರಾಗಿದ್ದರು. ಇವರು ಬ್ರಹ್ಮಚರ್ಯ, ನಿಷ್ಠೆಗಳಿಗೆ ಸಂಬಂಧಿಸಿದಂತೆ ಅನೇಕ ಕಟ್ಟು ಪಾಡುಗಳು ಇರುತ್ತಿದ್ದವು. ಇವುಗಳ ಮಧ್ಯದಲ್ಲಿ ತಮ್ಮ ಜವಾಬ್ದಾರಿಯನ್ನು ಪರಸ್ಪರ ಹಂಚಿಕೊಂಡಿದನ್ನು (ಸಂಶೋಧನಾ;೧೯೯೧;ಪು.೬೧೭) ಬಳ್ಳಿಗಾವೆಯ ಶಾಸನದಿಂದ ತಿಳಿದು ಬರುತ್ತದೆ. ಶೈವರು ಅನೇಕ ದೇವಾಲಯಗಳನ್ನು ಕಟ್ಟಿಸಿದ್ದನ್ನು ಶಾಸನದಿಂದ ತಿಳಿದುಬರುತ್ತದೆ. ಲೋಕೇಶ್ವರ, ಸೋಮೇಶ್ವರ, ಕಾಳೇಶ್ವರ, ಭೋಗೇಶ್ವರ ಇಂತಹ ದೇವಾಲಯಗಳು ದಿಗ್ಗಾಂವಿ, ಕಾಳಗಿ, ತೆಂಗಳಿ, ನಾಗಾಯಿ, ಹಂದರ್ಕಿ ಮುಂತಾದ ಕಡೆ ಕಂಡು ಬರುತ್ತವೆ. ಇಲ್ಲಿ ಆಳ್ವಿಕೆ ಮಾಡಿದ ಅರಸರು, ಮಹಾಮಂಡಳೇಶ್ವರರು ಹಾಗೂ ಅವರ ಪತ್ನಿಯರು ಈ ದೇವಾಲಯಗಳನ್ನು ಕಟ್ಟಿಸಿದರು.

ಕರ್ನಾಟಕದ ಶಿಲ್ಪಕ್ಕೆ ತಮ್ಮ ಕಾಣಿಕೆ ಎಂಬಂತೆ ದೇವಾಲಯಗಳನ್ನು ಕಟ್ಟಿಸಲು ಹೆಚ್ಚಾಗಿ ಲಕುಲೀಶ ಪಾಶುಪತರು ಕೂಡ (ಕಲಬುರ್ಗಿ ಜಿಲ್ಲೆಯ ಶಾಸನಗಳು;೧೯೯೬;ಪು.೨೨) ಸಹಕರಿಸಿದರು. ಸಿರಿವಾಳ ಶಾಸನದಲ್ಲಿ ಶೈವಗುರು ರೇವಣಸಿದ್ಧನ ವರ್ಣನೆ ಕಂಡು ಬರುತ್ತದೆ. ಸತ್ಯ, ನ್ಯಾಯ, ನೀತಿಯಿಂದ ಧನ ಸಂಪಾದನೆ ಮಾಡಬೇಕು. ಆ ಧನವನ್ನು ದಾನ ಮಾಡಬೇಕು ಅಥವಾ ದೇವಾಲಯಗಳನ್ನು ಕಟ್ಟಿಸಬೇಕು ಎಂಬ ನೀತಿ ಆಗಿನ ಕಾಲದ ಜನರ ಉದ್ದೇಶವಾಗಿತ್ತು. ಈ ದೇವಾಲಯಗಳಿಗೆ ಅನೇಕ ಗ್ರಾಮಗಳನ್ನು ಜನರು, ಇತರ ವರ್ಗದವರು ಸೇರಿ ದಾನ, ದತ್ತಿ ಕೊಡುತ್ತಿದ್ದರು. ಅಂದಿನ ದೇವಾಲಯಗಳು ಇಂದಿಗೂ ಜನರು ಪೂಜೆ ಮಾಡುತ್ತಾರೆ. ಇದರಿಂದ ಶೈವ ಧರ್ಮದ ದೇವಾಲಯಗಳು ಈ ಭಾಗದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ.

**ಜೈನಧರ್ಮ**

ಬೌದ್ಧ ಧರ್ಮದಂತೆ ಜೈನಧರ್ಮವೂ ಭಾರತದಲ್ಲೇ ಉದಯಿಸಿದ ಪುರಾತನ ಧರ್ಮ. ಅವರಂತೆ ಇದೂ ಸಹ ಸನಾತನ ಹಿಂದೂ ಧರ್ಮಕ್ಕಿಂತ ಭಿನ್ನವಾಗಿದೆ. ಬೌದ್ಧ ಧರ್ಮ ತನ್ನ ಜನ್ಮ ಭೂಮಿಯಿಂದ ಬಹು ದೂರದ ದೇಶಗಳವರೆಗೂ ವ್ಯಾಪಿಸಿತು. ಆದರೆ ಜೈನ ಧರ್ಮ ಕೇವಲ ಭಾರತದಲ್ಲಿ ಮಾತ್ರ ಸೀಮಿತವಾಗಿದೆ, ಕರ್ನಾಟಕದಲ್ಲಿ ಜೈನ ಧರ್ಮ ಯಾವಾಗ ಬಂದಿತೆಂದು ಹೇಳುವುದು ಕಷ್ಟ. ಆದರೆ ಮೌರ್ಯ ವಂಶದ ಸ್ಥಾಪಕ ಚಂದ್ರಗುಪ್ತನು (ಕ್ರಿ.ಪೂ.೩೨೩-೨೯೮) ಭದ್ರ ಬಾಹುವಿನೊಡನೆ ಕರ್ನಾಟಕಕ್ಕೆ ಬಂದನೆಂದು, ನಂತರ ಇಲ್ಲಿಯೇ ಸಮಾದಿಯಾದನೆಂದು ಕೆಲ ವಿದ್ವಾಂಸರು (ಕರ್ನಾಟಕದ ಇತಿಹಾಸ ದರ್ಶನ:೧೯೭೦;ಪು.೭೩೨) ಅಭಿಪ್ರಾಯ ಪಟ್ಟಿದ್ದಾರೆ. ಜೈನ ಧರ್ಮದ ಸ್ಥಾಪಕ ಮಹಾವೀರ. ಈತ ೨೪ನೆಯ ತೀರ್ಥಂಕರನಾಗಿದ್ದನು. ಜೈನ ಧರ್ಮಕ್ಕಾಗಿ ಶ್ರಮಿಸಿದನು. ಜೈನ ಧರ್ಮದ ತತ್ವಗಳಾದ, ಅಹಿಂಸೆ, ಸತ್ಯ, ಕಳ್ಳತನ ಮಾಡಬಾರದು, ಇತರರ ಸಂಪತ್ತನ್ನು ದೋಚಬಾರದು, ಬ್ರಹ್ಮಚಾರ್ಯ ಪಾಲನೆಗಳಾಗಿದ್ದವು. ನಂತರದಲ್ಲಿ ಇವೇ ತತ್ವಗಳು ಜನತೆಗೆ ಕಷ್ಟವಾಗಿ ಮಾರ್ಪಟ್ಟಿತು. ಅಹಿಂಸಾ ತತ್ವ ಕ್ರಮೇಣವಾಗಿ ಉಸಿರಾಡುವ ವೇಳೆಗೆ ಕ್ರಿಮಿ, ಕೀಟಗಳು ಶ್ವಾಸಕೋಶದಲ್ಲಿ ಹೋಗುತ್ತಿರುವುದರಿಂದ ಅವುಗಳನ್ನು ಹಿಂಸೆ ಮಾಡಿದಂತಾಗುತ್ತದೆ ಎಂದು ಮುಖಕ್ಕೆ ಬಿಳಿ ವಸ್ತ್ರವನ್ನು ಕಟ್ಟಲು ಪ್ರಾರಂಭಿಸಿದರು. ಇದರಿಂದ ಜನರ ಉಸಿರಾಟಕ್ಕೆ ತೊಂದರೆಯಾಯಿತು. ಹಾಗಾಗಿ ತತ್ವಗಳು ಕಠಿಣವಾದವು. ನಂತರದಲ್ಲಿ ಮಹಾವೀರನ ಮೂರ್ತಿ ಪೂಜೆ ಪ್ರಾರಂಭ ಮಾಡಿದರು. ಇದರಿಂದ ಜನರು ಸನಾತನ ಧರ್ಮಕ್ಕೂ ಹಾಗೂ ಜೈನ ಧಮಕ್ಕೂ ಯಾವುದೇ ವ್ಯತ್ಯಾಸವಿಲ್ಲವೆಂದು ತಿಳಿದು, ಧರ್ಮದಿಂದ ದೂರ ಉಳಿದರು. ಜೈನ ಧರ್ಮ ಎರಡು ಪಂಥಗಳಾಗಿ ವಿಭಜನೆ ಹೊಂದಿತು. ಶ್ವೇತಾಂಬರ ಮತ್ತು ದಿಗಂಬರ ಪಂಥಗಳು. ಕರ್ನಾಟಕದಲ್ಲಿ ದಿಗಂಬರ ಪಂಥವೇ ಹೆಚ್ಚಾಗಿ ಕಂಡು ಬರುತ್ತದೆ. ಶ್ವೇತಾಂಬರ ಪಂಥ ಉತ್ತರ ಭಾರತದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕೊಪ್ಪಳ ಶ್ರವಣಬೆಳಗೊಳ ಇವೆರಡೂ ಸ್ಥಳಗಳು ದಿಗಂಬರ ಪಂಥದ ಕೇಂದ್ರಳಾಗಿವೆ.

ಕರ್ನಾಟಕದಲ್ಲಿ ಪ್ರಾಮುಖ್ಯತೆ ಪಡೆದ ಧರ್ಮಗಳಲ್ಲಿ ಜೈನ ಧರ್ಮವೂ ಒಂದು. ಕರ್ನಾಟಕ ಸಂಸ್ಕೃತಿಗೆ ಜೈನರ ಕೊಡುಗೆ ಮಹತ್ವದ್ದಾಗಿದೆ. ಜೈನ ಧರ್ಮ ಇಡೀ ಕರ್ನಾಟಕದಾದ್ಯಂತ ಪ್ರಾಮುಖ್ಯತೆ ಪಡೆದುಕೊಂಡಿತು. ರಾಷ್ಟ್ರಕೂಟರ ಕಾಲದಲ್ಲಿ ಶೇಕಡಾ ೩೦ರಷ್ಟು ಜೈನ ಧರ್ಮವರಿದ್ದರೆಂದು ಡಾ. ಅಳ್ತೇಕರ ಅವರು (ಕರ್ನಾಟಕ ಕೈಗನ್ನಡಿ;೨೦೦೭;ಪು.೨೭) ಅಭಿಪ್ರಾಯ ಪಟ್ಟಿದ್ದಾರೆ. ಇದರಿಂದ ಜೈನ ಧರ್ಮ ಕ್ರಮೇಣವಾಗಿ ವಿಸ್ತರಿಸಿದ್ದು ಕಂಡು ಬಂದಿದೆ. ಕಲ್ಯಾಣ ಚಾಳುಕ್ಯರು ಮೂಲತಃ ವೈದಿಕ ಧರ್ಮದವರಾಗಿದ್ದರು. ಜೈನ ಧರ್ಮಕ್ಕೆ ಮಾನ್ಯತೆ ನೀಡಿದರು. ಕಲ್ಯಾಣ ಚಾಳುಕ್ಯ ಅರಸನಾದ ಇಮ್ಮಡಿ ತೈಲಪ ಮತ್ತು ಸತ್ಯಾಶ್ರಯ ಇವರು ಜೈನ ಕವಿ ರನ್ನನಿಗೆ ಆಶ್ರಯ ನೀಡಿದ್ದರು. ಸತ್ಯಾಶ್ರಯನು ಜೈನ ಧರ್ಮದ ಗುರು ವಿಮಲಚಂದ್ರ ಪಂಡಿತ ದೇವನಿಂದ ಮಾರ್ಗದರ್ಶನ ಪಡೆದಿದ್ದನು. ಇಮ್ಮಡಿ ಸೋಮೇಶ್ವರನ ಮಂತ್ರಿ ಸೋಮನಾಥನು ಜೈನ ಧರ್ಮದ ಅನುಯಾಯಿಯಾಗಿದ್ದನು. ಚಾಳುಕ್ಯ ವಂಶದ ಪ್ರಸಿದ್ಧ ಅರಸನಾದ ಆರನೆಯ ವಿಕ್ರಮಾದಿತ್ಯನ ಬಗ್ಗೆ ಶಾಸನಗಳು ಶೈವ ಧರ್ಮದವನೆಂದು ಹೇಳಿವೆ. ಆದರೆ ಈತ ಶೈವ ಧರ್ಮಾವಲಂಭಿಯಾಗುವುದಕ್ಕಿಂತ ಮುಂಚೆ ಜೈನ ಧರ್ಮದವನಾಗಿದ್ದನು. ಹಾಗಾಗಿ ಈತನ ರಾಣಿ ಜಾಕಲದೇವಿಯು ಸಹ ಜೈನ ಧರ್ಮದವಳಾಗಿದ್ದಳು ಎಂಬುದು ಕ್ರಿ ಶ. ೧೦೯೪ರ

ಇಂಗಳಗಿಯ ಶಾಸನ ತಿಳಿಸುತ್ತದೆ. ಇವಳಿಗೆ ಜೈನ ಧರ್ಮದ ಬಗ್ಗೆ ಅಪಾರವಾದ ನಂಬಿಕೆ ಇತ್ತು. ಎಂತಹ ಕಠಿಣ ಸಂದರ್ಭದಲ್ಲಿಯೂ ವ್ರತ, ನಿಯಮ ಬಿಡದೆ ಪಾಲಿಸುತ್ತಿದ್ದಳು. ಒಮ್ಮೆ ಕಲ್ಯಾಣ ನಗರದಲ್ಲಿದ್ದಾಗ ಒಬ್ಬ ವ್ಯಾಪಾರಿ ಮಹಾಮಾಣಿಕ್ಯನು ಜಿನ ವಿಗ್ರಹವನ್ನು ತಂದು ತೋರಿಸುತ್ತಾನೆ. ಆಗ ವಿಕ್ರಮಾದಿತ್ಯನು ತನ್ನ ಮನದಲ್ಲಿ ಜಾಕಲದೇವಿಯ ಮುಖವನ್ನು ನೋಡಿ, ಎಂತಹ ಸೊಗಸಾದ ಮೂರ್ತಿ, ಹೇಗೂ ಇದು ನಿನ್ನ ಕುಲದೈವ. ನೀನು ಆಳ್ವಿಕೆ ಮಾಡುತ್ತಿದ್ದ ಗ್ರಾಮದಲ್ಲಿ ಈ ಜಿನ ಮೂರ್ತಿಯನ್ನು ಪ್ರತಿಷ್ಠಾಪಿಸು ಎಂದು ಹೇಳುತ್ತಾನೆ. ಆಗ ಇವಳು ಇಂಗಳಗಿಯಲ್ಲಿ ಜಿನ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾಳೆ.

ಆರನೆಯ ವಿಕ್ರಮಾದಿತ್ಯನು ಮೂಲತಃ ಶೈವ ಧರ್ಮದವನಾಗಿದ್ದು, ರಾಣಿಯನ್ನು ತನ್ನ ಪರವಾಲಿಸುವಲ್ಲಿ ಪ್ರಯತ್ನಪಟ್ಟರೂ, ಅವಳ ಜೈನ ಧರ್ಮದ ಶ್ರದ್ಧೆ ಕಡಿಮೆ ಆಗಲಿಲ್ಲ. ವಿಕ್ರಮಾದಿತ್ಯ ವ್ರತ ಕೆಡಿಸುವೆನೆಂದು ಹೇಳಿದ್ದನು, ಆದರೆ ಅದು ದುರುದ್ಧೇಶವಾಗಿರಲಿಲ್ಲ. ವಿಕ್ರಮಾದಿತ್ಯ ಮತ್ತು ಜಾಕಲದೇವಿಯರ ನಡುವೆ ಇದ್ದ ಧಾರ್ಮಿಕತೆ ಎತ್ತಿ ತೋರಿಸುತ್ತದೆ. ಇಲ್ಲಿ ಅರಸನ ಧಾರ್ಮಿಕ ಸಮಾನತೆ ತಿಳಿಸುತ್ತದೆ. ಇದರ ಮೂಲಕ ಕರ್ನಾಟಕದಲ್ಲಿ ಹಾಗೂ ಅಧಿಕಾರಿಗಳ ಮೇಲೆ ಜೈನ ಧರ್ಮ ಹೊಂದಿರುವ ಪ್ರಭಾವ ಗಾಢವಾದುದು. ವಿಕ್ರಮಾದಿತ್ಯನ ಇತರ ಧರ್ಮಗಳ ಬಗ್ಗೆ ಹೊಂದಿದ ಸಮಾನತೆ ಎತ್ತಿ ತೋರಿಸುತ್ತದೆ. ತನ್ನ ಪ್ರೀತಿಯ ರಾಣಿ ಭಿನ್ನವಾದ ಧರ್ಮಕ್ಕೆ ಅಪ್ಪಿಕೊಂಡರೂ ಅದಕ್ಕೆ ಸಮ್ಮತಿಸಿದನು. ಆದರೆ ಜಾಕಲದೇವಿಯು ಚಕ್ರವರ್ತಿಯ ಬಗ್ಗೆ ಗೌರವ, ಪ್ರೀತಿ ಇದ್ದರೂ ಧಾರ್ಮಿಕ ಶ್ರದ್ಧೆಯನ್ನು ಪಾಲಿಸುವ ಬಗ್ಗೆ ಇವಳಿಗಿದ್ದ ಶ್ರದ್ಧೆ, ನಿಷ್ಠೆ ಇಲ್ಲಿ ತಿಳಿದು ಬರುತ್ತದೆ. ಇಂದ್ರಸೇನ ಭಟ್ಟಾರಕರ ಅರಲೂರಿನ ಪಾಂಡೇಶ್ವರ ಗುಡಿಯ ಗಂಡರಾದಿತ್ಯ ಪಿರಿಯ ಕೋಲಲ್ಲಿ ಸರ್ವಮಾನ್ಯವಾಗಿ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ೨೧ ಮತ್ತರು ಭೂಮಿಯನ್ನು ದಾನ ಕೊಟ್ಟ ವಿಷಯ ಕ್ರಿ. ಶ. ೧೦೯೪ರ ಶಾಸನ (ಶಾಸನ ಸಾಹಿತ್ಯ ಸಂಚಯ;೧೯೬೧;ಪು.೯೩) ತಿಳಿಸುತ್ತದೆ. ಹೀಗಾಗಿ ಇವಳು ಜೈನ ಧರ್ಮದ ಏಳಿಗೆಗೆ ಕಾರಣೀಭೂತಳಾಗಿದ್ದಳು. ಜಾಕಲದೇವಿ ಟಿಕ್ಕಾ (ತಿಕ್ಕ) ಎಂಬುವನ ಮಗಳಾಗಿದ್ದಳು ಎಂಬುವುದನ್ನು ಬಿಟ್ಟರೆ, ಇವಳ ಕುಟುಂಬ ಬಗ್ಗೆ ಯಾವುದೇ ಮಾಹಿತಿ ಲಭ್ಯವಿಲ್ಲ.

ಇಂಗಳಗಿಯಲ್ಲಿದ್ದ ೨ನೆಯ ಜೈನ ದೇವಾಲಯ (ಬಸದಿ)ದ ಕೇವಲ ಅವಶೇಷಗಳು ಮಾತ್ರ ಉಳಿದಿವೆ. ಈ ಬಸದಿಗೆ ಜಕ್ಕವ್ವನ ಬಸದಿ ಅಥವಾ ವೈಜಕ್ಕವ್ವನ ಗುಡಿ ಎಂದು ಕರೆಯಲಾಗಿದೆ. ಗ್ರಾಮದ ಹೊರಗಿರುವ ಈ ದೇವಾಲಯ ಅದರ ಶಿಲ್ಪ ಕಲೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವಳ ಜೈನ ಧರ್ಮದ ಶ್ರದ್ಧೆಗೆ ಸಾಕ್ಷಿಯಾಗಿದೆ. ಇಂಗಳಗಿಯ ಶಿಲಾಶಾಸನ ಪ್ರಾರಂಭದ ಪೀಠಿಕೆಯಲ್ಲಿಯೇ ಸ್ವಲ್ಪ ಮಟ್ಟಿಗೆ ತಿಳಿದಂತೆ, ಮಾಹೋಮಾಣಿಕ್ಯ ಎಂಬ ದೈವಭಕ್ತನ ಉಲ್ಲೇಖವಿದೆ. ಹೆಚ್ಚಿನ ಸಾಕ್ಷಿಗಳು ದೊರೆತಿಲ್ಲ, ವಿವರಣೆಯು ಇನ್ನೂ ಸಂಕ್ಷಿಪಗೊಳಿಸಬಹುದಾಗಿದೆ. ಜಿನ ಮೂರ್ತಿಯನ್ನು ಕಾಣಿಕೆಯಾಗಿ ಕೊಟ್ಟ ಬೊಮ್ಮದೇವನ ಬಗ್ಗೆ ಹೆಚ್ಚಿನ ವಿಷಯ ತಿಳಿದುಬಂದಿಲ್ಲ. ಆದರೆ ಅಲ್ಲಿನ ಹಲವಾರು ಸನ್ನಿವೇಶದಿಂದ ಇವನು ಸ್ಥಳೀಯ ಪ್ರಮುಖನಾಗಿದ್ದನು ಎಂದು ನಂಬಲಾಗಿದೆ. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಅನೇಕ ಜಿನ ಬಸದಿಗಳು ಕಂಡು ಬರುತ್ತವೆ. ಇಂಗಳಗಿಯಲ್ಲಿ ಪಾರ್ಶ್ವನಾಥನ ಮೂರ್ತಿ ಇದೆ. ಕಲ್ಯಾಣ ಚಾಳುಕ್ಯ ಮಹಾಮಂಡಳೇಶ್ವರರಾದ ಕಲಚೂರಿಗಳು ಸಹ ಜೈನ ಧರ್ಮವನ್ನೇ ಪಾಲಿಸಿದರು. ಅಂತೆಯೇ ಕಳಚೂರಿ ರಾಯಮುರಾರಿ ಸೋವಿದೇವನು ರಾಷ್ಟ್ರಕೂಟರ ಕಾಲದಲ್ಲಿ ವೇಮುಲವಾಡದ ಚಾಳುಕ್ಯರ ಆಸ್ಥಾನದಲ್ಲಿ

ಇದ್ದವು. ಜೈನರ ಶಿಲ್ಪಕಲೆಯು ಕರ್ನಾಟಕದಾದ್ಯಂತ ಕಂಡು ಬರುತ್ತವೆ. ಕನ್ನಡ ಸಾಹಿತ್ಯದಲ್ಲಿ ಕೃತಿ ರಚನೆ ಮಾಡಿದವರಲ್ಲಿ ಜೈನರು ಪ್ರಥಮರಾಗಿದ್ದಾರೆ. ಪಂಪ, ಜನ್ನ, ರತ್ನಾಕರವರ್ಣಿ, ಸಾಳ್ವರು, ಇವರು ಜೈನ ಕವಿಗಳಾಗಿದ್ದರು.

ಕರ್ನಾಟಕದಲ್ಲಿ ಅನೇಕ ಜೈನ ಕೇಂದ್ರಗಳು ಕಂಡು ಬರುತ್ತವೆ. ಕೊಪ್ಪಳ ಒಂದು ಪ್ರಾಚೀನ ಜೈನ ಕೇಂದ್ರ, ಜೈನರು ವ್ಯಾಪಾರಿಗಳಾಗಿದ್ದು, ಅನೇಕ ಮಠ ಮತ್ತು ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿದ್ದರು. ದಿಗಂಬರ ಪಂಥ ಜೈನ ಧರ್ಮದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿದೆ. ಮೊದಲು ಯಾಪನೀಯ ಪಂಥ ಆಚರಣೆಯಲ್ಲಿತ್ತು. ಇವರು ಸಹ ಅನೇಕ ದಾನ ಧರ್ಮ ಮಾಡಿದ ಕಾರ್ಯಗಳು ಕಂಡು ಬರುತ್ತವೆ. ಹೀಗಾಗಿ ಜೈನ ಧರ್ಮ ಇಡೀ ಕರ್ನಾಟಕದಾದ್ಯಂತ ತನ್ನ ಪ್ರಾಮುಖ್ಯತೆ ಪಡೆದುಕೊಂಡಿದೆ.

ಕರ್ನಾಟಕದ ಜಿಲ್ಲೆಗಳಲ್ಲಿ ಕಲಬುರ್ಗಿಯು ಮಹತ್ವದ ಸ್ಥಳವಾಗಿದೆ. ಇದರ ಇತಿಹಾಸದ ಹರವು ಹಿಗ್ಗಿದಷ್ಟು ಹಿಗ್ಗುತ್ತಾ ಹೋಗುತ್ತದೆ. ಉತ್ತರದ ಭಾಗದಲ್ಲಿ ಯಾವುದೇ ದಾಳಿ ನಡೆಯಬೇಕಾದರೆ ಮೊದಲು ತುತ್ತಾಗುವ ದುರ್ದೈವಿ ಪ್ರದೇಶವೆಂದರೆ ಕಲಬುರ್ಗಿ. ಹಾಗಾಗಿ ಇಲ್ಲಿನ ದಾಖಲೆಗಳು ಹೆಚ್ಚಾಗಿ ಹಾಳಾಗಿವೆ. ಹೀಗಿರುವಾಗ ಅಳಿದುಳಿದ ದಾಖಲೆಗಳನ್ನು, ಪರೀಕ್ಷಿಸಿ ಪ್ರಕಟಿಸುವ ಕಾರ್ಯ ಇನ್ನು ನಡೆಯಬೇಕಾಗಿದೆ.

* * * * *

ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಿರವಂತೆ ಬಹುಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಶಾಸನಗಳಿಂದ ರಾಜರ ಇತಿಹಾಸ, ಯುದ್ಧ, ಹೊಗಳಿಕೆಯನ್ನು ಮಾತ್ರ ತಿಳಿಯಬಹುದೇ ಹೊರತು, ಆ ಕಾಲದ ಆಡಳಿತ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ಪರಿವರ್ತನೆಗಳು ಮತ್ತು ಒಕ್ಕೂಟಗಳು ಈ ವಿಷಯಗಳು ಶಾಸನಗಳಿಂಡ ಯಾವ ಉಪಯೋಗವೂ ಇಲ್ಲವೆಂಬ ಭಾವನೆ ಕೆಲ ವಿದ್ವಾಂಸರಲ್ಲಿ ಇದೆ. ಆದರೆ ಶಾಸನಗಳು ಒಂದೇ ವಿಷಯಕ್ಕೆ ಸೀಮಿತವಾಗಿಲ್ಲ. ಅಂದರೆ ಜನರ ಬದುಕಿನ ರೀತಿಯ ಹಲವು ವಿವಿಧತೆಯನ್ನು ಪ್ರತಿಬಿಂಬಿಸುವ ಸಂಕೇತವೇ ಶಾಸನಗಳು. ಹಾಗಾಗಿ ಪ್ರಸ್ತುತ ಪ್ರಬಂಧವು ಶಾಸನಗಳನ್ನೇ ಒಳಗೊಂಡಿದೆ. ಈ ವರೆಗೆ ಮಾಡಿದ ಆರು ಅಧ್ಯಯನಗಳು 'ಚಿತ್ತಾಪುರ ತಾಲೂಕಿನ ಶಾಸನಗಳು-ಸಾಂಸ್ಕೃತಿಕ ಅಧ್ಯಯನ'ವನ್ನು ಮಾಡುವ ಪ್ರಯತ್ನ ಇದಾಗಿದೆ.

ಈವರೆಗೆ ಚಿತ್ತಾಪುರ ತಾಲೂಕಿನ ಅಧ್ಯಯನಕ್ಕೆ ಶಾಸನಗಳು ಹಾಗೂ ದೇವಾಲಯಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ನಡೆದಿಲ್ಲ. ಈ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯ ಪ್ರಮುಖವಾಗಿದೆ.

ಅಧ್ಯಯ ಒಂದರಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿಯ ಬಗ್ಗೆ ತಿಳಿಸಲಾಗಿದೆ. ಅಧ್ಯಯನ ಮಾಡಲು ಬೇಕಾದ ಆಕರಗಳು, ಸಾಹಿತ್ಯಕವಾಗಿ ಹಾಗೂ ಪುರಾತತ್ವ ಆಕರಗಳ ಬಗ್ಗೆ ತಿಳಿಸಲಾಗಿದೆ. ಭೌಗೋಳಿಕ ಅಧ್ಯಯನಕ್ಕೆ ಒತ್ತುಕೊಡುವ ದೃಷ್ಟಿಯಲ್ಲಿ ಈ ಅಧ್ಯಯನ ಅವಶ್ಯಕತೆಯನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಅಧ್ಯಾಯ ಎರಡರಲ್ಲಿ ಚಿತ್ತಾಪುರ ತಾಲೂಕಿನಲ್ಲಿರುವ ಗ್ರಾಮಗಳ ಕಿರು ಪರಿಚಯ ಮಾಡಿಕೊಡಲಾಗಿದೆ. ಶಾಸನಗಳಲ್ಲಿರುವ ಗ್ರಾಮದ ಹೆಸರನ್ನು ತಿಳಿಸಲಾಗಿದೆ. ಈ ಭಾಗ ಕಲ್ಯಾಣ ಚಾಳುಕ್ಯರ ಆಡಳಿತಕ್ಕೆ ಒಳಪಟ್ಟಿದ್ದರ ಬಗ್ಗೆ ಸಂಕ್ಷಿಪ್ತವಾದ ಪಕ್ಷಿನೋಟದಿಂದ ತಿಳಿಸಲಾಗಿದೆ. ಅಧ್ಯಾಯ ಮೂರರಲ್ಲಿ ಮೌರ್ಯರ ಕಾಲದ ಅನೇಕ ಶಾಸನಗಳು ದೊರೆತಿವೆ ಎಂಬ ಇತ್ತೀಚಿನ ಸಂಶೋಧನೆಯಿಂದ ತಿಳಿದು ಬಂದಿದೆ. ಇದರಿಂದ ಅಧ್ಯಯನ ಮಾಡುವುದರಿಂದ ಹೆಚ್ಚಿನ ಮಾಹಿತಿ ದೊರೆತಿದೆ. ಹನುಮಾಕ್ಷಿ ಗೋಗಿ ಅವರ ಇತ್ತೀಚಿನ ಸಂಶೋಧನೆಯಿಂದ ಜೇವರ್ಗಿ, ಅಣಬಿಯಲ್ಲಿ ಮೌರ್ಯ ಮತ್ತು ಶಾತವಾಹನ ಕಾಲಕ್ಕೆ ಸಂಬಂಧಿಸಿದ ಶಾಸನಗಳು, ಅಧ್ಯಯನದಿಂದ ತಿಳಿಸಲಾಗಿದೆ. ರಾಜಕೀಯವಾಗಿ ಆಳಿದ ರಾಜರು, ಅವರ ವಂಶಾವಳಿ ಹಾಗೂ ಮಹಾಮಂಡಳೇಶ್ವರರು ಮತ್ತು ಸಾಮಂತರ ಬಗ್ಗೆ ತಿಳಿಸಲಾಗಿದೆ. ಈ ಭಾಗದಲ್ಲಿ ಕಲ್ಯಾಣ ಚಾಳುಕ್ಯರ ಶಾಸನಗಳು ಹೇರಳವಾಗಿ ದೊರೆತಿದ್ದು, ಮಹಾಮಂಡಳೇಶ್ವರ ಬಾಣವಂಶದ ವೀರಗೊಂಕರಸರ ಆಡಳಿತಕ್ಕೆ ಒಳಪಟ್ಟ ಗ್ರಾಮ ಕಾಳಗಿ. ಇದು 'ಖಾಂಡವ ಮಂಡಲ'ವೆಂದೆ ಪ್ರಸಿದ್ಧಿ ಪಡೆದಿದೆ. ತೆಂಗಳಿಯು ಬಾಣವಂಶಕ್ಕೆ ಒಳಪಟ್ಟ ಇನ್ನೊಂದು ನಾಡು. ಇಲ್ಲಿಯ ಶಾಸನಗಳು ಬಾಣ ಅರಸರ ಆಳ್ವಿಕೆಗೆ ಒಳಪಟ್ಟಿದ್ದರ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಪ್ರಾಚೀನ ಕಾಲದ ಸಾಮಾಜಿಕ ಜೀವನ, ಸ್ತ್ರೀಯರ ಸ್ಥಾನಮಾನದ ಬಗ್ಗೆ ತಿಳಿಸಲಾಗಿದೆ. ಈ ಕಾಲದಲ್ಲಿ ಸ್ತ್ರೀಯರಿಗೆ ಉನ್ನತವಾದ ಸ್ಥಾನಮಾನವಿತ್ತು. ರಾಣಿಯರು ಸಹ ಆಳ್ವಿಕೆ ಮಾಡಿ, ದಾನ ಧರ್ಮಗಳನ್ನು ಮಾಡಿದ್ದರು. ರಾಣಿಯರು ಹೆಚ್ಚಾಗಿ ಅಗ್ರಹಾರಗಳನ್ನು ನೋಡಿಕೊಳ್ಳುತ್ತಿದ್ದರು. ರಾಜ-ರಾಣಿಯರನ್ನು ಅಗ್ರಹಾರದ ಪ್ರದೇಶವನ್ನು ಆಳ್ವಿಕೆಗೆ ಬಿಟ್ಟುಕೊಟ್ಟಿದ್ದನು. ಇದು

ಮೇಲ್ನೋಟಕ್ಕೆ ಅಧಿಕಾರ ಕೊಟ್ಟರು ಇದಕ್ಕೆ ಹಿನ್ನಲೆಯಾಗಿ ನೋಡಿದರೆ ರಾಣಿಯರು ಅಗ್ರಹಾರದಾಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದುದರ ಜೊತೆಗೆ ಅವರ ಅರಿಷಡವರ್ಗಗಳನ್ನು ನಿಯಂತ್ರಣದಲ್ಲಿಡಲು ಪ್ರಯತ್ನಸಿರುವ ವಿಷಯ ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

ಅಧ್ಯಾಯ ಐದರಲ್ಲಿ ಸನ್ನತಿ ಮೌರ್ಯರ ವಾಣಿಜ್ಯ ಕೇಂದ್ರವಾಗಿತ್ತು. ಇದರಿಂದ ಮೌರ್ಯರು ಮತ್ತು ಶಾತವಾಹನರು ದೇಶ–ವಿದೇಶಗಳೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು. ಇದರಿಂದ ಆರ್ಥಿಕ ಸುಭೀಕ್ಷೆಯಿಂದ ಕೂಡಿತ್ತು. ರಾಜರು ಕೋಲು, ಕಮ್ಮಗಳ ಮುಖಾಂತರ ಈ ಭೂಮಿಯನ್ನು ಅಳೆದು ಕೊಟ್ಟ ವಿಷಯವಿದೆ. ಮತ್ತರು ೩೫೦, ಮತ್ತರು ೪೫, ನಿವೇಶನ, ಹೂದೋಟ, ಕೋಟೆ, ಭೂಮಿಗಳನ್ನು ದಾನ ಕೊಟ್ಟ ಉಲ್ಲೇಖದಿಂದ ತಿಳಿಸಲಾಗಿದೆ. ಮುಂಮ್ಮುರಿದಂಡರು, ಸೆಟ್ಟಿಗುತ್ತರು, ನಖರರು ಎಂಬ ವಿವಿಧ ವ್ಯಾಪಾರಿಗಳು ಸರಕುಗಳನ್ನು ಎತ್ತು, ಕೋಣ, ಕತ್ತೆಗಳ ಮೇಲೆ ಹೇರಿಕೊಂಡು ಹೋಗಿ ಸಂತೆ ಪಟ್ಟಣಗಳಲ್ಲಿ ವ್ಯಾಪಾರ, ವ್ಯವಸಾಯ ಮಾಡುತ್ತಿದ್ದರು. ಮುಂಮುರಿದಂಡಗಳು ಸಂತೆಯಲ್ಲಿ ಮಾರುತ್ತಿರುವ ವಿಷಯ ಈ ಅಧ್ಯಯನದಲ್ಲಿ ತಿಳಿಸಲಾಗಿದೆ. ಅಧ್ಯಾಯ ಆರರಲ್ಲಿ ಬೌದ್ಧ, ಕಾಳಾಮುಖ, ಶೈವ, ಜೈನ ಧರ್ಮದ ಬಗ್ಗೆ ತಿಳಿಸುತ್ತದೆ. ಸರ್ವಧರ್ಮ ಸಮನ್ವಯ ಹೊಂದಿದ ಕಾಲ ಕಲ್ಯಾಣ ಚಾಳುಕ್ಯರದು. ಆರನೆ ವಿಕ್ರಮಾದಿತ್ಯನು ಮೂಲತಃ ಶೈವ ಧರ್ಮದವನಾಗಿದ್ದನು. ಆತನ ರಾಣಿ ಜಾಕಲದೇವಿ ಜೈನ ಧರ್ಮದವಳಾಗಿದ್ದು, ಇಂಗಳಗಿಯಲ್ಲಿ ಜೈನ ಬಸದಿಗಳನ್ನು ಕಟ್ಟಿಸಿದಳು. ಇದರಿಂದ ರಾಜ ಜೈನ ಧರ್ಮಕ್ಕೂ ಮಾನ್ಯತೆ ನೀಡಿದ್ದನು. ಅಲ್ಲದೆ ನಾಗಾಯಿ ಪೂರ್ವದಲ್ಲಿ ಅಗ್ರಹಾರವಾಗಿದ್ದು ನಂತರದಲ್ಲಿ ಘಟಿಕಾಸ್ಥಾನವಾಗಿ ಮಾರ್ಪಟ್ಟಿತು, ಮಿತಾಕ್ಷರದ ಕರ್ತೃ ವಿಜ್ಞಾನೇಶ್ವರರು ಕಾನೂನು ಎಂಬ ಗ್ರಂಥ ರಚನೆ ಮಾಡಿ ದೇಶ–ವಿದೇಶಕ್ಕೆ ಇದೊಂದು ಬೃಹತ್ ಗ್ರಂಥ ಎಂಬುದು ಅಧ್ಯಯನದಲ್ಲಿ ತಿಳಿಸಲಾಗಿದೆ.

ಒಟ್ಟಾರೆಯಾಗಿ ಈ ತಾಲೂಕಿನ ಇತಿಹಾಸ ವಿಸ್ತಾರವಾದದ್ದು. ಹಿಗ್ಗಿದಷ್ಟು ಹಿಗ್ಗುತ್ತಾ ಹೋಗುತ್ತದೆ. ಹಾಗಾಗಿ ಪ್ರಸ್ತುತ ಪ್ರಬಂಧದಲ್ಲಿ ಚಿತ್ತಾಪುರನಲ್ಲಿರುವ ಕೆಲ ಗ್ರಾಮಗಳನ್ನು ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ವೇಳೆಗೆ ಆಕರಗಳ ಕೊರತೆ ಉಂಟಾಗಿದ್ದು, ವಿಷಯದ ಬಗ್ಗೆ ಇನ್ನು ಹೆಚ್ಚಿನ ವಿವರಣೆ ಆಗಬೇಕಾಗಿದೆ. ಆದರೆ ಮಾಹಿತಿಗಳ ಕೊರತೆ ಉಂಟಾಗಿದ್ದುದರಿಂದ ವಿಷಯವನ್ನು ಸಂಕ್ಷಿಪ್ತದಲ್ಲಿ ಹೇಳಲು ಪ್ರಯತ್ನಿಸಲಾಗಿದೆ. ಈ ತಾಲೂಕಿನ ಬಗ್ಗೆ ಇನ್ನು ಹೆಚ್ಚಿನ ಕ್ಷೇತ್ರಕಾರ್ಯ ನಡೆಯಬೇಕಾಗಿದ್ದು, ಶಾಸನಗಳು, ದೇವಾಲಯಗಳು, ಸ್ಮಾರಕಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳಕಿಗೆ ಬರಬೇಕಾಗಿದೆ. ಶಾಸನಗಳನ್ನು ರಾಜಕೀಯ ಇತಿಹಾಸ ದೃಷ್ಟಿಯಿಂದ ತಕ್ಕ ಮಟ್ಟಿಗೆ ಅಧ್ಯಯನ ಮಾಡಿದ್ದರೂ, ಸಾಂಸ್ಕೃತಿಕ ದೃಷ್ಟಿಯಿಂದ ಇನ್ನು ಸಮರ್ಪಕವಾಗಿ ನಡೆಯಬೇಕಾಗಿದೆ. ಎಲ್ಲೆಲ್ಲೂ ಚೆಲುವಿಹುದು ಬಲ್ಲವನ ಗೋಚರಕೆ ಎನ್ನುವ ಹಾಗೆ ಚಿತ್ತಾಪುರ ತಾಲೂಕು 'ಅಗೆದಷ್ಟು ಆಳ, ಮೊಗೆದಷ್ಟು ನೀರು' ಎನ್ನುವ ಹಾಗೆ ಈ ತಾಲೂಕು ನಾಡಿನ ಸಾಂಸ್ಕೃತಿಕ ಅಧ್ಯಯನದಿಂದ ನಮಗೆ ಮನದಟ್ಟು ಮಾಡಿದೆ. ಇಲ್ಲಿನ ಪ್ರಾಚೀನ ಸಂಪತ್ತುಗಳಾದ ಶಾಸನಗಳು, ದೇವಾಲಯಗಳು, ಸ್ಮಾರಕಗಳು ಹಾಗೂ ಜನಪದೀಯ ಅಂಶಗಳು ಸಂಶೋಧಕರನ್ನು ಕೈಬೀಸಿ ಕರೆಯುತ್ತಲಿವೆ.

* * * * *

## ಗ್ರಂಥಋಣ


**ಪ್ರಕಟಿತ ಗ್ರಂಥಗಳು:**

೧. ಅಶೋಕನ ಧರ್ಮ ಶಾಸನಗಳು; ರಿತ್ತಿ ಶ್ರೀನಿವಾಸ; ಪ್ರಸಾರಂಗ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೮೭

೨. ಆರನೆಯ ವಿಕ್ರಮಾದಿತ್ಯನ ಶಾಸನಗಳು; ನಾಗಯ್ಯ ಜೆ.ಎಂ; ವೀರಶೈವ ಅಧ್ಯಯನ, ಅಕಾಡೆಮಿ; ಬೆಳಗಾವಿ; ೧೯೯೨

೩. ಇತಿಹಾಸ ದರ್ಶನ ಸಂ.೨; ಕುಲಕರ್ಣಿ ವಿ.ಎಸ್; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು;೧೯೯೭

೪. ಇತಿಹಾಸ ದರ್ಶನ ಸಂ.೮; ಪೋತದಾರ ವಿಠಲ; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು; ೧೯೯೩

೫. ಇತಿಹಾಸ ದರ್ಶನ ಸಂ.೧೦; ತಳವಾರ ಹೆಚ್.ಟಿ; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು; ೧೯೯೫

೬. ಇತಿಹಾಸ ದರ್ಶನ ಸಂ.೧೧; ಗೋಗಿ ಹನುಮಾಕ್ಷಿ; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು;೧೯೯೬

೭. ಇತಿಹಾಸ ದರ್ಶನ ಸಂ.೧೨; ನಾಗಭೂಷಣ ಸಿ.; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು; ೧೯೯೭

೮. ಇತಿಹಾಸ ದರ್ಶನ ಸಂ.೧೨; ಗೋಗಿ ಹನುಮಾಕ್ಷಿ; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು;೧೯೯೭

೯. ಇತಿಹಾಸ ದರ್ಶನ ಸಂ.೧೫; ಷಡಕ್ಷರಯ್ಯ ರು. ಮ; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು; ೨೦೦೦

೧೦.ಐತಿಹಾಸಿಕ ಭಾಷಣಗಳು; ಮಾಲಗಿತ್ತಿ ವ್ಹಿ.ಸಿ; ಮಾಲಗಿತ್ತಿ ಆಫ್‌ಸೆಟ್ ಪ್ರಿಂಟರ್ ಮತ್ತು ಪ್ರಕಾಶಕರು, ಸದಾಶಿವನಗರ, ಬೆಳಗಾವಿ;೧೯೯೫

೧೧.ಕರ್ನಾಟಕದಲ್ಲಿ ಅಶೋಕನ ಶಾಸನಗಳು; ಮಂಜಪ್ಪ ಶೆಟ್ಟಿ, ಎಂ.ಪಿ.; ಮಸಗಲಿ ಪ್ರಕಾಶನ, ಮೈಸೂರು; ೧೯೯೧

೧೨.ಕರ್ನಾಟಕದಲ್ಲಿ ಪುರಾತನ ವಿದ್ಯಾ ಕೇಂದ್ರಗಳು; ನಾಗರಾಜ ಮೈ. ನ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ನೃಪತುಂಗ ರಸ್ತೆ, ಬೆಂಗಳೂರು; ೧೯೮೩

೧೩.ಕರ್ನಾಟಕ ಸಂಗತಿ; ಬರಗೂರ ರಾಮಚಂದ್ರಪ್ಪ; ರಶ್ಮಿ ಟೈಮೊಸೆಟ್ ಸುಧಾಮನಗರ, ಬೆಂಗಳೂರು; ೨೦೦೨

೧೪.ಕರ್ನಾಟಕ ಚರಿತ್ರೆ ಸಂ.೧; ಶೇಕಅಲಿ ಬಿ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೧೯೯೭

೧೫.ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ; ಚಂದ್ರಶೇಖರಯ್ಯ ಬಿ.ಎಂ; ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು; ೨೦೦೫

೧೬.ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ; ನಾಗಭೂಷಣ ಸಿ.; ಸ್ನೇಹಾ ಪ್ರಿಂಟರ್ಸ್, ಅತ್ತಿಗುಪ್ಪೆ ವಿಜಯನಗರ ಬೆಂಗಳೂರು ; ೧೯೯೯

೧೭. ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು; ಶಿವಾನಂದ ವ್ಹಿ.; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ;೧೯೭೮

೧೮. ಕರ್ನಾಟಕದ ಪರಂಪರೆ I; ದಿವಾಕರ್ ಆರ್. ಆರ್.; ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ ಮೈಸೂರು ಸರಕಾರ, ಬೆಂಗಳೂರು;೧೯೭೦.

೧೯. ಕರ್ನಾಟಕದ ಸಂಕ್ಷಿಪ್ತ ಚರಿತ್ರೆ; ರಂಗಸ್ವಾಮಯ್ಯ ಜಿ. ಆರ್.; ಚೇತನ ಬುಕ್ ಹೌಸ್, ಅಕ್ಕಮಹಾದೇವಿ ರಸ್ತೆ, ದಾವಣಗೆರೆ; ೨೦೦೧.

೨೦. ಕರ್ನಾಟಕದ ಇತಿಹಾಸ ದರ್ಶನ; ಕೃಷ್ಣರಾವ್ ಎಂ.ವಿ.; ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ಚಾಮರಾಜಪೇಟೆ, ಬೆಂಗಳೂರು; ೧೯೭೦.

೨೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೧; ಕಾಮತ್ ಸೂರ್ಯನಾಥ; ಪರಿಶ್ರೀ ಪ್ರಿಂಟರ್ ೧೦೦/೩, ನಾಗಪ್ಪ ರಸ್ತೆ, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು; ೧೯೮೪.

೨೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೩; ಕಾಮತ್ ಸೂರ್ಯನಾಥ; ಕರ್ನಾಟಕ ರಾಜ್ಯ ಸರಕಾರ; ಬೆಂಗಳೂರು; ೧೯೮೬.

೨೩. ಕರ್ನಾಟಕದ ಇತಿಹಾಸ; ಸಂಕನಗೌಡ ಎಸ್.ಬಿ.; ವಿದ್ಯಾನಿಧಿ ಪ್ರಕಾಶನ, ಗದಗ; ೧೯೮೪.

೨೪. ಕರ್ನಾಟಕದ ಪುರಾತತ್ವ ನೆಲೆಗಳು; ಶಿವತಾರಕ್ ಕೆ.ಬಿ.; ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೧.

೨೫. ಕಲ್ಯಾಣ ಚಾಲುಕ್ಯರು; ರಾಮರಾವ್ ಎಸ್.; ಪಿ.ಎನ್.ಕಾಮತ್, ಗಾಂಧಿನಗರ, ಬೆಂಗಳೂರು; ೧೯೭೫.

೨೬. ಕರ್ನಾಟಕ ಇತಿಹಾಸ ಸಂಪುಟ ೧; ಪಂಚಮುಖಿ ಆರ್.ಎಸ್.; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೬೭.

೨೭. ಕಲ್ಲರಳಿ ಹೂವಾಗಿ; ಪಾಟೀಲ್ ಎಂ.ಎಸ್.; ಸ್ವಾಗತ ಸಮಿತಿ ಕಲಬುರ್ಗಿ ಜಿಲ್ಲಾ ಆರನೆ ಕನ್ನಡ ಸಾಹಿತ್ಯ ಸಮ್ಮೇಳನ, ಚಿತ್ತಾಪುರ; ೨೦೦೦.

೨೮. ಕಲಬುರ್ಗಿ ಜಿಲ್ಲೆಯ ಶಾಸನಗಳು; ಗೋಗಿ ಹನುಮಾಕ್ಷಿ; ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ; ೧೯೯೬.

೨೯. ಕರ್ನಾಟಕದಲ್ಲಿ ಪುರಾತತ್ವ ಶೋಧನೆ; ನರಸಿಂಹ ಮೂರ್ತಿ ಎ.ವಿ.; ಕನ್ನಡ ಸಂಸ್ಕೃತಿ ನಿರ್ದೇಶನಾಲಯ ನೃಪತುಂಗ ರಸ್ತೆ, ಬೆಂಗಳೂರು; ೧೯೮೩.

೩೦. ಕದಂಬ-ಗಂಗರ ಇತಿಹಾಸ; ನಂಜುಂಡಸ್ವಾಮಿ ಎ.ಎಸ್.; ಮನೋಹರ್ ಘಾಣೇಕರ ಸಮಾಜ ಪುಸ್ತಕಾಲಯ, ಧಾರವಾಡ; ೨೦೦೪.

೩೧. ಕನ್ನಡ ಶಾಸನ ಶಿಲ್ಪ; ಪರಮಶಿಮೂರ್ತಿ ಡಿ. ವಿ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೧೯೯೯.

೩೨. ಕಲಬುರ್ಗಿ ಜಿಲ್ಲಾ ದರ್ಶನ; ಸಂ. ಭಾಸ್ಕರ್ ಟಿ.ಎಂ.; ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ; ೨೦೦೫.

೩೩. ಕನ್ನಡ ಶಾಸನಗಳು; ಗೋಪಾಲ ಬಾ. ರಾ.; ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ, ಬೆಂಗಳೂರು; ೨೦೦೪.

೩೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ; ಚಿದಾನಂದ ಮೂರ್ತಿ ಎಂ.; ಸಪ್ನ ಬುಕ್ ಹೌಸ್ ಗಾಂಧಿನಗರ, ಬೆಂಗಳೂರು; ೨೦೦೨.

೩೫.ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೨; ದೇವರಕೊಂಡಾರೆಡ್ಡಿ; ಕನ್ನಡ ವಿಶ್ವ ವಿದ್ಯಾಲಯ, ಹಂಪಿ; ೧೯೯೯.

೩೬.ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೭; ದೇವರಕೊಂಡಾರೆಡ್ಡಿ; ಕನ್ನಡ ವಿಶ್ವ ವಿದ್ಯಾಲಯ, ಹಂಪಿ; ೨೦೦೩.

೩೭.ಕನ್ನಡ ಶಾಸನಗಳ ಅಧ್ಯಯನ;ಭಗವತಿ ಎಸ್.ಎಸ್; ವಿದ್ಯಾನಿಧಿ ಪ್ರಕಾಶನ, ಗದಗ;೨೦೦೪.

೩೮.ಕರ್ನಾಟಕ ಕೈಗನ್ನಡಿ;ಸೂರ್ಯನಾಥ ಕಾಮತ;ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು;೨೦೦೭.

೩೯.ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್; ಪಾಟೀಲ ಎಂ.ಬಿ.; ಕರ್ನಾಟಕ ರಾಜ್ಯ ಸರಕಾರ ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು; ೧೯೯೭.

೪೦.ತ್ರಿಭುವನಮಲ್ಲ (ಐತಿಹಾಸಿಕ ಕಾದಂಬರಿ); ಪುರಾಣಿಕ ಸಿದ್ಧಯ್ಯ; ಗುರುಕುಮಾರ ಪ್ರಕಾಶನ ನಾಲ್ಕನೆ ಅಡ್ಡರಸ್ತೆ ಕೃಷ್ಣರಾಜ ಮೊಹಲ್ಲ, ಮೈಸೂರು; ೧೯೮೫.

೪೧.ದಕ್ಷಿಣ ಭಾರತದ ಇತಿಹಾಸ; ಬಸವರಾಜು ಹೆಚ್. ಎಂ.; ಸಿದ್ದಿವಿನಾಯಕ ಬ್ಲಾಕ್, ಟೀಚರ್ಸ್ ಲೇಔಟ್, ಮೈಸೂರು; ೨೦೦೫.

೪೨.ಪ್ರಾಚೀನ ಭಾರತ; ಪ್ರೊ. ಶರಣಶರ್ಮ ರಾಮ್; ನವಕರ್ನಾಟಕ ಪಬ್ಲಿಕೇಷನ್ಸ್, ಪ್ರೈವೇಟ್ ಲಿಮಿಟೆಡ್, ಗದಗ; ೧೯೯೭.

೪೩.ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ; ಗಾಯಕವಾಡ ಜಯದೇವಿ; ಅಮರ ಪ್ರಕಾಶನ, ಗುಲಬರ್ಗಾ; ೨೦೦೨.

೪೪.ಭಾರತೀಯ ಶಾಸನಶಾಸ್ತ್ರ ಪರಿಚಯ; ಫ್ಲೀಟ್ ಜೆ. ಎಸ್.; ಲಕ್ಷ್ಮಿ ಪ್ರಿಂಟಿಂಗ್, ಕಾಳಮ್ಮನ ಗುಡಿ ಬೀದಿ ಮೈಸೂರು; ೨೦೦೧.

೪೫.ಬಾದಾಮಿ ಸಾಂಸ್ಕೃತಿಕ ಅಧ್ಯಯನ; ಪತ್ತಾರ ಶೀಲಾಕಾಂತ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೦.

೪೬.ಬಿಡುಗಡೆ; ಪೋಲಿಸ್ ಪಾಟೀಲ ಬಸವರಾಜ; ಶಶಿಕಲಾ ಬಿ. ಪಾಟೀಲ, ಬಡೇಪುರ ಕಾಲೋನಿ, ವಿಶ್ವವಿದ್ಯಾಲಯ ಮಾರ್ಗ, ಗುಲಬರ್ಗಾ; ೨೦೦೨.

೪೭.ಮಿತಾಕ್ಷರದ ವಿಜ್ಞಾನೇಶ್ವರರು ಹಾಗೂ ಮರತೂರಿನ ಶಾಸನ; ಜಾಗೀರ್‌ದಾರ್ ಸೀತಾರಾಮ; ವಿಜ್ಞಾನೇಶ್ವರ ಸೌಹಾರ್ದ ಸಹಕಾರಿ (ನಿ), ಗುಲಬರ್ಗಾ; ೨೦೦೪.

೪೮.ಮುದನೂರು ಮತ್ತು ಯಡ್ರಾಮಿ ಶಾಸನಗಳು; ಸಂ. ಹಿರೇಮಠ್ ಬಿ. ಆರ್.; ಶಿವಚಂದ್ರ ಪ್ರಕಾಶನ ಕಾರ್ತಿಕ ಶ್ರೀ ಹೆಚ್. ಐ. ಜಿ. ೨೭ ನವನಗರ, ಹುಬ್ಬಳ್ಳಿ.; ೧೯೯೪.

೪೯.ರಾಯಚೂರು-ಕೊಪ್ಪಳ ಜಿಲ್ಲೆಯ ಶಾಸನಗಳು; ಸಂ. ಹಿರೇಮಠ ಚೆನ್ನಬಸವ; ಚೇತನ ಪ್ರಕಾಶನ ಮಸ್ಕಿ, ರಾಯಚೂರು ; ೧೯೯೯.

೫೦.ವಿಜ್ಞಾನೇಶ್ವರ ಮಿತಾಕ್ಷರ; ಸಿರಸೂರಕರ್ ಶ್ರೀನಿವಾಸ; ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ; ೨೦೦೫.

೫೧.ಶಾಸನಗಳಲ್ಲಿ ಶಿವಶರಣರು; ಕಲಬುರ್ಗಿ ಎಂ. ಎಂ.; ಸಿರಿಗನ್ನಡ ಪ್ರಕಾಶನ ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೭೦.

೫೨. ಶ್ರೀ ಚಂದ್ರಲಾಂಬಾ ಸನ್ನತಿ ದರ್ಶನ; ದೇಶಪಾಂಡೆ ಭೀಮಾಶಂಕರ; ಬೆಂಗಳೂರು; ೧೯೬೬.

೫೩. ಶ್ರೀ ಚಂದ್ರಲಾಪರಮೇಶ್ವರಿ; ಕಪಟರಾಳ ಕೃಷ್ಣರಾವ; ಉಷಾ ಸಾಹಿತ್ಯ ಮಾಲೆ, ಮೈಸೂರು; ೧೯೭೦.

೫೪. ಶಾಸನಗಳಲ್ಲಿ ಕರ್ನಾಟಕದ ವರ್ತಕರು; ಹಿರೇಮಠ ಬಿ. ಆರ್; ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೮೬.

೫೫. ಶಾಸನ ಶಾಸ್ತ್ರ ಪ್ರವೇಶ; ಸಿ.ಪಿ.ಕೆ; ಅಂಜನಾದ್ರಿ ರೇಣುಕಾಚಾರ್ಯ ದೇವಸ್ಥಾನ, ಮೈಸೂರು; ೨೦೦೧.

೫೬. ಶಾಸನ ಪರಿಭಾಷೆ; ಹಿರೇಮಠ ಎಸ್.ಎಂ.; ವಿದ್ಯಾನಿಧಿ ಪ್ರಕಾಶನ, ಗದಗ; ೨೦೦೬.

೫೭. ಶಾಸನ ಸಾಹಿತ್ಯ ಸಂಚಯ; ಅಣ್ಣಿಗೇರಿ ಎ. ಎಮ್.; ಕನ್ನಡ ಸಂಶೋದನ ಸಂಸ್ಥೆ, ಧಾರವಾಡ; ೧೯೬೧.

೫೮. ಶಾಸನ ಪರಿಚಯ; ಶೇಷಶಾಸ್ತ್ರಿ ಆರ್.; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು; ೨೦೦೫.

೫೯. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ; ಎಲಿಗಾರ ಚೆನ್ನಕ್ಕ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೯೦.

೬೦. ಶಾಸನ ಅಧ್ಯಯನ ಸಂ. ೨, ಸಂಚಿಕೆ ೧; ಭಟಸೂರಿ ಕೆ. ಜಿ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೫.

೬೧. ಶಾಸನಗಳು: ಒಂದು ಸಮೀಕ್ಷೆ (ಶಾಹಪೂರ ತಾ); ವನದುರ್ಗ ರಂಗರಾಜ; ಸಗರನಾಡು ಅಧ್ಯಯನ ಸಂಸ್ಥೆ, ಶಹಪುರ; ೧೯೯೬.

೬೨. ಶಾಸನ ಸಂಗ್ರಹ; ಅಣ್ಣಿಗೇರಿ ಎ. ಎಂ.; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ೧೯೯೯ (೪ನೇ ಮುದ್ರಣ).

೬೩. ಷಡಕ್ಷರ; ಹೊಸಮನಿ ಗಿರಿರಾಜ; ಷಡಕ್ಷರಪ್ಪ ಅಭಿನಂದನಾ ಸಮಿತಿ, ಮಸ್ಕಿ; ೨೦೦೧.

೬೪. ಸಂಶೋಧನಾ; ಪ್ರೊ. ಲಕ್ಷ್ಮಣ ತೆಲಗಾವಿ; ಡಾ. ಚಿದಾನಂದ ಮೂರ್ತಿ ಗೌರವ ಸಂಪುಟ, ಪ್ರಕಟಣ ಸಮಿತಿ, ಬೆಂಗಳೂರು; ೧೯೯೧.

೬೫. ಸಮಗ್ರ ಭಾರತದ ಇತಿಹಾಸ; ಸದಾಶಿವ. ಕೆ; ಪ್ರಿಯದರ್ಶಿನಿ ಪ್ರಕಾಶನ, ಮೈಸೂರು; ೧೯೯೭.

೬೬. ಸಾಹಿತ್ಯ ಸಂಶೋಧನಾ ಮಾರ್ಗ; ಸವದತ್ತಿ ಮಠ, ಸಂಗಮೇಶ; ರೂಪರಶ್ಮಿ ಪ್ರಕಾಶನ, ಕಲಬುರ್ಗಿ; ೧೯೯೮.

೬೭. ಸುರಪುರ ತಾಲೂಕಿನ ಶಾಸನಗಳು; ಗೋಗಿ ಹನುಮಾಕ್ಷಿ; ಮಹಿಳಾ ಸಾಹಿತ್ಯಕಾ ನವನಗರ ಹುಬ್ಬಳ್ಳಿ; ೧೯೯೫.

೬೮. ಹೈದ್ರಾಬಾದ ಕರ್ನಾಟಕ ಹಾಡುಪಾಡು; ನುಗಡೋಣಿ ಅಮರೇಶ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೩.

೬೯. ಹೈದ್ರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು; ಶಿವಾನಂದ ವ್ಹಿ.; ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ; ೧೯೯೨.

**ಇಂಗ್ಲೀಷ್ ಆಕರ ಗ್ರಂಥಗಳು**


1. Andhra Pradesh Government Archaeological series No.3 'Kannada Inscriptions of Andhra Pradesh; Desai P.B.; The Government of Andhra Pradesh, Hyderabad; 1961.
2. Jainism in South India and some Jaina Epigraphs; Desai P. B.; Gulabchand Hirachand Doshi Jaina Samskrti Samrakshaka Sangha, Sholapur; 1957.
3. Buddist Monuments at Sannati; Sheshadri M.; The quatrely general of the Mithik Society, Bangalore; 1965.
4. Buddist Monuments in Mysore; Sheshadri. M; Artibus Assiye, Bangalore; 1972.
5. A New Buddist Centre; Desai P. B; The general of Karnataka University, Social Science, Dharwad; 1968.
6. Excavation at Sannti; Sundar A; Archaeology Vol 17, New Delhi; 1988.
7. Select Inscriptions bearing on Indian History and civilization Vol. 1.; Sarkar B. C, Kolkota; 1965.


**ಎಂ.ಫಿಲ್, ಪಿಹೆಚ್.ಡಿ. ಮಹಾಪ್ರಬಂಧಗಳು:**


೧. ಗಬ್ಬೂರ ಶಾಸನಗಳು ಮತ್ತು ದೇವಾಲಯಗಳು; ಮಹೇಶ; ೨೦೦೨.

೨. ಬಾಗಳ್ಳಿ ಸಾಂಸ್ಕೃತಿಕ ಅಧ್ಯಯನ; ಭಾರತಿ ಅಳವಂಡಿ; ೨೦೦೩

೩. ರಾಷ್ಟ್ರಕೂಟ ಶಾಸನಗಳು ಸಾಂಸ್ಕೃತಿಕ ಅಧ್ಯಯನ; ಭಾರತಿ ಬಿ. ಆರ್.; ೨೦೦೨.

೪. ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಳುಕ್ಯ ದೇವಾಲಯಗಳು; ಗೋಪಾಲರಾವ್; ಎಚ್.ಎಸ್. ೧೯೯೩.

೫. ಸುರಪುರ; ವಿಮೋಚನಾ ಹೋರಾಟ; ಶುಭಾ; ೨೦೦೬.

೬. ಸೊಂಡುರು ಶಾಸನಗಳು ಮತ್ತು ದೇವಾಲಯಗಳು; ಗಿರಿಜಾ; ೨೦೦೩.

೭. ಹಂಪಿ ಶಾಸನಗಳು ಮತ್ತು ದೇವಾಲಯಗಳು; ಶಿವಲೀಲಾ ಕೆ. ; ೨೦೦೩.

೮. ಹುಲುಕಡಿನಾಡು; ಒಂದು ಸಾಂಸ್ಕೃತಿಕ ಅಧ್ಯಯನ; ಮುನಿರಾಜು ಕೆ ; ೨೦೦೨.


**ನಿಯತ ಕಾಲಿಕ ಪತ್ರಿಕೆಗಳು**


೧. ವಿಜಯ ಕರ್ನಾಟಕ ; ೨೦೦೬.

೨. ಸಂಜೆವಾಣಿ ;೨೦೦೬.

೩. ಸಂಯುಕ್ತ ಕರ್ನಾಟಕ; ೨೦೦೭

೪. ವಿಜಯ ಕರ್ನಾಟಕ ; ೨೦೦೭


* * * * *

# ಚಿತ್ತಾಪುರ





ಶಾಂತಲಿಂಗೇಶ್ವರ , ಕಲ್ಲೇಶ್ವರ, ರಾಮೇಶ್ವರ ದೇವಾಲಯ, ದಿಗ್ಗಾಂವ



ಸೋಮೇಶ್ವರ ದೇವಾಲಯ, ದಿಗ್ಗಾಂವ



ತ್ರೈಪುರುಷ ಘಟಿಕಾ ಸ್ಥಾನ, ನಾಗಾಯಿ



60 ಕಂಬದ ದೇವಾಲಯ, ನಾಗಾಯಿ



ಲೋಕೇಶ್ವರ, ಕಂನ್ನೇಶ್ವರ ದೇವಾಲಯಗಳು, ಇಂಗಳಗಿ



ಜೈನ ಬಸದಿ, ಇಂಗಳಗಿ



ಸೂರ್ಯನಾರಾಯಣ ದೇವಾಲಯ , ಕಾಳಗಿ



ತ್ರಿಕೂಟ ಬಸದಿ, ಕಾಳಗಿ



ಕಾಳಿಂಗೇಶ್ವರ ದೇವಾಲಯ, ಮರತೂರ



ಕ್ರಿ.ಶ 1124ರ ಮರತೂರ ಶಾಸನ

